


ನೂರಾರು ವರ್ಷಗಳ ಹಿಂದೆ ಅವಂತೀ ನಗರದಲ್ಲಿ ಒಬ್ಬ ಮುದುಕನಾದ ವರ್ತಕನಿದ್ದನು. ಅವನು ಪ್ರಾಯ ಸಮರ್ಥನಾಗಿದ್ದ ಕಾಲದಲ್ಲಿ ಖಂಡಾಂತರ ದೊಳಗಿನ ಅನೇಕ ದೇಶಗಳನ್ನು ತಿರುಗಿ, ಸಮುದ್ರ ವ್ಯಾಪಾರದಿಂದ ಹೇರಳ ಧನವನ್ನು ಸಂಪಾದಿಸಿದ್ದನು. ಕಾಲಕ್ರಮದಲ್ಲಿ ವಯಸ್ಸಿಗೆ ಅನುಗುಣವಾಗಿ ಶಕ್ತಿ ಕಡಿಮೆಯಾಯಿತು. ತಾನು ಇನ್ನು ಹೆಚ್ಚು ಶ್ರಮ ಪಡಲು ಸಾಧ್ಯವಿಲ್ಲವೆನಿಸಿತು.

ಅವನು ತನ್ನ ವ್ಯಾಪಾರ ವೃತ್ತಿಯನ್ನು ಮಕ್ಕಳ ಮೇಲೆ ಸರಿಸಬೇಕೆಂದು ಪ್ರಯತ್ನಿಸಿದನು. ಆದರೆ ಅವನ ಮೂವರು ಕುಮಾರರಲ್ಲಿ ದೊಡ್ಡವರಾಗಿರುವ ಜೀವದತ್ತ ಮತ್ತು ಲಕ್ಷದತ್ತರು ಕೇವಲ ಹೊಣೆ ಗೇಡಿಗಳಾಗಿದ್ದರು. ಅವರಿಬ್ಬರು ಯಾವುದಕ್ಕೂ ಉಪಯೋಗವಿಲ್ಲದ ಪೋಲಿಗಳು.

ಹೆಸರಿಗಷ್ಟೇ ಹಿರಿಯ ಮಕ್ಕಳಾಗಿರುವ ಜೀವದತ್ತ ಲಕ್ಷದತ್ತರು ಮನೆಯಲ್ಲಿಯ ಯಾವ ಆಗು ಹೋಗು ಗಳಿಗೂ ಮನೆಯಲ್ಲಿರುತ್ತಿರಲಿಲ್ಲ. ಕೆಟ್ಟ ಅಭ್ಯಾಸ ಗಳನ್ನು ಹಿಡಿದು ಎಲ್ಲೆಲ್ಲೋ ತಿರುಗಿಕೊಂಡಿರುವವರು. ಮೂರನೆಯವನಾದ ಪಿಂಗಳನಿಗೆ ಮಾತ್ರ ಇನ್ನೂ ಇಪ್ಪತ್ತು ವರ್ಷ ಕೂಡ ತುಂಬಿರದಿದ್ದರೂ, ಒಳ್ಳೆಯ ತನದಲ್ಲಿ ಮನೆಯಲ್ಲಿ ತಂದೆ ತಾಯಿಗಳಿಗೆ ವಿಧೇಯ ನಾಗಿರುವನು. ಆದರೆ ದೊಡ್ಡ ವ್ಯಾಪಾರ ವ್ಯವಹಾರ ಗಳ ಹೊರೆಯನ್ನು ತಾಳಿಕೊಳ್ಳಲು ಅವನಿಗೆ ಇನ್ನೂ ವಯಸ್ಸಾಗಬೇಕಿತ್ತು.

ಈ ಚಿಂತೆಯಿಂದ ಮುದುಕ ವರ್ತಕನು ಹಾಸಿಗೆ ಹಿಡಿದನು. ಒಂದು ಬಗೆಯ ನಿರಾಶೆಯ ವೈರಾಗ್ಯ ಅವನನ್ನು ಆವರಿಸಿ, ತನ್ನ ಯಾವತ್ತೂ ಆಸ್ತಿಯನ್ನು ಮೂವರು ಮಗಂದಿರಿಗೂ, ಹೆಂಡತಿಗೂ ಸಮನಾಗಿ ಹಂಚಿ ಕೊಟ್ಟುಬಿಟ್ಟನು. ಆ ಮೇಲೆ ಒಂದು ದಿನ ಅವನು ತೀರಿಹೋದನು.

ತಂದೆ ತೀರಿಹೋದ ಕೂಡಲೇ ದೊಡ್ಡವರಾದ ಜೀವದತ್ತ, ಲಕ್ಷದತ್ತರು ತಮ್ಮ ಪಾಲಿಗೆ ಬಂದ ಆಸ್ತಿಯನ್ನು ಸ್ವೇಚ್ಛೆಯಾಗಿ ಖರ್ಚು ಮಾಡ ತೊಡಗಿದರು. ತನ್ನ ದೊಡ್ಡ ಮಗಂದಿರಿಬ್ಬರೂ



ಅಪ್ರಯೋಜಕರೆಂದು ತಿಳಿದು ತಾಯಿ, ತನ್ನ ಪಾಲಿಗೆ ಬಂದ ಆಸ್ತಿಯೊಂದಿಗೆ ಚಿಕ್ಕಮಗನಾದ ಪಿಂಗಳನ ಮನೆಗೆ ಹೋಗಿ, ಅವನೊಂದಿಗೆ ವಾಸಿಸಲು ತೊಡಗಿದಳು.

ಜೀವದತ್ತ, ಲಕ್ಷದತ್ತರು ಸುಮ್ಮನೆ ಖರ್ಚು ಮಾಡುತ್ತಾ ಇದ್ದರೆ ಎಷ್ಟು ಕಾಲ ನಡೆದೀತು? ಹಣವೆಲ್ಲ ಬೇಗನೆ ಕರಗಿಹೋದ ಕೂಡಲೇ, ತಾಯಿಯನ್ನು ನೆನೆದುಕೊಂಡು ಪಿಂಗಳನ ಮನೆಗೆ ಬಂದರು. ಅಪೂರ್ವವಾಗಿ ಬಂದ ಅಣ್ಣಂದಿರನ್ನು ಪಿಂಗಳನು ಬಹಳ ಆದರದಿಂದ ಬರಮಾಡಿಕೊಂಡನು. ಆದರೆ ಅವರಿಬ್ಬರೂ ಅವನ ಆದರವನ್ನು ಅಲಕ್ಷ್ಯಮಾಡಿ, ಬದಿಗೆ ದೂಡಿ, ಸೀದಾ ಒಳಗೆ ತಾಯಿಯ ಹತ್ತಿರ ಹೋಗಿ ಆಕೆಯನ್ನು ತಮ್ಮ ಮನೆಗೆ ಬಂದು ಇರಬೇಕೆಂದು ಕರೆದರು.

ಆದರೆ ತಾಯಿಗೆ ತನ್ನ ದೊಡ್ಡ ಮಕ್ಕಳ ಸ್ವಭಾವ ಗೊತ್ತೇ ಇದ್ದಿತು. ತನ್ನ ಮೇಲೆ ಅವರಿಗೆ ಪ್ರೀತಿಯೋ ಗೌರವವೋ ಸ್ವಲ್ಪವೂ ಇಲ್ಲ. ಅವರು ತನ್ನನ್ನು ಅವರ ಮನೆಗೆ ಬಂದಿರಲು ಕರೆಯುವುದರ ರಹಸ್ಯವೇನೆಂಬುದೂ ಅವಳಿಗೆ ಗೊತ್ತು. ,ತನ್ನ ಗಂಡನು ತನಗೆ ಕೊಟ್ಟ ಧನಕ್ಕಾಗಿಯೇ ಈ ಬಗೆಯ ಆದರವನ್ನು ನಟಿಸುತ್ತಿದ್ದಾರೆ. ಆದರೂ ಅವಳು ಒಳ್ಳೆಯತನದಲ್ಲೇ ಅವರೊಂದಿಗೆ ಮಾತಾಡುತ್ತಾ, "ಅಪ್ಪಗಳಿರಾ, ನೀವಿಬ್ಬರೂ ದೊಡ್ಡವರು. ನಿಮ್ಮ ಜೀವಿತವನ್ನು ಹೇಗೆ ರೂಪಿಸಿಕೊಳ್ಳಬೇಕೆಂಬುದೆಲ್ಲಾ ನಿಮಗೆ ತಿಳಿದಿದೆ. ಆದರೆ ಪಿಂಗಳನು ನಿಮ್ಮ ಹಾಗಲ್ಲ. ಇನ್ನೂ ಹುಡುಗಾಟದ ವಯಸ್ಸು. ಆದುದರಿಂದ ನಾನು ಅವನ ಹತ್ತಿರ ಇರುವುದೇ ಎಲ್ಲದಕ್ಕೂ ಒಳ್ಳೆಯದು. ಸುಖವೋ ಕಷ್ಟವೋ, ನನಗೆ ಇಲ್ಲೇ ಹಿಡಿಸಿಹೋಯಿತು. ಸುಮ್ಮನೆ ಒತ್ತಾಯ ಮಾಡಬೇಡಿ" ಎಂದಳು.

ಅದಕ್ಕೆ ಹಿರಿಯರಿಬ್ಬರೂ ರೇಗಿಕೊಂಡು, "ಹಾಗಿದ್ದರೆ ನೀನು ಅವನ ಹತ್ತಿರವೇ ಇರು. ನಾವೇಕೆ ಬೇಡವೆನ್ನುವೆವು? ಆದರೆ ನಮ್ಮ ತಂದೆ ನಿನ್ನ ಹೆಸರಿನಲ್ಲಿ ಇಟ್ಟಿರುವ ಆಸ್ತಿಯಲ್ಲಿ ನಮಗೆ ಭಾಗವಿದೆಯಷ್ಟೇ! ಆ ನಮ್ಮ ಭಾಗವನ್ನು ನಮಗೆ ಕೊಟ್ಟುಬಿಡು. ಅಷ್ಟಾದರೂ ಮಾಡು." ಎಂದರು.

"ನಾನು ಬದುಕಿರುವಾಗ ಅದರಲ್ಲಿ ನಿಮಗೆ ಪಾಲು ಹೇಗೆ ಬಂದೀತು?" ಎಂದಳು ತಾಯಿ ಆಶ್ಚರ್ಯದಿಂದ.

"ಆ ಭಾಗವನ್ನು ಈಗ ನೀನು ಕೊಡದಿದ್ದರೆ, ಆ ಮೇಲೆ ಅದು ನಮಗೆ ಸಿಗುವುದೆಂಬ ಆಶೆಯಿಲ್ಲ. ಆ ಧನವನ್ನೆಲ್ಲ ಪಿಂಗಳನೊಬ್ಬನೇ ವಶಪಡಿಸಿಕೊಂಡು ನಿನ್ನನ್ನು ಕೇಳುವವರಿಲ್ಲದ ಸ್ಥಿತಿಗೆ ದೂಡಿದರೆ ನಮ್ಮ ಗತಿ ಏನಾಗಬೇಕು? ಅದಕ್ಕೇ ಈಗಲೇ ಕೊಟ್ಟರೆ ಪಿಂಗಳನು ನಿನ್ನ ಕೈಬಿಟ್ಟರೆ, ನಾವು ನಿನ್ನನ್ನು ಕಾಪಾಡೇವು." ಎಂದರು ಹಿರಿಯ ಮಗಂದಿರು.

ಅಣ್ಣಂದಿರು ಈ ವಿಧವಾಗಿ ಮಾತಾಡುವುದನ್ನು ಕೇಳುತ್ತಿದ್ದ ಪಿಂಗಳನಿಗೆ ಸಹಿಸಲಾಗಲಿಲ್ಲ. ತನಗೆ

ದೊಡ್ಡ ಅವಮಾನವಾದಂತೆ ತೋರಿತು. ಅವನು ತಾಯಿಯ ಹತ್ತಿರ ಬಂದು, "ಅಮ್ಮಾ, ನೀನು ಬೇಕಾದರೆ ಅಣ್ಣಂದಿರ ಹತ್ತಿರವೇ ಹೋಗು. ನಿನ್ನ ಆಸ್ತಿಯಲ್ಲಿ ಒಂದು ಚಿಕ್ಕಾಸು ಕೂಡಾ ನನಗೆ ಬೇಡ. ನನ್ನ ಪಾಲನ್ನು ಕೂಡಾ ಅವರಿಗೇ ಕೊಟ್ಟು ಬಿಡು. ನನ್ನ ಜೀವನ ನಾನೇ ನೋಡಿಕೊಂಡೇನು, ಆ ಚಿಂತೆ ಬಿಡು" ಎಂದನು.

ತಾಯಿ ಪಿಂಗಳನ ಮಾತನ್ನು ಒಪ್ಪಿಕೊಳ್ಳಲಿಲ್ಲ. ಆಗ ದೊಡ್ಡ ಮಗಂದಿರಿಗೆ ಇನ್ನಷ್ಟು ಕೋಪವೇರಿತು. ಕೋಲು ತೆಗೆದುಕೊಂಡು ತಮ್ಮೊಂದಿಗೆ ಹೊರಡು ವಿಯೋ ಇಲ್ಲವೋ ಎನ್ನುತ್ತ ತಾಯಿಯನ್ನು ಬಡಿಯ ತೊಡಗಿದರು. ಚಿಕ್ಕವನಾದ ಪಿಂಗಳನು ಅವರಿಗೆ ಅಡ್ಡ ಬಂದು ತಡೆಯಲು, ಅವರು ಮತ್ತಷ್ಟು ರೊಚ್ಚಿಗೆದ್ದು ಅವನನ್ನೂ ಚಚ್ಚಿ ಹಾಕಿದರು.




ತಾಯಿ ಹೇಗೋ ಉಪಾಯವಾಗಿ ಮನೆಯಿಂದ ಹೊರಬಿದ್ದು ನೆರೆಹೊರೆಯವರನ್ನು ಕರೆದುಕೊಂಡು ಬಂದಳು. ಅವರೆಲ್ಲ ಬಂದು ದೊಡ್ಡಣ್ಣಂದಿರನ್ನು ಬಿಡಿಸಿ, ಬೈದು ಬುದ್ಧಿ ಹೇಳಿದರು. ಅದರಿಂದ ಜೀವದತ್ತ, ಲಕ್ಷದತ್ತರು ಮನೆಯಿಂದ ಹೊರಡುತ್ತ, "ನಾವು ಪ್ರಪಂಚ ಜ್ಞಾನವಿಲ್ಲದ ಮೂರ್ಖರಲ್ಲ. ನಿಮ್ಮಿಬ್ಬರನ್ನೂ ನ್ಯಾಯಾಸ್ಥಾನಕ್ಕೆ ಎಳೆಯುತ್ತೇವೆ. ನಮ್ಮ ಭಾಗ ಎಲ್ಲಿಗೆ ಹೋಗುತ್ತೋ ನೋಡುತ್ತೇವೆ" ಎಂದು ಕೂಗಾಡಿದರು.

ಅವರು ಹೇಳಿದ ಹಾಗೆ ಮಾಡಿಯೇಬಿಟ್ಟರು. ಒಂದು ವಾರದೊಳಗೆ ಜೀವದತ್ತ, ಲಕ್ಷದತ್ತರು ತಾಯಿಯ ಮೇಲೆಯೂ, ತಮ್ಮನ ಮೇಲೆಯೂ ನ್ಯಾಯಾಸ್ಥಾನದಲ್ಲಿ ವ್ಯಾಜ್ಯ ಹೂಡಿಬಿಟ್ಟರು. ಪಿಂಗಳನೂ, ಅವನ ತಾಯಿಯೂ ನ್ಯಾಯಾಸ್ಥಾನಕ್ಕೆ ಬರಬೇಕೆಂದು ಆಜ್ಞೆ ಬಂದಿತು. ಅದಕ್ಕೆ ವಿಧೇಯರಾಗಿ ಅವರಿಬ್ಬರೂ ನ್ಯಾಯಾಸ್ಥಾನಕ್ಕೆ ಹೋಗಿ ಹಾಜ ರಾದರು. ದೊಡ್ಡವರಿಬ್ಬರೂ ನ್ಯಾಯಾಧಿಪತಿಗೆ ಲಂಚ ಕೊಟ್ಟು ಸರಿಮಾಡಿಟ್ಟುದರಿಂದ, ಅವನು ತಾಯಿಗೂ ಪಿಂಗಳನಿಗೂ ವ್ಯತಿರೇಕವಾಗಿಯೇ ತೀರ್ಪು ಹೇಳಿದನು.

ತನಗೂ ತನ್ನ ತಾಯಿಗೂ ಬಹಳ ಅನ್ಯಾಯ ವಾಯಿತೆಂದು ಪಿಂಗಳನು ನ್ಯಾಯಾಸ್ಥಾನದಲ್ಲಿ ಮೊರೆ ಯಿಟ್ಟು ಅರ್ಜಿ ಹಾಕಿದನು. ಆಮೇಲೆ ಒಂದು ತಿಂಗಳ ವರೆಗೆ ಅರ್ಜಿಯ ಮೇಲೆ ಅರ್ಜಿ ತೆಗೆದುಕೊಂಡು ನ್ಯಾಯಾಸ್ಥಾನಕ್ಕೆ ಓಡಾಡಿದ ಮೇಲೆ, ಕಡೆಗೆ ನ್ಯಾಯಾಧಿಪತಿ ಪಿಂಗಳನಿಗೂ ಅವನ ತಾಯಿಗೂ ಅನುಕೂಲವಾಗಿಯೇ ತೀರ್ಪು ಹೇಳಿದನು.

ಹೀಗೆ ತೀರ್ಪು ತಮಗೆ ಅನುಕೂಲವಾಗಿ ಬಂದರೂ ಪಿಂಗಳನಿಗೂ ತಾಯಿಗೂ ಪ್ರಯೋಜನವೇನೂ ಆಗಲಿಲ್ಲ. ಮಧ್ಯವರ್ತಿಗಳಾಗಿ ಬಂದು ವ್ಯರ್ಥವಾಗಿ ರಾಜಿಯ ರಾಯಭಾರ ಮಾಡಿದವರಿಗೂ, ನ್ಯಾಯ ವಾದಿಗಳಿಗೂ ಖರ್ಚುಮಾಡಬೇಕಾಗಿ ಬಂದುದರಿಂದ, ಪಿಂಗಳನೂ, ಅವನ ತಾಯಿಯೂ ಇರುವ ಆಸ್ತಿ ಪೂರಾ ಕಳೆದುಕೊಳ್ಳಬೇಕಾಯಿತು. ಅತ್ತ ಜೀವದತ್ತ,

ಲಕ್ಷದತ್ತರೂ ಸಹ ಶತ ದರಿದ್ರರಾದರು. ಅವರಿಬ್ಬರೂ ಹೊಟ್ಟೆಗೆ ದಾರಿ ಕಾಣದೆ ಬೀದಿಯಲ್ಲಿ ಬಿಕಾರಿಗಳಾಗಿ ಜತೆ ಮಾತ್ರ ಬಿಡದೆ ತಿರುಗುತ್ತಲಿದ್ದರು.

ಪಿಂಗಳನು ತಮ್ಮ ಮೇಲೆ ಮಗುಚಿಕೊಂಡ ದುರದೃಷ್ಟಕ್ಕೆ ಚಿಂತಿಸಿ ಎದೆಗೆಟ್ಟು ಹೋಗಲಿಲ್ಲ. ಅವನು ತಾಯಿಗೆ ಧೈರ್ಯ ಹೇಳಿ, ಒಂದು ಬಲೆಯನ್ನು ತೆಗೆದುಕೊಂಡು ಮೀನು ಹಿಡಿದು ತರುವೆನೆಂದು ನದಿಯ ಕಡೆಗೆ ಹೋದನು. ಮೀನು ಹಿಡಿಯುವ ವೃತ್ತಿಗೆ ಅವನು ಹೊಸಬನಾದರೂ, ಸಾಯಂಕಾಲದವರೆಗೂ ಬಲೆ ಬೀಸುತ್ತಾ, ಸಾಧ್ಯವಾದಷ್ಟು ಮೀನುಗಳನ್ನು ಹಿಡಿದನು. ಅವುಗಳನ್ನು ಅಂಗಡಿ ಬೀದಿಯಲ್ಲಿ ಮಾರಿ, ಬಂದ ಹಣದಿಂದ, ಜೀನಸಿನಂಗಡಿಯಿಂದ ಮನೆಗೆ ಬೇಕಾದ ಸಾಮಾನುಗಳನ್ನು ಕೊಂಡುಕೊಂಡನು. ಈ ಕೆಲಸ ಅವನಿಗೆ ನಂಬುಗೆಯನ್ನೂ, ಉತ್ಸಾಹವನ್ನೂ ಕೊಟ್ಟಿತು.

ಈ ವಿಧವಾಗಿ ಪಿಂಗಳನು ಹಗಲೆಲ್ಲಾ ಮೀನು ಹಿಡಿಯುವ ಕೆಲಸಮಾಡಿ, ಅದನ್ನು ಮಾರಿ ಬರುವ ಹಣದಿಂಧ ಸುಖವಾಗಿ ಕಾಲವನ್ನು ಕಳೆಯುತ್ತಿದ್ದನು. ಕೆಲವು ದಿನಗಳಲ್ಲಿ ಅವನ ಅಣ್ಣಂದಿರಿಗೆ ಪಿಂಗಳನು ತಾಯಿಯೊಂದಿಗೆ ನಿಶ್ಚಿಂತನಾಗಿ ದಿನ ಕಳೆಯುತ್ತಿದ್ದಾನೆಂದು ಗೊತ್ತಾಯಿತು. ಅವನೂ ತಮ್ಮ ಹಾಗೆ ಬಿಕಾರಿಯಾಗಿರುತ್ತಿದ್ದರೆ ಸಂತೋಷವಾಗುತ್ತಿತ್ತು ಅವರಿಗೆ.

ಅವರು ಪಿಂಗಳನು ನದಿಗೆ ಹೋಗಿದ್ದ ಸಮಯದಲ್ಲಿ ತಾಯಿಯ ಬಳಿಗೆ ಬಂದು ಕಣ್ಣೀರು ಸುರಿದು ಗೋಳಾಡಿ, ಹಸಿವಿನಿಂದ ಒಣಗಿ ಹೋಗುತ್ತಿದ್ದೇವೆಂದು ಮೊರೆಯಿಟ್ಟುಕೊಂಡರು. ಮೊದಲು ಅವರು ತಾಯಿಗೆ ಎಷ್ಟೇ ಅನ್ಯಾಯ ಮಾಡಿದ್ದರೂ, ಹೆತ್ತ ಕರುಳಿನ ಪ್ರೇಮವು ಅದನ್ನೆಲ್ಲಾ ಮರೆಯಿಸಿಬಿಟ್ಟಿತು. ತಾಯಿ ಅವರಿಬ್ಬರಿಗೂ ಒಳ್ಳೆಯ ಊಟವನ್ನು ಬಡಿಸಿದಳು.

ಜೀವದತ್ತನೂ, ಲಕ್ಷದತ್ತನೂ ತಾಯಿಗೆ ಕೃತಜ್ಞತೆ ಹೇಳಿ, ಈ ಮೊದಲು ತಾವು ಮಾಡಿದ ಅನ್ಯಾಯಗಳಿಗೆ ಪಶ್ಚಾತ್ತಾಪವನ್ನು ತೋರಿಸಿದರು. ತಾಯಿ



ಕೂಡಾ ಅವರ ಮೇಲೆ ಮನಸ್ಸು ಕರಗಿ, ತಮ್ಮನು ಇಲ್ಲದ ಹೊತ್ತಿನಲ್ಲಿ ದಿನಾ ಬಂದು ಊಟಮಾಡಿಕೊಂಡು ಹೋಗುವಂತೆ ಅವರಿಗೆ ಹೇಳಿದಳು. ಕೆಲಸ ಮಾಡಲು ಸೊಂಟ ಬಗ್ಗಿಸಲಾಗದ ಶುಂಠ ಸೋಮಾರಿಗಳಾಗಿ ಬೆಳೆದ ಆ ಮಗಂದಿರು ತಾಯಿಯ ಮಾತು ಕೇಳಿ, ಆನಂದದಿಂದ ನಲಿದುಕೊಂಡು ಬೀದಿಗಿಳಿದು ಹೋದರು.

ಪಿಂಗಳನಿಗೆ ಇದಾವುದೂ ತಿಳಿಯಲಿಲ್ಲ. ಅವನು ದಿನಾ ಬೆಳಂಜಾಮದಲ್ಲಿಯೇ ಎದ್ದು ಬಲೆ ಎತ್ತಿಕೊಂಡು ನದಿಗೆ ಹೋಗಿಬಿಡುವನು. ಒಂದು ದಿನ ಏನಾಯಿತೋ ಏನೋ, ಅವನು ನದಿಯಲ್ಲಿ ಬಲೆ ಬೀಸಿ ಎಷ್ಟು ಹೊತ್ತು ಕಾದರೂ ಒಂದು ಮೀನು ಕೂಡಾ ಬೀಳದೆ ಹೋಯಿತು. "ಇದೆಂಥ ದುರದೃಷ್ಟ ಈ ದಿನ!" ಎಂದುಕೊಳ್ಳುತ್ತ ಸೂರ್ಯ ಮುಳುಗುವವರೆಗೂ ಸಹನೆಯಿಂದ ಕುಳಿತನು. ಕಡೆಗೆ ಖಾಲಿ ಬಲೆಯನ್ನು ತನ್ನ ಹೆಗಲಿಗೆ ಹಾಕಿಕೊಂಡು, ಬಲು ಬೇಸರದಿಂದ ಮನೆಯ ದಾರಿ ಹಿಡಿದನು.

ದಾರಿಯಲ್ಲಿ ದಿನಾ ಅವನು ಸಾಮಾನು ತೆಗೆದುಕೊಳ್ಳುವ ಅಂಗಡಿಯವನು, ಆ ದಿನ ಪಿಂಗಳನು ತನ್ನ ಅಂಗಡಿಗೆ ಬಾರದೆ ಸುಮ್ಮನೆ ಹೋಗುವುದನ್ನು ನೋಡಿ, ಅವನನ್ನು ಕೂಗಿ ಕರೆದನು.

ಪಿಂಗಳನು ಅಂಗಡಿಯ ಬಳಿಗೆ ಹೋಗಿ, ಆ ದಿನ ತನಗೆ ನದಿಯಲ್ಲಿ ಒಂದು ಮೀನು ಕೂಡಾ ಸಿಕ್ಕಲಿಲ್ಲವಾದುದರಿಂದ, ತನ್ನ ಹತ್ತಿರ ಹಣವೇನೂ ಇಲ್ಲವೆಂದು ಹೇಳಿದನು. ಆ ಮಾತು ಕೇಳಿ ಅಂಗಡಿಯವನು ನಕ್ಕು, "ನಿನಗೆ ಬೇಕಾದ ಜೀನಸುಗಳನ್ನು ದಿನಾ ಇಲ್ಲಿಂದ ಕೊಂಡುಕೊಂಡು ಹೋಗುವವನಲ್ಲವೇ ನೀನು? ಹಾಗಿರುವಾಗ, ಈ ದಿನ ಹಣವಿಲ್ಲದೆ ಹೋದಮಾತ್ರಕ್ಕೆ ಏನು ಮುಳುಗಿ ಹೋಯಿತು? ನಿನ್ನ ಮನೆಗೆ ಬೇಕಾದ ಸಾಮಾನುಗಳನ್ನು ತೆಗೆದುಕೊಂಡು ಹೋಗು. ನಾಳೆ ಹಣ ಕೊಡುವಿಯಂತೆ" ಎಂದನು.

ಪಿಂಗಳನು ಅಂಗಡಿಯವನ ದಯೆಗೆ ಕೃತಜ್ಞತೆ ಹೇಳಿ, ಬೇಕಾದ ಸಂಬಾರ ಜೀನಸುಗಳನ್ನು ತೆಗೆದು



ಕೊಂಡು ಉತ್ಸಾಹದಿಂದ ಹೊರಟನು. ಸಾಧಾರಣ ವಾಗಿ ಅವನು ಮನೆಗೆ ಹಿಂದಿರುಗುವಾಗ ರಾತ್ರಿ ಬಹಳ ಹೊತ್ತಾಗುತ್ತಿತ್ತು. ಈ ದಿನ ಬಹಳ ಬೇಗನೇ ಮನೆಯನ್ನು ತಲುಪಿದನು.

ಆ ಸಮಯದಲ್ಲಿ ಪಿಂಗಳನ ಅಣ್ಣಂದಿರಿಬ್ಬರೂ ಮನೆಯಲ್ಲಿ ಆನಂದದಿಂದ ಊಟ ಮಾಡುತ್ತ ತಾಯಿ ಯೊಂದಿಗೆ ಮಾತುಕತೆಯಾಡಿಕೊಂಡಿದ್ದರು. ಥಕ್ಕನೆ ಪಿಂಗಳನು ಮನೆಯೊಳಗೆ ಹೊಕ್ಕ ಕೂಡಲೇ ಅವ ರಿಬ್ಬರೂ ಸುಮ್ಮನೆ ಬಾಯಿ ಮುಚ್ಚಿ ಗಲಿಬಿಲಿಗೊಂಡು ಎದ್ದು ಲಜ್ಜೆಯಿಂದ ತಲೆ ತಗ್ಗಿಸಿ, ಬೇಗಬೇಗನೆ ಹೊರಟು ಹೋಗಲು ನೋಡಿದರು.

ಆದರೆ ಪಿಂಗಳನು ಅಣ್ಣಂದಿರಿಬ್ಬರನ್ನೂ ಹೋಗ ಬೇಡಿರೆಂದು ತಡೆದು, ಆಲಿಂಗಿಸಿಕೊಂಡು "ಅಣ್ಣಂದಿರಾ! ಕೂಡಿ, ಕೂಡಿ. ಇರುವುದನ್ನು ಪೂರ್ತಿ ಊಟ ಮಾಡಿರಿ, ನಡೆದುದೆಲ್ಲಾ ಹೋಗಲಿ, ಮರೆತು ಬಿಡೋಣ. ನಾವೆಲ್ಲಾ ಒಂದೇ ತಂದೆಯ ಮಕ್ಕಳಲ್ಲವೆ?" ಎಂದು ಹೇಳಿದನು.

ತಮ್ಮನ ಬಾಯಿಯಿಂದ ಈ ಮಾತು ಹೊರಟ ಕೂಡಲೇ ಅಣ್ಣಂದಿರಿಗೆ ಬಹಳ ಸಂತೋಷವಾಯಿತು. ಅವರು ಪಿಂಗಳನನ್ನು ಮೆಚ್ಚಿಕೊಳ್ಳುತ್ತ "ತಮ್ಮಾ. ನೀನು ಇಷ್ಟು ಒಳ್ಳೆಯವನೆಂದು ನಮಗೆ ಗೊತ್ತಿಲ್ಲದೆ ಹೋಯಿತು. ಗೊತ್ತಿರುತ್ತಿದ್ದರೆ ಸುಮ್ಮಸುಮ್ಮನೆ ನಿಮ್ಮ ಮೇಲೆ ವ್ಯಾಜ್ಯ ಮಾಡಿ ನಮ್ಮ ಆಸ್ತಿ ಯೊಂದಿಗೆ ನಿಮ್ಮದನ್ನೂ ಹೋಗುವಂತೆ ಮಾಡು ತ್ತಿರಲಿಲ್ಲ" ಎಂದು ತಮ್ಮ ಪಶ್ಚಾತ್ತಾಪವನ್ನು ತೋರಿಸಿದರು.

ಇಷ್ಟು ಕಾಲದ ಮೇಲೆ ಮಕ್ಕಳು ತಮ್ಮ ವಿರೋಧ ಭಾವವನ್ನು ಬಿಟ್ಟು ಒಂದುಗೂಡಿದುದುದನ್ನು ನೋಡಿ ತಾಯಿಗೂ ಬಹಳ ಸಂತೋಷವಾಯಿತು.

ಪಿಂಗಳನು ಮರುದಿನದಲ್ಲಿ ಕೂಡಾ ಎಂದಿನಂತೆ ಬೆಳಗು ಮುಂಜಾವದಲ್ಲೇ ಎದ್ದು ಬಲೆ ತೆಗೆದುಕೊಂಡು ನದಿಗೆ ಹೋದನು. ಆ ದಿನ ಕೂಡಾ ಸಾಯಂಕಾಲದ ವರೆಗೂ ಅವನಿಗೆ ಮೀನೇ ಸಿಗಲಿಲ್ಲ. ನದಿಯ ಮೀನು ಗಳೆಲ್ಲ ಹೇಗೆ ಮಾಯವಾದುವೆಂದು ಆಶ್ಚರ್ಯ



ಪಟ್ಟನು. ಕತ್ತಲಾಗುವಾಗ ತನ್ನ ದುರದೃಷ್ಟವನ್ನು ನಿಂದಿಸಿಕೊಳ್ಳುತ್ತ, ಬರಿಗೈಯಿಂದ ಮನೆಗೆ ಹೋಗುವಾಗ, ಅಂಗಡಿಯವನು ಮತ್ತೆ ಕರೆದು ನಡೆದ ಸಂಗತಿಯನ್ನು ತಿಳಿದು, ಆ ದಿನ ಕೂಡಾ ಸಾಲವಾಗಿ ಬೇಕಾದ ಸಾಮಾನುಗಳನ್ನು ಕೊಟ್ಟನು.

ಈ ವಿಧವಾಗಿ ಒಂದರ ಮೇಲೊಂದು ಹತ್ತು ದಿನಗಳ ವರೆಗೂ ಪಿಂಗಳನಿಗೆ ನದಿಯಲ್ಲಿ ಮೀನು ಸಿಗದೆ ಹೋಯಿತು. ಹನ್ನೊಂದನೇ ದಿನ ಅವನು ಅಲ್ಲಿಗೆ ಹೋಗದೆ, ಒಂದು ಯೋಜನ ದೂರದಲ್ಲಿದ್ದ ಶುಕ ಸರೋವರಕ್ಕೆ ಹೋದನು.

ಆ ಶುಕ ಸರೋವರದಲ್ಲಿ ಅವನು ಬಲೆ ಬೀಸಿ, ತೀರದಲ್ಲಿ ಕುಳಿತುಕೊಂಡ ಸ್ವಲ್ಪ ಹೊತ್ತಿಗೆಲ್ಲಾ, ಮೈದಾನದ ಮೇಲೆ ಒಬ್ಬ ಕುದುರೆಯ ಸವಾರನು ಬರುವ ಹಾಗೆ ಧೂಳೆದ್ದಿತು. ಪಿಂಗಳನು ಅಲ್ಲಿಗೆ ಬರುವವನು ಯಾರಾಗಿರಬಹುದೆಂದು ಯೋಚಿಸುತ್ತ ನೋಡುತ್ತಿರಲು, ರಾಹುತನು ಕುದುರೆಯನ್ನು ಹಾರಿಸಿಕೊಂಡು ಪಿಂಗಳನ ಸಮೀಪ ಬಂದು "ಪಿಂಗಳಾ! ನೀನು ನನಗೊಂದು ಸಹಾಯ ಮಾಡಬೇಕು!" ಎನ್ನುತ್ತಾ ಕುದುರೆಯಿಂದ ಇಳಿದನು.

ತಾನು ಎಂದೂ ನೋಡಿ ಅರಿಯದ, ಈ ಅಪರಿಚಿತನು ನೆಟ್ಟಗೆ ತನ್ನ ಬಳಿಗೆ ಬಂದು, ಹೆಸರೆತ್ತಿ ಕರೆದುದನ್ನು ಕೇಳಿ ಪಿಂಗಳನಿಗೆ ಬಹಳ ಆಶ್ಚರ್ಯವಾಯಿತು. ಅವನು ಹೊಸಬನ ಮುಖವನ್ನು ಅನುಮಾನದಿಂದ ನೋಡುತ್ತ "ನನ್ನ ಹೆಸರು ನಿಮಗೆ ಹೇಗೆ ಗೊತ್ತು? ನಿಮಗೆ ನನ್ನಿಂದಾಗಬೇಕಾದ ಸಹಾಯವೆಂತಹುದು?" ಎಂದು ಕೇಳಿದನು.

ಆ ಪ್ರಶ್ನೆಗೆ ಹೊಸಬನು ನಗುತ್ತ, "ನಿನ್ನ ಹೆಸರು, ನೀನು ಯಾವ ಸಮಯದಲ್ಲಿ ಈ ಶುಕ ಸರೋವರಕ್ಕೆ ಮೀನು ಹಿಡಿಯಲು ಬರುವಿ ಎಂಬುದನ್ನೆಲ್ಲಾ ನಮ್ಮ ಗುರುಗಳು ನೀನು ಹುಟ್ಟುವ ಮೊದಲೇ ನನಗೆ ಹೇಳಿದ್ದಾರೆ. ಅದು ನಲುವತ್ತು ವರ್ಷಗಳ ಹಿಂದಿನ ಮಾತು. ಅದೆಲ್ಲ ಈಗ ಬೇಡ. ನಾನು ಕೇಳಿದ ಸಹಾಯ ಮಾಡುವಿಯಾ?" ಎಂದು ಕೇಳಿದನು. "ಅದೇನು ಸಹಾಯವೆಂದು ಹೇಳಿದರೆ ತಾನೇ ತಿಳಿಯುತ್ತದೆ?



ನಿಮ್ಮ ಹೆಸರು ಕೂಡ ಇನ್ನೂ ನೀವು ಹೇಳಿಲ್ಲವಷ್ಟೆ?" ಎಂದನು ಪಿಂಗಳ ವಿನಯದಿಂದ

"ನನ್ನ ಹೆಸರು ಮಂಡನ. ನೀನು ನನಗೆ ಮಾಡಬೇಕಾದ ಸಹಾಯ ಅಷ್ಟೇನೂ ಕಷ್ಟವಾದುದಲ್ಲ. ನನ್ನ ಕೈಗಳೆರಡನ್ನೂ ಸೇರಿಸಿ ಹಗ್ಗದಿಂದ ಬೆನ್ನಿನ ಕಡೆಗೆ ಕಟ್ಟಿ ಹಾಕಿ, ಆಮೇಲೆ ನನ್ನನ್ನು ಎತ್ತಿ ಸರೋವರದಲ್ಲಿ ಹಾಕಿಬಿಡು. ಸ್ವಲ್ಪ ಹೊತ್ತಿನ ಮೇಲೆ ನನ್ನ ತಲೆ ನೀರಿನಿಂದ ಮೊದಲು ಮೇಲೆದ್ದರೆ, ಬಲೆ ಬೀಸಿ ನನ್ನನ್ನು ತೀರಕ್ಕೆ ಎಳೆಯಬೇಕು. ಅದಕ್ಕೆ ಬದಲು ಕಾಲುಗಳು ಮೊದಲು ಮೇಲೆ ಕಾಣಿಸಿದರೆ, ನೀನು ಈ ಕುದುರೆಯನ್ನು ಪಟ್ಟಣಕ್ಕೆ ತೆಗೆದುಕೊಂಡು ಹೋಗಿ ಕಾಂಚನಮಿಶ್ರನೆಂಬ ವರ್ತಕನಿಗೆ ಒಪ್ಪಿಸಿ ಬಿಡಬೇಕು. ಅವನು ನಿನಗೆ ನೂರು ಮೊಹರಿಗಳನ್ನು ಕೊಡುತ್ತಾನೆ" ಎಂದನು.

ಪಿಂಗಳನು ಮಂಡನನು ಹೇಳಿದ ಹಾಗೆ ಮಾಡಲು ಅಂಗೀಕರಿಸಿದನು. ಮಂಡನನು ಕುದುರೆಯ ಜೀನಿಗೆ ನೇತಾಡುತ್ತಿದ್ದ ಒಂದು ಉದ್ದವಾದ ಹಗ್ಗವನ್ನು ತಂದು ಪಿಂಗಳನ ಕೈಗೆ ಕೊಟ್ಟು "ತೆಗೆದುಕೋ. ಕೆಲಸವನ್ನು ಪ್ರಾರಂಭಿಸು" ಎಂದನು.

ಪಿಂಗಳನು ಮಂಡನನ ಕೈಗಳೆರಡನ್ನೂ ಬೆನ್ನಿನ ಕಡೆಗೆ ತಿರುಗಿಸಿ ಕಟ್ಟಿ, ಅವನನ್ನು ಎತ್ತಿ ಹೆಗಲ ಮೇಲೆ ಹೊತ್ತು, ಸರೋವರದ ತೀರದಲ್ಲಿ ನಿಂತು, ಮುಂದೆ ಹಿಂದೆ ಮೂರುಬಾರಿ ಊಗಾಡಿ ಅವನನ್ನು ಸರೋವರದೊಳಗೆ ಬೀಸಿ ಹಾಕಿದನು.

ಎರಡು ನಿಮಿಷಗಳ ವರೆಗೆ ಸರೋವರದ ನೀರಿನಲ್ಲಿ ಅಲೆಗಳೆದ್ದು, ನಿಂತು ಹೋದ ಮೇಲೆ ಪಿಂಗಳನು ನೋಡುತ್ತಿದ್ದ ಹಾಗೆ ಮಂಡನನ ಕಾಲುಗಳು ಮೇಲೆ ಎದ್ದುವು. ಅದನ್ನು ನೋಡಿ ಪಿಂಗಳನು "ಅಯ್ಯೋ ಪಾಪ! ಸತ್ತು ಹೋದನೆಂದು ಕಾಣುತ್ತದೆ!" ಎಂದುಕೊಂಡು ಕುದುರೆಯ ಕಡೆಗೆ ನಡೆದನು.

ಅವನು ಮಂಡನನ ಕುದುರೆಯನ್ನು ನಡೆಯಿಸಿಕೊಂಡು ಪಟ್ಟಣಕ್ಕೆ ಹೋದನು. ಅಲ್ಲಿ ಬಹು ದೊಡ್ಡ ವರ್ತಕನಾಗಿದ್ದ ಕಾಂಚನಮಿಶ್ರನ ಅಂಗಡಿಯನ್ನು ಕಂಡುಹಿಡಿಯಲು ಏನೂ ಕಷ್ಟವಾಗಲಿಲ್ಲ. ಕಾಂಚನಮಿಶ್ರನು ಪಿಂಗಳನನ್ನೂ ಅವನೊಂದಿಗಿದ್ದ ಕುದುರೆಯನ್ನೂ ನೋಡಿದ ಕೂಡಲೇ "ದುರಾಶೆಯೇ ದುಃಖಕ್ಕೆ ಮೂಲ!" ಎಂದು ಗೊಣಗಿಕೊಂಡು, ಪೆಟ್ಟಿಗೆಯೊಳಗಿನಿಂದ ಹಣದ ಚೀಲವನ್ನು ಎತ್ತಿಕೊಂಡನು. ಅದರೊಳಗಿನಿಂದ ನೂರು ಮೊಹರಿಗಳನ್ನು ಎಣಿಸಿ ತೆಗೆದು ಪಿಂಗಳನಿಗೆ ಕೊಡುತ್ತ, "ತಮ್ಮಾ! ತೆಗೆದುಕೋ. ಈ ಸಂಗತಿ ಮಾತ್ರ ರಹಸ್ಯವಾಗಿರಲಿ. ಇದು ಗುಟ್ಟಾಗಿದ್ದರೇನೇ ನಿನಗೆ ಕ್ಷೇಮ. ತಿಳಿಯಿತೇ?" ಎಂದು ಎಚ್ಚರಿಸುವವನಂತೆ ಹೇಳಿದನು.

—(ಇನ್ನೂ ಇದೆ)






೨

[ಅವಂತಿನಗರದಲ್ಲಿ ಮೂವರು ಸಹೋದರರಿದ್ದರು. ಚಿಕ್ಕವನಾದ ಪಿಂಗಳನು ಬಲೆ ತೆಗೆದುಕೊಂಡು ಶುಕ ಸರೋವರಕ್ಕೆ ಹೋದನು. ಅಲ್ಲಿಗೆ ಮುಂಡನನೆಂಬವನು ಬಂದು, ತನ್ನನ್ನು ಕಟ್ಟಿ ಸರೋವರಕ್ಕೆ ಹಾಕಿದರೆ ನಿನಗೆ ಲಾಭವಾಗುವುದೆಂದು ಹೇಳಲು, ಪಿಂಗಳನು ಅವನು ಹೇಳಿದಂತೆಯೇ ಮಾಡಿದನು. ಅಲ್ಲಿಂದ ನಗರದಲ್ಲಿದ್ದ ಕಾಂಚನ ಮಿತ್ರನೆಂಬ ವರ್ತಕನು ಕೊಟ್ಟ ನೂರು ಮೊಹರಿಗಳನ್ನು ಪಡೆದು ಹಿಂದಿರುಗಿದನು.]

ಪಿಂಗಳನಿಗೆ ತನ್ನಲ್ಲಿರುವ ನೂರು ಮೊಹರಿಗಳನ್ನು ನೆನೆಯುತ್ತ ಆನಂದವೂ ಆಶ್ಚರ್ಯವೂ ಉಕ್ಕುತ್ತಿರಲು, ತಾನು ಸಾಮಾನು ತೆಗೆದುಕೊಳ್ಳುವ ಅಂಗಡಿಯ ಮುಂದಿನಿಂದಾಗಿಯೇ ನಡೆಯುತ್ತಿದ್ದನು. ಅಂಗಡಿಯವನು ಕರೆಯದಿರುತ್ತಿದ್ದರೆ ಹಾಗೆಯೇ ಮುಂದೆ ಹೋಗಿ ಬಿಡುತ್ತಿದ್ದನು. ಅವನನ್ನು ನೋಡಿದ ಕೂಡಲೇ ಉತ್ಸಾಹದಲ್ಲಿರುವಂತೆ ಅಂಗಡಿಯವನಿಗೆ ತೋರಿ, "ಏನೋಯ್ ಪಿಂಗಳಾ, ಈ ದಿನ ಅದೃಷ್ಟ ತಿರುಗಿದ ಹಾಗಿದೆ. ಇಷ್ಟು ದಿನಗಳ ಮೀನುಗಳು ಒಂದೇಸಾರಿ ಸಿಕ್ಕಿರಬೇಕು ! ನಿಜತಾನೆ? " ಎಂದನು.

ಮೈ ತಿಳಿಯದಷ್ಟು ಸಂತೋಷದಲ್ಲಿರುವ ಪಿಂಗಳನಿಗೆ, ತಾನು ನೂರು ಮೊಹರಿಗಳನ್ನು ಹೇಗೆ ಸಂಪಾದಿಸಿದೆನೆಂಬ ಸ್ವಾರಸ್ಯವನ್ನು ಅಂಗಡಿಯ ಯಜಮಾನನೊಂದಿಗೆ ಹೇಳಿ ಬಿಡಬೇಕೆನಿಸಿತು. ಮರು ಕ್ಷಣದಲ್ಲಿ ಅವನಿಗೆ ಕಾಂಚನ ಮಿತ್ರನು ಹೇಳಿದ ಎಚ್ಚರಿಕೆ ನೆನಪಿಗೆ ಬಂದು, "ನಿಜವೇ ನಿಮ್ಮ ಊಹೆ. ಹತ್ತು ದಿನಗಳ ಮೇಲೆ ಈ ದಿನ ಬಲೆಯಲ್ಲಿ ಸ್ವಲ್ಪ ಹೆಚ್ಚೇ ಮೀನುಗಳು ಬಿದ್ದುವು. ಈ ಹತ್ತು ದಿನಗಳ ವರೆಗೆ ಅವುಗಳನ್ನೆಲ್ಲಾ ಹೊರಕ್ಕೆ ಬಿಡದೆ ಯಾವ ದುರದೃಷ್ಟ ದೇವತೆಯೋ ನನ್ನನ್ನೂ ಅವುಗಳನ್ನೂ



ಹಿಡಿದುಕೊಂಡ ಹಾಗಿತ್ತು. ಈಗ ಬಿಟ್ಟು ಹೋಗಿರಬೇಕು." ಎಂದನು ವಿಚಾರದ ಮುಖಭಾವದಿಂದ.

ಆಮೇಲೆ ಪಿಂಗಳನು ಅದುವರೆಗೂ ಅಂಗಡಿಯವನಿಗೆ ಕೊಡಬೇಕಾಗಿದ್ದ ಲೆಕ್ಕ ಕೇಳಿ ನೋಡಿ ಕೊಟ್ಟು, ತನಗೆ ಬೇಕಾದ ಸಾಮಾನುಗಳನ್ನು ಕೂಡಾ ಕೊಂಡು ಕೊಂಡು ಯಾವುದೋ ಹಾಡನ್ನು ಗುನುಗುತ್ತಾ ತನ್ನ ಮನೆಗೆ ಹೋಗಿ ಸೇರಿದನು.

ಅವನು ಮನೆ ತಲುಪುವಾಗ ಅಣ್ಣಂದಿರಿಬ್ಬರೂ ಕೋಣೆಯ ಗೋಡೆಗೆ ಒರಗಿಕೊಂಡು ತೂಕಡಿಸಿಕೊಂಡಿದ್ದರು, ಅವನು ಬಂದುದನ್ನು ನೋಡಿ ತಾಯಿ ಅವನ ಇದಿರಿಗೆ ಬಂದಳು, ಪಿಂಗಳನು ತಾನು ಅಂಗಡಿಯಿಂದ ಹೊತ್ತು ತಂದ ಸಾಮಾನುಗಳನ್ನು ತಾಯಿಯ ಮುಂದೆ ಇಟ್ಟು, "ಈ ದಿನ ಅದೃಷ್ಟ ಕೂಡಿಬಂತಮ್ಮಾ, ಬೇಗ ಅಡಿಗೇಗಿಡಿಗೇ ಎಲ್ಲಾ ಮುಗಿಸಿಬಿಡು. ಯಾವುದಕ್ಕೂ ಏನೂ ಕಡಿಮೆಮಾಡಬೇಡಮ್ಮಾ. ಧಾರಾಳವಾಗಿ ಮಾಡು." ಎಂದನು.

ಅವನ ತಾಯಿ ಉತ್ಸಾಹದಿಂದ ಅಡಿಗೆ ಮಾಡಿದಳು. ಪಿಂಗಳನೂ ಜೀವದತ್ತ ಲಕ್ಷದತ್ತರೂ ಬೇಗಬೇಗನೆ ಊಟ ಮಾಡಿ ಉತ್ಸಾಹದಿಂದ ಎಲ್ಲಿಗೋ ಹೊರಗೆ ಹೋಗಿಬಿಟ್ಟರು. ಅಣ್ಣಂದಿರು ಹಾಗೆ ಹೊರಟುಹೋದ ಮೇಲೆ ಪಿಂಗಳನು ಜೇಬಿನಿಂದ ಮೊಹರಿಗಳ ಚೀಲವನ್ನು ತೆಗೆದು ಜಣಜಣಿಸಿ ತಾಯಿಗೆ ತೋರಿಸಿದನು.

ಅಷ್ಟೊಂದು ಹಣವನ್ನು ಒಮ್ಮೆಗೇ ನೋಡಿದ ತಾಯಿ ಆಶ್ಚರ್ಯ ಪಡುತ್ತ "ಇಷ್ಟು ಹಣ ಹೇಗೆ ಸಂಪಾದಿಸಿದೆಯೋ ಮಗಾ?" ಎಂದು ಕೇಳಿದಳು. ಪಿಂಗಳನು ತಾಯಿಯ ಮುಂದೆ ಮುಚ್ಚು ಮರೆ ಏನೂ ಮಾಡದೆ ಆ ಹಣವು ಕೈಗೆ ಬಂದ ಬಗೆಯನ್ನು ವಿವರವಾಗಿ ಹೇಳಿದನು.

ತಾಯಿ ಅದನ್ನೆಲ್ಲ ಕೇಳಿ, "ಪಿಂಗಳಾ, ನೀನು ಮಾಡಿದ ಕೆಲಸ ಬೇರೆ ಯಾರಿಗಾದರೂ ತಿಳಿದರೆ ಗಂಡಾಂತರ ಬರುತ್ತದೆ. ಇನ್ನು ಮೇಲೆ ನೀನು ಆ ಶುಕಸರೋವರದ ಕಡೆಗೆ ಹೋಗಲೇ ಬೇಡ" ಎಂದಳು ಹೆದರುತ್ತ.

ತಾಯಿಯ ಭಯವನ್ನು ನೋಡಿ ಪಿಂಗಳನು ನಗಾಡುತ್ತ, "ನಾನು ಮಾಡಿದ್ದು ತಪ್ಪು ಹೇಗೆ ಆಗುತ್ತದಮ್ಮಾ? ನಾನಾಗಿ ಏನಾದರೂ ತಪ್ಪು ಮಾಡಿದ್ದೇನೆಯೆ? ಅಲ್ಲಿಗೆ ಬಂದವನು ಬೇಕೆಂತಲೇ ಒತ್ತಾಯ ಮಾಡಿ ಕೈಗಳನ್ನು ಬೆನ್ನಿಗೆ ಕಟ್ಟಿಸಿಕೊಂಡು ಸರೋವರದಲ್ಲಿ ಮುಳುಗಿ ಸತ್ತ, ಅವನ ಹಣೆಯಲ್ಲಿ ಹಾಗೆ ಮಾಡಿಸಿಕೊಂಡು ಸಾಯಬೇಕೆಂದು ಬರೆದಿದೆ. ಆದರೂ ಈ ಸಂಗತಿ ಬೇರೆ ಯಾರಿಗೂ ತಿಳಿಯದಂತೆ ಅಡಗಿಸಿಟ್ಟುಕೊಂಡರಾಯಿತು. ಅಷ್ಟೇ" ಎಂದನು.

"ನಿನ್ನ ಅಣ್ಣಂದಿರ ಸಂಗತಿ ಗೊತ್ತು ತಾನೇ? ಅವರು ಒಳ್ಳೆಯವರಲ್ಲ. ಕರ್ಮ ಸುಟ್ಟು ನನ್ನ ಹೊಟ್ಟೇಲಿ ಹುಟ್ಟಿದ್ದಾರೆ. ಈಗ ನಡೆದದ್ದು ಅವರ




ಕಿವಿಗೆ ಬೀಳಬಾರದು. ನಿನ್ನ ಮೇಲಿನ ಹೊಟ್ಟೇ ಕಿಚ್ಚಿನಿಂದ ಇವರೇನಾದರೂ ಕೇಡುಮಾಡಲೂ ಬಹುದು. ಜಾಗ್ರತೆ ಮಗಾ" ಎಂದಳು ತಾಯಿ.

ಹತ್ತು ದಿನಗಳ ತರುವಾಯ ಪಿಂಗಳನಿಗೆ ಆ ರಾತ್ರಿ ಹಾಯಾಗಿ ನಿದ್ದೆ ಬಂದಿತು. ಮರು ದಿನ ಬೆಳಗಾದ ಕೂಡಲೇ ಪಿಂಗಳನು, ಮೀನು ಹಿಡಿಯುವ ಬಲೆಯನ್ನು ಎತ್ತಿಕೊಂಡು ಶುಕಸರೋವರದ ಕಡೆಗೆ ಹೋದನು. ನಡು ಮಧ್ಯಾಹ್ನದ ವರೆಗೆ ಬಲೆ ಬೀಸಿ ಬೀಸಿ ನೋಡಿದರೂ ಒಂದು ಮೀನು ಕೂಡಾ ಅವನಿಗೆ ಸಿಗಲಿಲ್ಲ. ಅವನು ನಿರುತ್ಸಾಹದಿಂದ ಇನ್ನು ಮನೆಗೆ ಹೋಗೋಣವೇ ಎಂದು ಯೋಚಿಸುತ್ತಿರುವಾಗ, ತುಸು ದೂರದಲ್ಲಿ ವೇಗವಾಗಿ ಈ ಕಡೆಗೇ ಬರುವ ಕುದುರೆಯ ರಾಹುತನೊಬ್ಬನು ಕಂಡು ಬಂದನು.

ಪಿಂಗಳನು ಅದುರಿಬಿದ್ದು ನೋಡಿದನು. ಕುದುರೆಯ ಮೇಲೇರಿಕೊಂಡು ಬರುವ ಆ ಮನುಷ್ಯನು ನಿನ್ನೆ ಬಂದ ಮಂಡನನ ಹಾಗೆಯೇ ಕಾಣುತ್ತಾನೆ, ಸರೋವರದಲ್ಲಿ ಮುಳುಗಿಹೋದವನು ಪಿಶಾಚಿಯಾಗಿ ಬರುವುದಲ್ಲವಷ್ಟೆ?

ಸಂಶಯಿಸುತ್ತಾ ನೋಡುವ ಪಿಂಗಳನಿಗೆ, ಅವನು ಸಮೀಪಿಸುತ್ತಿದ್ದಂತೆ, ಕುದುರೆಯ ಬಣ್ಣ ಬೇರೆಯಾಗಿ ಕಂಡಿತು. ಅಷ್ಟರೊಳಗೆ ಸಮೀಪ ಬಂದ ರಾಹುತನು ನಗುತ್ತಾ ಕುದುರೆಯಿಂದ ಇಳಿದು "ಪಿಂಗಳಾ, ನಿನ್ನಿಂದ ನನಗೊಂದು ಸಹಾಯವಾಗಬೇಕು" ಎಂದನು ಪರಿಚಯದವನ ಹಾಗೆ.

ಪಿಂಗಳನು ಹೆದರುತ್ತಾ, ಅವನನ್ನು ಮಿಕಿಮಿಕಿ ನೋಡುತ್ತಿದ್ದನು. ಈಗ ಬಂದವನು ಮಂಡನನ ಹೋಲಿಕೆಯಲ್ಲಿರುವುದು ನಿಜವೇ. ಆದರೆ ವಯಸ್ಸಿನಲ್ಲಿ ಮಾತ್ರ ಅವನಿಗಿಂತ ಸ್ವಲ್ಪ ಚಿಕ್ಕವನಂತೆ ಕಾಣುತ್ತಿದ್ದಾನೆ. ಕುದುರೆಯೂ ಬೇರೆಯೇ, ಆದರಿಂದ ಈಗ ಬಂದವನು ಪಿಶಾಚಿಯಲ್ಲವೆಂದು ದೃಢವಾಯಿತು, ಸ್ವಲ್ಪ ಧೈರ್ಯ ಬಂದಿತು. ಇವನಿಗೂ ತನ್ನ ಹೆಸರು ಗೊತ್ತಿರುವುದೊಂದು ಆಶ್ಚರ್ಯ!

"ನಾನಂತೂ ನಿಮ್ಮನ್ನು ಈವರೆಗೂ ನೋಡಲಿಲ್ಲ. ನನ್ನ ಹೆಸರು ನಿಮಗೆ ಹೇಗೆ ಗೊತ್ತು? ನನ್ನಿಂದ ನಿಮಗೆ ಆಗ ಬೇಕಾದ ಸಹಾಯವೇನದು?" ಎಂದು ಪಿಂಗಳನು ಕೇಳಿದನು.

ಈ ಪ್ರಶ್ನೆಯನ್ನು ಕೇಳಿ ಅವನು ದೊಡ್ಡದನಿಯಿಂದ ನಗಾಡಿ, "ಪಿಂಗಳಾ, ನಿನ್ನ ಹೆಸರು ನನಗೆ ಹೇಗೆ ಗೊತ್ತಾಯಿತೆಂದು ಕೇಳುವಿಯಾ? ನನಗೆ ನಿನ್ನಿಂದಾಗ ಬೇಕಾದ ಕೆಲಸ ಕೂಡಾ ನಿನಗೆ ತಿಳಿಯದ್ದೇನೂ ಅಲ್ಲ. ನನ್ನ ಹೆಸರು ಅನುರೂಪ. ನಿನ್ನೆ ನಿನ್ನ ಸಹಾಯ ಕೇಳಿದ ಮಂಡನನು ನನ್ನ ಸಹೋದರನೇ. ನನಗೂ ನಿನ್ನಿಂದ ಅಂತಹ ಸಹಾಯವೇ ಆಗಬೇಕಾಗಿದೆ" ಎಂದನು.

"ಓಹೋ! ನಿನ್ನೆ ನನ್ನನ್ನು ಮಾತಾಡಿಸಿದ ಮಂಡನನೆಂಬವನು ನಿಮ್ಮ ಸೋದರನೇ? ಅವನು




ಈಗ ಎಲ್ಲಿದ್ದಾನೆಂಬುದು ನಿಮಗೆ ಗೊತ್ತಿದೆಯೆ?" ಎಂದು ಕೇಳಿದನು ಪಿಂಗಳ.

ಅನುರೂಪನು ಹೊಟ್ಟೆ ಹುಣ್ಣಾಗುವ ಹಾಗೆ ಗಹಗಹಿಸಿ ನಕ್ಕು, ಸರೋವರದ ಮಧ್ಯಕ್ಕೆ ಕೈ ತೋರಿಸುತ್ತ, "ಬಹುಶಃ ಮಂಡನನು ಅಲ್ಲಿ ಕೊಳೆತುಕೊಂಡಿರಬಹುದು. ಅಥವಾ ಯಾವ ಜಲ ಚರಗಳ ಹೊಟ್ಟೆಯೊಳಗೆ ಸೇರಿರಲೂ ಬಹುದು. ಈ ಸಂಗತಿ ನನಗಿಂತ ಮೊದಲು ನಿನಗೇ ಗೊತ್ತಿದೆ ಹೌದಾ?" ಎಂದನು.

"ಹಾಗಾದರೆ ನಿನ್ನೆ ಇಲ್ಲಿ ನಡೆದುದೆಲ್ಲಾ ನಿಮಗೆ ಗೊತ್ತಿದೆಯೆಂದಾಯಿತು" ಎಂದನು ಪಿಂಗಳನು ಆಶ್ಚರ್ಯದಿಂದ.

"ಹೌದು. ಎಲ್ಲವೂ ನನಗೆ ಗೊತ್ತಿದೆ. ನಿನ್ನಿಂದ ನನಗೆ ಕೂಡಾ ಅಂತಹ ಸಹಾಯವೇ ಆಗ ಬೇಕಾಗಿದೆ. ಮಾಡುವಿಯಪ್ಪೆ?" ಎಂದನು ಅನುರೂಪ ನಗುತ್ತ.

"ಮಾಡುತ್ತೇನೆ. ಆದರೆ ಅಂತಹ ಸಹಾಯಕ್ಕೆ ಈಸಾರಿ ಇನ್ನೂರು ಮೊಹರಿಗಳು ಸಿಗಬೇಕು. ಇಲ್ಲ ದಿದ್ದರೆ ನನ್ನಿಂದಾಗದು." ಎಂದನು ಪಿಂಗಳ.

ಅನುರೂಪನು ಮತ್ತೆ ನಗುತ್ತ, ಪಿಂಗಳನ ಬೆನ್ನು ಚಪ್ಪರಿಸಿ, "ಹೌದು. ನೀನು ಇನ್ನೂರು ಮೊಹರಿ ಕೇಳಬಹುದೆಂದು ಮೊದಲೇ ನನಗೆ ಅನುಮಾನ ವಾಗಿತ್ತು. ಅದರಂತೆಯೇ ಕಾಂಚನ ಮಿತ್ರನ ಹತ್ತಿರ ಏರ್ಪಾಡು ಮಾಡಿಟ್ಟೇ ಬಂದಿದ್ದೇನೆ. ಆದರೆ ನಾನು ಸರೋವರದಿಂದ ಬದುಕಿ ಹೊರಬೀಳಲಾರೆನೆಂದು ನಿನಗೇಕೆ ನಂಬುಗೆ ಬರಬೇಕು?" ಎಂದು ಕೇಳಿದನು.

"ಹಾಗೆ ನಾನು ನಂಬಿದ್ದೇನೆಂದು ನಿಮಗೇಕೆ ಸಂದೇಹ ಬರಬೇಕು? ಬೇಡ, ನೀವು ನನ್ನೊಡನೆ ಏನೋ ವಾದ ವಿವಾದ ಮಾಡುವ ಹಾಗಿದೆ. ನನ್ನನ್ನು ಸುಮ್ಮನೆ ಬಿಡಿ" ಎಂದನು ಪಿಂಗಳ.

"ಹೋಗಲಿ ಬಿಡು" ಎಂದು ಅನುರೂಪನು ಸಿದ್ಧನಾಗಿ ನಿಂತನು. ಪಿಂಗಳನು ಅವನ ಕೈಗಳನ್ನು ಬೆನ್ನಿಗೆ ಸೇರಿಸಿ ಕಟ್ಟಿ, ಅವನನ್ನು ಎತ್ತಿ ಹೊತ್ತು ಕೊಂಡು, ಸರೋವರದ ತೀರದಿಂದ ನೀರಿನೊಳಗೆ ಬೀಸಿ ಒಗೆದನು. ಅನುರೂಪನು ಸರೋವರದಲ್ಲಿ ಬೀಳುವುದಕ್ಕೆ ಮೊದಲು, "ಪಿಂಗಳಾ, ನೋಡುತ್ತಾ ಇರು. ನನ್ನ ತಲೆ ಮೊದಲು ನೀರಿನ ಮೇಲೆ ತೇಲಿದರೆ ಕೂಡಲೇ ಬಲೆಬೀಸಿ ನನ್ನನ್ನು ತೀರಕ್ಕೆ ಎಳೆದು ಬಿಡು" ಎಂದು ಕೂಗಿ ಹೇಳಿದನು.

ಪಿಂಗಳನು ಬಲೆಯನ್ನು ತಯಾರಾಗಿ ಹಿಡಿದು ತೀರದಲ್ಲಿ ನಿಂತು ನೋಡುತ್ತಿದ್ದನು. ಸರೋವರದಲ್ಲಿ ಸ್ವಲ್ಪ ಹೊತ್ತು ತೆರೆಗಳು ಎದ್ದುವು. ಒಂದೆರಡು ನಿಮಿಷಗಳಲ್ಲಿ ನೀರಿನಿಂದ ಚಿಕ್ಕ ಚಿಕ್ಕ ಗುಳ್ಳೆಗಳೆದ್ದುವು. ಆಮೇಲೆ ಅನುರೂಪನ ಕಾಲುಗಳು ನೀರ ಮೇಲೆ ತೇಲಿದುವು.

"ಸತ್ತನು ಪಾಪ!" ಎಂದು ಕೊಂಡು ಪಿಂಗಳನು ಅನುರೂಪನ ಕುದುರೆಯ ಮೇಲೇರಿ, ಹಿಂದಿರುಗಿ ನೋಡದೆಯೇ ಪಟ್ಟಣಕ್ಕೆ ಹೋದನು.



ಕಾಂಚನ ಮಿಶ್ರನು ಅವನನ್ನು ಅಷ್ಟು ದೂರದಿಂದ ನೋಡಿದ ಕೂಡಲೇ "ಬಂದೆಯಾ? ದುರಾಶೆಯೇ ದುಃಖಕ್ಕೆ ಮೂಲ!" ಎಂದು ಗಟ್ಟಿಯಾಗಿ ಕೂಗಿ ಹೇಳಿ, ಇನ್ನೂರು ಮೊಹರಿಗಳನ್ನು ಎಣಿಸಿ ಪಿಂಗಳನ ಕೈಗೆ ಕೊಟ್ಟನು.

"ದುರಾಶೆಯಾರದು? ನನ್ನದೆ? ಈ ಎರಡು ನೂರು ಮೊಹರಿಗಳಿಗಾಗಿ ನಾನೆಷ್ಟು ಶ್ರಮ ಪಟ್ಟಿದ್ದೇನೆಂದು ನಿಮಗೆ ಗೊತ್ತಿದೆಯೆ? ಇದೇನು ಸಾಮಾನ್ಯದ ಕೆಲಸವೆ?" ಎಂದು ಕಾಂಚನಮಿಶ್ರನನ್ನು ನೋಡಿ ಪಿಂಗಳನು ಕೇಳಿದನು.

ಆ ಮಾತಿಗೆ ಕಾಂಚನ ಮಿಶ್ರನು ಬೇಸರಗೊಂಡವನಂತೆ ತಲೆಯಾಡಿಸಿ, "ದುರಾಶೆ ನಿನ್ನದಲ್ಲ; ಸತ್ತು ಹೋದವರದು. ನೀನು ಮಾಡುವ ಕೆಲಸ ಏನೆಂದು ಬಹಿರಂಗವಾಗಿಬಿಟ್ಟರೆ ನಿನಗೆ ಬರುವ ಗಂಡಾಂತರವೇನೆಂದು ಕೂಡಾ ಊಹಿಸಬಹುದು. ಅದು ಹೋಗಲಿ, ನಿನ್ನಲ್ಲಿಯೂ ದುರಾಶೆ ತಲೆಯೆತ್ತುತ್ತಿದೆಯೆಂದೇ ಹೇಳಿದರೂ ತಪ್ಪೆಂದು ಹೇಗೆ ಹೇಳುವೆ? ನಿನ್ನೆ ನೂರು ಮೊಹರಿಗಳಾದರೆ ಈ ದಿನ ಇನ್ನೂರು ಮೊಹರಿಗಳು!" ಎಂದನು.

"ನಾಳೆ ಮುನ್ನೂರು ಮೊಹರಿಗಳು, ನೆನಪಿಡಿ, ಅದಕ್ಕಿಂತ ಕಡಿಮೆಯಾದರೆ ನಾನು ಯಾರಿಗೂ ಸಾಯಲಿಕ್ಕೆ ಸಹಾಯಮಾಡಲಾರೆ. ಮನುಷ್ಯರಿಗೆ ಆಶೆಯಿಲ್ಲದಿದ್ದರೆ ನಡೆದೀತೆ? ವ್ಯಾಪಾರ ಮಾಡುವುದೂ ಆಶೆಯಲ್ಲವೇ?" ಎಂದು ಹೇಳುತ್ತ ಪಿಂಗಳನು ಮನೆಗೆ ಹಿಂದಿರುಗಿದನು.

ರಾತ್ರಿಯಲ್ಲಿ ಪಿಂಗಳನು ತಾಯಿಗೆ ತಾನು ತಂದ ಇನ್ನೂರು ಮೊಹರಿಗಳನ್ನು ಕೊಟ್ಟನು. ಅಷ್ಟು ಹಣವನ್ನು ನೋಡಿದ ಕೂಡಲೇ ತಾಯಿ ಹೆದರಿಕೆಯಿಂದ ನಡುಗಿ ಹೋದಳು.

ಥಕ್ಕನೆ ಅವಳ ಮಾತಾಡುವ ಶಕ್ತಿ ಬಿದ್ದು ಹೋಯಿತು. ಮಗನ ಮುಖವನ್ನೇ ಸ್ವಲ್ಪ ಹೊತ್ತು ರೆಪ್ಪೆ ಬಡಿಯದೆ ನೋಡಿದಳು. ಆಮೇಲೆ ಅವಳ ನಾಲಗೆ ಕದಲಿತು.

"ಅಪ್ಪಾ! ಇನ್ನಾದರೂ ನೀನು ಆ ಸರೋವರದ ಕಡೆಗೆ ಹೋಗುವುದನ್ನು ಬಿಡು. ನನಗೇನೋ ದೊಡ್ಡ ಭಯವಾಗಿದೆಯಪ್ಪಾ!" ಎಂದಳು.

"ಭಯವೇನೂ ಇಲ್ಲಮ್ಮ. ಇದರಲ್ಲಿ ಸುಳ್ಳು ಕಳ್ಳತನ ಏನೂ ಇಲ್ಲವಷ್ಟೆ? ಮತ್ತೇನಿದೆ ಹೆದರಲಿಕ್ಕೆ? ಈ ಸಂಗತಿ ಮಾತ್ರ ಯಾರಿಗೂ ಗೊತ್ತಾಗದಂತೆ ಜಾಗರೂಕಳಾಗಿರು. ನೀನು ಹೆದರದೆ ಧೈರ್ಯದಿಂದಿದ್ದರೆ ಯಾರಿಗೂ ಗೊತ್ತಾಗದು. ಹೆದರಿಕೊಂಡಿದ್ದರೇ ಯಾರಿಗಾದರೂ ಸಂದೇಹ ಬರೋದು." ಎಂದನು ಪಿಂಗಳ.

ಆ ರಾತ್ರಿ ಪಿಂಗಳನಿಗೆ ಸರಿಯಾಗಿ ನಿದ್ದೆ ಬರಲಿಲ್ಲ. ಬೆಳಬೆಳಗಾಗುವುದರೊಳಗೆ ಮೀನಿನ ಬಲೆಯನ್ನು ಭುಜದ ಮೇಲೆ ಹಾಕಿಕೊಂಡು ಶುಕಸರೋವರದ ಕಡೆಗೆ ಹೋದನು. ನೀರಿಗೆ ಬಲೆಬೀಸುವ ಕೆಲಸ

ಮಾಡುತ್ತಿದ್ದರೂ ದೃಷ್ಟಿಯೂ ಲಕ್ಷ್ಯವೂ ದೂರ ಮೈದಾನದ ಕಡೆಗೇ ಓಡುತ್ತಿದ್ದಿತು.

ಸರಿಯಾಗಿ ಹೊತ್ತು ನೆತ್ತಿಗೆ ಬರುವ ವೇಳೆಯಲ್ಲಿ ಮೈದಾನನ ಕಡೆಯಿಂದ ಧೂಳೆಬ್ಬಿಸುತ್ತ ಒಬ್ಬ ಕುದುರೆ ಸವಾರನು ಬರುವುದು ಪಿಂಗಳನ ಕಣ್ಣಿಗೆ ಬಿತ್ತು. ನೋಡನೋಡುತ್ತಿದ್ದಂತೆ ಅವನು ಅಲ್ಲಿಗೇ ಬಂದು, "ಪಿಂಗಳಾ! ನನ್ನ ಹೆಸರು ಪದ್ಮಪಾದ. ನನಗೊಂದು ಸಹಾಯ ಮಾಡಬೇಕು ನೀನು! ಸಿದ್ಧನಾಗಿರುವೆಯಷ್ಟೆ? " ಎಂದನು.

"ಓ! ಸಹಾಯಕ್ಕೇನು, ಮಾಡುತ್ತೇನೆ. ಈ ಸರೋವರದಲ್ಲಿ ಬಿದ್ದು ಆತ್ಮಹತ್ಯ ಮಾಡಿಕೊಳ್ಳ ಬೇಕೆಂಬ ಪ್ರತಿಯೊಬ್ಬರಿಗೂ ಸಹಾಯ ಮಾಡುವುದೇ ನನ್ನ ಕೆಲಸ. ಅದಕ್ಕೆ ನೀವು ಮುನ್ನೂರು ಮೊಹರಿ ಕೊಡಬೇಕಾಗುತ್ತದೆ. ಅದಕ್ಕಿಂತ ಕಡಿಮೆಗೆ ಇನ್ನು ಸಾಧ್ಯವಿಲ್ಲ" ಎಂದನು ಪಿಂಗಳ.

"ಅದಕ್ಕೇನು? ನಾನು ಸತ್ತುಹೋದರೆ ಮುನ್ನೂರು ಮೊಹರಿಗಳನ್ನು ಕಾಂಚನ ಮಿಶ್ರರು ನಿನಗೆ ಕೊಡುತ್ತಾರೆ" ಎಂದು ಪದ್ಮಪಾದನು ನೆಗಾಡಿ ಕುದುರೆಯ ಬೆನ್ನಿನಲ್ಲಿ ನೇತಾಡುತ್ತಿದ್ದ ಹಗ್ಗವನ್ನು ತೆಗೆದು ಪಿಂಗಳನ ಕೈಗೆ ಕೊಟ್ಟನು.

ಪಿಂಗಳನು ಹಗ್ಗ ತೆಗೆದುಕೊಂಡು ಪದ್ಮಪಾದನ ಕೈಗಳನ್ನು ಬೆನ್ನಿಗೆ ತಿರುವಿ ಜೋಡಿಸಿ ಕಟ್ಟಿ, ಅವನನ್ನು ಎತ್ತಿ ಹೆಗಲಿಗೆ ಹಾಕಿಕೊಂಡು ಸರಸ್ಸಿನ ತೀರಕ್ಕೆ ಒಯ್ದು, ಸರೋವರದೊಳಗೆ ಬೀಸಿ ಹಾಕಿದ ಕೂಡಲೇ "ಮುಗಿಯಿತು ಇವನ ಕತೆ! ಇನ್ನು ತಲೆ ಎತ್ತುವುದೆಲ್ಲಿ ಬಂತು?" ಎನ್ನುತ್ತಾ ಹಿಂದಿರುಗಿ ಕುದುರೆಯ ಬಳಿಗೆ ಹೋದನು.

ಪಿಂಗಳನು ಸರೋವರದ ಕಡೆಗೆ ನೋಡುವ ಗೊಡವೆಗೇ ಹೋಗದೆ, ಕುದುರೆಯನ್ನು ಹತ್ತಿ ಹೊರಡಲು ನೋಡುವಾಗ, ಸರೋವರದಿಂದ ಪದ್ಮಪಾದನ ಕೂಗು ಕೇಳಿಸಿತು. "ಪಿಂಗಳಾ! ನನ್ನನ್ನು ಬೇಗ ಬಲೆ ಬೀಸಿ. ತೀರಕ್ಕೆ ಎಳೆದುಕೋ ನಿನಗೆ ಪುಣ್ಯ ಬರುತ್ತೆ. ಬೇಗ ಬಾ!" ಎಂದು ಅವನು ಗಟ್ಟಿಯಾಗಿ ಕೂಗ ತೊಡಗಿದನು.



ಪಿಂಗಳನು ಕುದುರೆಯ ಮೇಲಿನಿಂದ ಕೆಳಗೆ ಧುಮುಕಿ, ದಾಪುಗಾಲೋಟದಿಂದ ಬಂದು ಸರೋವರಕ್ಕೆ ಬಲೆ ಬೀಸಿ ಎಳೆದನು. ಪದ್ಮಪಾದನು ತೇಕುತ್ತ, ಆಯಾಸಪಡುತ್ತ ತೀರಕ್ಕೆ ಬಂದುಬಿದ್ದನು. ಅವನ ಕೈಯಲ್ಲಿ ಎರಡು ಮೊಸಳೆ ಮರಿಗಳಿದ್ದುವು.

ಪಿಂಗಳನು ಆಶ್ಚರ್ಯದಿಂದ ಮೊಸಳೆಯ ಮರಿಗಳನ್ನು ನೋಡಿ ಏನೋ ಕೇಳಬೇಕೆಂದಿರಲು, ಪದ್ಮಪಾದನು ಕುದುರೆಯ ಬಳಿಗೆ ಹೋಗಿ, ಅದರ ಮೇಲಿದ್ದ ಚೀಲದೊಳಗಿನಿಂದ ಒಂದು ಗಾಜಿನ ಜಾಡಿಯನ್ನು ಹೊರ ತೆಗೆದು, ಮೊಸಳೆಯ ಮರಿಗಳನ್ನು ಅದರೊಳಗೆ ಹಾಕಿ ಮುಚ್ಚಿದನು.

ಪಿಂಗಳನು ಪದ್ಮಪಾದನನ್ನೂ, ಮೊಸಳೆ ಮರಿಗಳನ್ನೂ ಅನುಮಾನದಿಂದ ನೋಡುತ್ತ, "ಪದ್ಮಪಾದರೆ ! ನೀವು ಬಹಳ ಅದೃಷ್ಟವಂತರೇ ಸರಿ. ಬದುಕಿ ಹೊರಬಿದ್ದಿದ್ದೀರಿ, ಅದು ಸರಿ. ಈಗ ನನಗೆ ಮುನ್ನೂರು ಮೊಹರಿ ಸಿಗಬೇಕಷ್ಟೆ ? ಅದಕ್ಕೇನು ಹೇಳುವಿರಿ ?" ಎಂದು ಕೇಳಿದನು.

ಪದ್ಮಪಾದನು ಆಪ್ಯಾಯತೆಯಿಂದ ಪಿಂಗಳನನ್ನು ಆಲಿಂಗಿಸಿ, "ಪಿಂಗಳಾ, ನಿನಗೆ ಆ ಮುನ್ನೂರು ಮೊಹರಿಗಳೇನು ಬಿಡು. ಲಕ್ಷ ಕೋಟಿ ಮೊಹರಿಗಳನ್ನು ಕೊಡುತ್ತೇನೆ. ನಿನ್ನನ್ನು ಪ್ರಪಂಚದಲ್ಲಿ ಎಲ್ಲರಿಗಿಂತ ಹೆಚ್ಚಿನ ಧನವಂತನಾಗಿ ಮಾಡುತ್ತೇನೆ. ನೀನು ಮಾತ್ರ ನನ್ನ ಜತೆಯಲ್ಲಿ ಭಲ್ಲೂಕ ಪರ್ವತಗಳವರೆಗೆ ಬರಬೇಕಾಗಿರುತ್ತದೆ" ಎಂದನು.

"ಭಲ್ಲೂಕ ಪರ್ವತಗಳ ವರೆಗೋ ? ಅಬ್ಬೋ! ಆ ಹೆಸರು ಕೇಳಿದರೇನೆ ನನಗೆ ಭಯ. ನನ್ನ ಅಮ್ಮ ಆ ಪರ್ವತಗಳನ್ನು ಕುರಿತು ಬಹಳ ಸಮಾಚಾರ ಹೇಳಿದ್ದಾಳೆ, ಆ ಬೆಟ್ಟಗಳು ಪಿಶಾಚಗಳಿಗೆ ನಿಲಯವೆಂದು ಕೇಳಿದ್ದೇನೆ" ಎಂದನು ಪಿಂಗಳ.

"ಪಿಶಾಚಗಳೂ ದೆವ್ವಗಳೂ ಭೂತಗಳೂ ನಿನ್ನನ್ನು ಏನು ಮಾಡಲೂ ಸಾಧ್ಯವಿಲ್ಲ; ಈ ಪ್ರಪಂಚದಲ್ಲಿ ಮೂವರೆಂದರೆ ಮೂವರೇ ದೊಡ್ಡ ಮಾಂತ್ರಿಕರಿದ್ದಾರೆ. ಅವರಲ್ಲಿ ಇಬ್ಬರನ್ನು ಸ್ವತಃ ನೀನೇ ಈ ಸರೋವರಕ್ಕೆ ಬಲಿಕೊಟ್ಟಿರುವೆ. ಈಗ



ಉಳಿದವನು ನಾನೊಬ್ಬನೇ. ನನಗಿಂತ ಹೆಚ್ಚಿನವನು ಇನ್ನು ಮೇಲೆ ಹುಟ್ಟಬೇಕು" ಎಂದನು ಪದ್ಮಪಾದ.

"ಅದೇನೋ ನನಗೊಂದೂ ಅರ್ಥವಾಗಲಿಲ್ಲ" ಎಂದನು ಪಿಂಗಳ.

"ಹಾಗಾದರೆ ನೀನು ನನಗೆ ಸಹಾಯಕನಾಗ ಬೇಕಾಗಿರುವುದರಿಂದ ನಿನಗೆ ಎಲ್ಲಾ ಸಂಗತಿಯನ್ನೂ ಹೇಳುತ್ತೇನೆ, ಕೇಳು" ಎಂದು ಪದ್ಮಪಾದನು ಹೀಗೆ ಹೇಳಲು ತೊಡಗಿದನು:

"ನಾವು ಮೂರು ಜನರು ಅಣ್ಣ ತಮ್ಮಂದಿರು. ನಮ್ಮ ತಂದೆ ದೊಡ್ಡ ಮಂತ್ರವೇತ್ತರು. ಅವರು ತಮ್ಮ ಮಂತ್ರಶಕ್ತಿಯಿಂದ ಅನೇಕರಿಗೆ ಒಳಿತು ಮಾಡಿದ್ದಾರೆ. ಕೆಲವರಿಗೆ ಕೆಡುಕು ಕೂಡಾ ಮಾಡಿದ್ದಾರೆ. ಅವರು ನಾವು ಮೂವರಿಗೂ ಚಿಕ್ಕಂದಿನಿಂದಲೇ ಸ್ವಲ್ಪವೂ ಪಕ್ಷಪಾತ ತೋರಿಸದೆ ಮಂತ್ರವಿದ್ಯೆಗಳಲ್ಲಿ ಪ್ರವೇಶ ಗೊಳಿಸಿ ಚೆನ್ನಾಗಿ ಕಲಿಸಿಕೊಟ್ಟಿದ್ದಾರೆ. ಅವರು ವೃದ್ಧಾಪ್ಯಕ್ಕೆ ಪ್ರವೇಶಿಸುವಾಗಲೇ ತೀರಿ ಹೋದರು. ಸಾಯುವ ಮೊದಲು ಇರುವ ಆಸ್ತಿ ಪಾಸ್ತಿಗಳನ್ನೆಲ್ಲಾ ನಾವು ಮೂವರಿಗೂ ಸರಿಸಮ ವಾಗಿ ಹಂಚಿಕೊಟ್ಟರು. ಆದರೆ ಅವರು ತಮಗೆ ತಿಳಿದ ಮಂತ್ರವಿದ್ಯೆಗಳನ್ನೆಲ್ಲಾ ಬರೆದಿಟ್ಟ ಪುಸ್ತಕ ವನ್ನು ಮಾತ್ರ ನಮಗಾರಿಗೂ ಕೊಡದೆ, ನಿಮ್ಮಲ್ಲಿ ಯಾರು ಹೆಚ್ಚಿನ ಶಕ್ತಿಶಾಲಿಯೋ ಅವರಿಗೆ ಅದು ಸಿಗುತ್ತದೆ' ಎಂದು ಹೇಳಿ ಸತ್ತುಹೋದರು. ಅವರು ಸತ್ತ ಮರುಕ್ಷಣದಿಂದಲೇ ನಾವು ಅಣ್ಣ ತಮ್ಮಂದಿರೊಳಗೆ ಮೇಲಾಟದ ಸ್ಪರ್ಧೆ ಶುರು ವಾಯಿತು. ನಮ್ಮಲ್ಲಿ ಪ್ರತಿಯೊಬ್ಬನಿಗೂ ಆ ಮಂತ್ರ ಗ್ರಂಥವನ್ನು ತನ್ನದಾಗಿ ಮಾಡಿಕೊಳ್ಳಬೇಕೆಂಬ ಹಟ ಹುಟ್ಟಿತು. ಒಬ್ಬರ ಮೇಲೊಬ್ಬರು ಮಂತ್ರಶಕ್ತಿ ಯನ್ನು ಪ್ರಯೋಗಿಸಲು ತಯಾರಾದೆವು.

ಅಣ್ಣ ತಮ್ಮಂದಿರು ಒಬ್ಬರನ್ನೊಬ್ಬರು ನಾಶ ಪಡಿಸಲು ಸಿದ್ಧರಾಗುವ ಸಮಯದಲ್ಲಿ, ನಮ್ಮ ತಂದೆಗೆ ಮಂತ್ರ ವಿದ್ಯೆ ಕಲಿಸಿದ ಗುರುಗಳು ನಮ್ಮ ಮನೆಗೆ ಬಂದರು, ಅವರು ನಮ್ಮ ಜಗಳಾಟ ನೋಡಿ, ಬಹಳ ಖೇದಗೊಂಡರು. ಮೂವರನ್ನೂ ಒಂದು ಕಡೆಯಲ್ಲಿ ಕುಳ್ಳಿರಿಸಿ, 'ನಿಮ್ಮ ತಂದೆ ಬಿಟ್ಟು ಹೋದ ಆ ಪುಸ್ತಕವನ್ನು ಕುರಿತು ನಿಮಗೇನೂ ತಿಳಿಯದು. ಆದ್ದರಿಂದಲೇ ಜಗಳಕ್ಕೆ ಬಿದ್ದಿದ್ದೀರಿ, ನಿಮ್ಮಲ್ಲಿ ಯಾರು ಹೆಚ್ಚಿನ ಶಕ್ತಿವಂತರಾದರೆ ಅವರಿಗೆ ಆ ಪುಸ್ತಕ ಲಭಿಸುತ್ತದೆಂದು ನಿಮ್ಮ ತಂದೆ ಹೇಳಿದ್ದಾರಷ್ಟೆ ? ಆದ್ದರಿಂದ ಆ ಪುಸ್ತಕದಲ್ಲಿರುವ ಮಂತ್ರಶಕ್ತಿಗಳು ನಿಮ್ಮ ಅಧೀನಕ್ಕೆ ಬರಬೇಕಾದರೆ, ಮೊದಲು ನೀವು ಸಾಧಿಸಬೇಕಾದುದು ಬಹಳವಿದೆ' ಎಂದರು. ಅದೇ ನೆಂದು ಅವರನ್ನು ಕೇಳಿದೆವು. ಅವರು ಆ ವಿವರ ಗಳನ್ನು ಕುರಿತು ಹೀಗೆಂದರು : —(ಇನ್ನೂ ಇದೆ)






## ೩

[ಪಿಂಗಳನ ಸಹಾಯದಿಂದ ಪದ್ಮಪಾದನು ಸರೋವರದೊಳಗಿನಿಂದ ಎರಡು ಮೊಸಳೆ ಮರಿಗಳನ್ನು ಹಿಡಿದುಕೊಂಡು ಮೇಲೆ ಬಂದನು. ಆಮೇಲೆ ಪಿಂಗಳನಿಗೆ ತಾನು ಯಾರೆಂಬುದನ್ನು ಹೇಳಿ, ಭಲ್ಲೂಕ ಪರ್ವತಗಳವರೆಗೆ ತನ್ನೊಂದಿಗೆ ಬರಬೇಕೆಂದು ಅವನೊಂದಿಗೆ ಹೇಳಿದನು. ತನ್ನ ತಂದೆಯ ಗುರುವಾದ ವೃದ್ಧನೊಬ್ಬನು ಮಹಾಮಾಯನೆಂಬ ಮಂತ್ರವೇತ್ತನನ್ನು ಕುರಿತು ಹೇಳಿದ ವೃತ್ತಾಂತವನ್ನು ಪಿಂಗಳನಿಗೆ ಹೇಳತೊಡಗಿದನು.]

ಆ ಭಲ್ಲೂಕ ಪರ್ವತಗಳ ಕಣಿವೆಯಲ್ಲಿ ಅಂಕುಡೊಂಕಾಗಿ ಅಲ್ಲಲ್ಲಿ ಸುಳಿಗಳಿಂದೊಡಗೂಡಿ ಹರಿಯುವ ನದಿಯೊಂದಿದೆ. ಆ ನದಿಯ ಗರ್ಭದಲ್ಲಿ ಒಂದು ದೇವಾಲಯವು ಪಾಳುಬಿದ್ದು ಹುದುಗಿದೆ. ಆ ದೇವಾಲಯದಲ್ಲಿಯೇ ಮಹಾ ಮಾಯನೆಂಬ ದೊಡ್ಡ ಮಾಂತ್ರಿಕನು ಸಮಾಧಿಯಾಗಿದ್ದಾನೆ. ಅವನು ಸಮಾಧಿಯಾದ ಜಾಗದಲ್ಲಿ ಮುಖ್ಯವಾದ ಮೂರು ವಸ್ತುಗಳಿವೆ. ಒಂದು, ಅವನ ಬೆರಳಿನಲ್ಲಿರುವ ಉಂಗುರ, ಅದನ್ನು ಧರಿಸಿದವನಿಗೆ ಭೂಗರ್ಭದೊಳಗಿರುವ ನಿಧಿ ನಿಕ್ಷೇಪಗಳೆಲ್ಲಾ ಕಂಡು ಬರುತ್ತವೆ. ಎರಡನೆಯದು, ವಜ್ರಗಳು ಹೊದಿಸಲ್ಪಟ್ಟ ಹಿಡಿಕೆಯುಳ್ಳ ಕತ್ತಿ. ಅದರಿಂದ ಹೊರಡುವ ಅಗ್ನಿಕಣಗಳು ಎಂತಹ ಶತ್ರುವನ್ನಾದರೂ ನಾಶಮಾಡುತ್ತವೆ. ಮೂರನೆಯದು ಬಂಗಾರದಿಂದ ಮಾಡಲ್ಪಟ್ಟ ಭೂಗೋಳ. ಈ ಭೂಗೋಳವನ್ನು ಸಂಪಾದಿಸಿಕೊಂಡವನು ಅದನ್ನು ಗುಂಡಗೆ ತಿರುಗಿಸಿ, ತಾನು ಯಾವ ದೇಶಕ್ಕೆ ಚಕ್ರವರ್ತಿಯಾಗಬೇಕೆಂದು ನೆನೆಸಿದರೆ, ಕೂಡಲೇ ಅವನ ಕೋರಿಕೆ ನೆರವೇರಿ ಬಿಡುತ್ತದೆ. ಆ ಮೂರು ವಸ್ತುಗಳನ್ನು ವಶಪಡಿಸಿಕೊಂಡವರಿಗೆ ಎಲ್ಲಿಯೂ ಯಾವುದೂ ಯಾರೂ ಇದಿರುನಿಲ್ಲಲು ಸಾಧ್ಯವಿಲ್ಲ.



ಆ ಮಹಾ ಮಾಯನ ಈ ಮೂರು ವಸ್ತುಗಳನ್ನು ಸಂಪಾದಿಸಬೇಕಾದರೆ, ಮೊದಲು ಶುಕ ಸರೋವರದಲ್ಲಿ ಮೊಸಳೆಗಳ ರೂಪದಲ್ಲಿರುವ ಆವನ ಶಿಷ್ಯರನ್ನು ಕೈವಶ ಮಾಡಿಕೊಳ್ಳಬೇಕು. ಇದಕ್ಕೆ ಪಿಂಗಳನೆಂಬ ಹೆಸರಿರುವ ಮೀನುಗಾರನ ಸಹಾಯ ಅಗತ್ಯವಾಗುತ್ತದೆ. ಆಮೇಲೆ ಅದೇ ಪಿಂಗಳನ ಸಹಾಯದಿಂದಲೇ ಮಹಾಮಾಯನ ಉಂಗುರ; ಕತ್ತಿ, ಭೂಗೋಳಗಳನ್ನು ಕೂಡಾ ಸಾಧಿಸಿಕೊಳ್ಳಬೇಕು. ಆ ಮೂರು ವಸ್ತುಗಳನ್ನೂ ಸಾಧಿಸಿಕೊಂಡವರಿಗೆ ಮಾತ್ರವೇ ನಿಮ್ಮ ತಂದೆ ಬಿಟ್ಟು ಹೋದ ಮಂತ್ರಗ್ರಂಥದಿಂದ ಪ್ರಯೋಜನವಾಗುತ್ತದೆ. ಆದುದರಿಂದ ಮೊದಲು ಆ ಮೂರು ವಸ್ತುಗಳು ವಶವಾಗಬೇಕು.

"ಗೊತ್ತಾಯಿತೇ ಪಿಂಗಳಾ, ನಮ್ಮ ತಂದೆಯ ಗುರುಗಳು ಇಷ್ಟರ ವರೆಗೆ ಹೇಳಿ, ನಾವು ಮೂವರ ಮುಖಗಳನ್ನೂ ಪರೀಕ್ಷಿಸಿ ನೋಡಿದರು. ಶುಕ ಸರೋವರದೊಳಗೆ ಮೊಸಳೆಯ ರೂಪಧರಿಸಿಕೊಂಡಿರುವ ಮಹಾ ಮಾಯನ ಶಿಷ್ಯರನು ಮೊದಲು ಕೈವಶ ಪಡಿಸಿಕೊಳ್ಳಬೇಕಾಗಿರುತ್ತದೆಂದು ಕೇಳಿದ ಕೂಡಲೇ ನನ್ನ ಸರ್ವಾಂಗವೂ ಜುಮ್ಮೆಂದಿತು. ಮಹಾ ಮಾಂತ್ರಿಕನಾದ ಮಹಾ ಮಾಯನ ಶಿಷ್ಯರೊಂದಿಗೆ, ಅದರಲ್ಲೂ ಅವರು ಮೊಸಳೆಗಳಾಗಿ ನೀರಿನ ಅಡಿಯಲ್ಲಿರುವಾಗ ಅವರೊಂದಿಗೆ ಹೋರಾಡುವುದೆಂದರೆ ಸಾಮಾನ್ಯ ಕೆಲಸವೇನಲ್ಲ. ಇದನ್ನು ಯೋಚಿಸುತ್ತಾ ಮಾತಾಡದೆ ಸುಮ್ಮನಿದ್ದೆ.

"ನನ್ನ ಉಳಿದಿಬ್ಬರು ಸಹೋದರರು ಕೂಡಾ ಇದನ್ನು ಕೇಳಿ ನನ್ನ ಹಾಗೆಯೇ ಹೆದರಿಕೊಂಡರು. ಗುರುಗಳು ನಾವು ಮೂವರನ್ನೂ ನೋಡಿ, ನಮ್ಮ ಅಂತರ್ಯ ತಿಳಿದವರಂತೆ ಗಟ್ಟಿಯಾಗಿ ನಗಾಡಿ, 'ಮಹಾ ಮಾಯನ ಶಿಷ್ಯರನ್ನು ಜಯಿಸುವುದರಲ್ಲಿ, ನಾನು ಹೇಳಿದ ಮೀನುಗಾರ ಪಿಂಗಳನನ್ನು ಮರೆತಿರೇನು ? ನಿಮಗೆ ಅವನು ತುಂಬಾ ಸಹಾಯ ಮಾಡಬಲ್ಲನು. ಆದರೆ ನೀವು ಮಾತ್ರ ಈ ಪ್ರಯತ್ನದಲ್ಲಿ ಪ್ರಾಣ ಕೊಡಬೇಕಾಗಿ ಬಂದರೂ ಬರಬಹುದು. ಇದನ್ನು ಮುಂದಾಗಿ ನಿಮಗೆ ಹೇಳಿ ಎಚ್ಚರಿಸುವೆನು. ಏಕೆಂದರೆ ಎಚ್ಚರಿಕೆಯಿಂದಿದ್ದರೆ ಪ್ರಾಣ ಉಳಿಸಿಕೊಳ್ಳಲೂಬಹುದು' ಎಂದರು.

"ಹೀಗೆ ಗುರುಗಳು ಹೇಳಿದ ಮಾತಿಗೆ ನಾವು ಮೂವರು ಸಹೋದರರಲ್ಲಿ ಮೊದಲು ಮಂಡನನು ಉತ್ತರಕೊಟ್ಟನು. 'ನಾನು ಈ ಕಾರ್ಯಕ್ಕೆ ತಯಾರಾಗಿದ್ದೇನೆ. ನಮ್ಮ ತಂದೆ ಬಿಟ್ಟು ಹೋದ ಮಂತ್ರಗ್ರಂಥದ ಮೇಲಿರುವ ನಿಷ್ಠೆ ನನಗೆ ನನ್ನ ಪ್ರಾಣದ ಮೇಲೆ ಕೂಡಾ ಇಲ್ಲ. ಸಿಕ್ಕಿದರೆ ನನ್ನ ಅದೃಷ್ಟ ಹೋದರೆ ಎಂದೋ ಒಂದು ದಿನ ಹೋಗುವ ಜೀವ!' ಎಂದನು.

"ಅವನು ಹಾಗೆ ಹೇಳಿದ ಕೂಡಲೇ ನನಗೂ ಅನುರೂಪವಾಗಿಯೂ ಕೂಡಾ ಧೈರ್ಯ ಬಂತು.



ನಾವೂ ಮಹಾಮಾಯನ ಶಿಷ್ಯರೊಂದಿಗೆ ಹೋರಾಡಲು ಸಿದ್ಧರಾಗಿರುವೆವೆಂದು ಹೇಳಿದೆವು. ಆಗ ಗುರುಗಳು ನಮಗೆ ಶುಕಸರೋವರಕ್ಕೆ ಹೋಗುವ ದಾರಿಯನ್ನು ಹೇಳಿ, ನಿನ್ನಿಂದ ಕೈ ಕಟ್ಟಿಸಿಕೊಂಡು, ಸರೋವರದ ನೀರಿಗೆ ಹಾಕಿಸಿಕೊಂಡ ಮೇಲೆ, ಏನು ಮಾಡಬೇಕೆಂಬುದನ್ನೆಲ್ಲಾ ಹೇಳಿದರು. ಗುರುಗಳು ಹೇಳಿದ ಹಾಗೆ ನೀನೂ ಮಾಡಬೇಕಾದ ಸಹಾಯ ಮಾಡಿದಿ"

ಎಂದು ಪದ್ಮಪಾದನು ಹೇಳಿದುದನ್ನೆಲ್ಲ ಕೇಳಿ, "ಓಹೋ! ನಿಮ್ಮ ಸಮಾಚಾರ ಬಹಳ ಅದ್ಭುತವೇ ಸರಿ. ಈವರೆಗೆ ನೀವು ಮೂವರಿಗೂ ನಾನು ಮಾಡಿದ ಸಹಾಯವೇನೋ ಆಯಿತಪ್ಪ? ಈಗ ನಿಮ್ಮೊಂದಿಗೆ ನಾನು ಭಲ್ಲೂಕ ಪರ್ವತಗಳ ಕಡೆಗೆ ಬರಬೇಕಾದ ಆಗತ್ಯವೇನಿದೆ? ಅಸಲು ನಿಮ್ಮ ಗೊಡವೆ ನನಗೇಕೆ?" ಎಂದು ಕೇಳಿದನು.

ಪದ್ಮಪಾದನು ಅವನ ಪ್ರಶ್ನೆಯನ್ನು ಕೇಳಿ ಸ್ವಲ್ಪ ಆಲೋಚನೆ ಮಾಡಿ, ಆಮೇಲೆ ಪಿಂಗಳನ ಬೆನ್ನನ್ನು ಆಪ್ಯಾಯತೆಯಿಂದ ತಡವುತ್ತ, "ಪಿಂಗಳಾ, ನೀನು ನನ್ನನ್ನು ಕುರಿತು ತುಂಬಾ ಹೆದರಿಕೊಳ್ಳುವ ಹಾಗಿದೆ, ನನ್ನಿಂದ ನಿನಗೆ ಎಂತಹ ಕೆಡುಕೂ ಆಗಲಾರದು. ಅದಕ್ಕೆ ಬದಲಾಗಿ ಬಹುದೊಡ್ಡ ಒಳ್ಳೆಯದೇ ಆಗುತ್ತದೆಂದು ನಂಬು. ನದಿಯ ಗರ್ಭದಲ್ಲಿರುವ ಮಹಾ ಮಾಯನು ಸಮಾಧಿಯಾದ ಪಾಳು ದೇವಳದೊಳಗೆ ಪ್ರವೇಶಿಸಬೇಕಾದವನೇ ನೀನು. ಆ ಕೆಲಸ ಬೇರೊಬ್ಬರಿಂದ ಸಾಧ್ಯವಾಗುವಂತಹುದಲ್ಲ" ಎಂದನು.

"ಎಷ್ಟಾದರೂ ನಾನೊಬ್ಬ ಸಾಮಾನ್ಯ ಮನುಷ್ಯ. ನೀವು ಸಾಮಾನ್ಯದವರಲ್ಲ. ನಿಮ್ಮಿಂದ ನನಗೇನೂ ಹಾನಿಯಾಗುವುದಿಲ್ಲವೆಂದು ನನಗೆ ಪ್ರಮಾಣ ಮಾಡಿ ನಂಬಿಗೆ ಹುಟ್ಟಿಸಬಲ್ಲಿರಾ?" ಎಂದು ಪಿಂಗಳನು ನೇರಾಗಿಯೇ ಕೇಳಿದನು.

ಪದ್ಮಪಾದನು ಪ್ರಮಾಣಮಾಡಿ ಹೇಳಿದನು. ಅದನ್ನು ಕೇಳಿ ಪಿಂಗಳನು ಆದುದಾಗಲೆಂದು ನಂಬಿದನು. ಆಗ ಅವನಿಗೆ ತಾಯಿಯ ನೆನಪು ಬಂದಿತು. "ನಾನು ಭಲ್ಲೂಕ ಪರ್ವತಗಳ ಕಡೆಯಿಂದ ಹಿಂದಿರುಗಿ ಬರಲು ಎಷ್ಟು ದಿನ ಹಿಡಿದೀತು?" ಎಂದು ಕೇಳಿದನು.

"ಎರಡೇ ತಿಂಗಳು. ಅದಕ್ಕಿಂತ ಹೆಚ್ಚು ಕಾಲ ಬೇಕಾಗುವುದಿಲ್ಲ. ನೀನು ಕೆಲಸ ಮುಗಿದು ಮನೆಗೆ ಹಿಂದಿರುಗುವಾಗ ಹೀಗೆ ಇರಲಾರಿ. ನಿನ್ನನ್ನು ಈ ಪ್ರಪಂಚದಲ್ಲಿ ಎಲ್ಲರಿಗಿಂತ ಹೆಚ್ಚಿನ ಧನವಂತನಾಗಿ ಮಾಡುವೆನೆಂದು ಮಾತುಕೊಟ್ಟಿದ್ದೇನಪ್ಪ?" ಎಂದನು ಪದ್ಮಪಾದ.

"ಆ ಮಾತು ಆಮೇಲಿನದಾಯಿತು. ಪ್ರಸ್ತುತ ನಾನು ನಾಳೆಯ ಗತಿಯನ್ನು ಹುಡುಕುವ ಪರಿಸ್ಥಿತಿಯಲ್ಲಿರುವ ಬಡವ. ದಿನಾ ನಾನು ಸಂಪಾದಿಸಿದರೇನೇ ದಿನ ಸಾಗಬೇಕು. ನಾನು ಮನೆಯಲ್ಲಿಲ್ಲದ ಎರಡು

ತಿಂಗಳವರೆಗೆ ನನ್ನ ತಾಯಿಯೂ ಸಹೋದರರೂ ಬದುಕುವ ದಾರಿ ಹೇಗೆ ಹೇಳಿ ?" ಎಂದನು ಪಿಂಗಳ.

"ಅಷ್ಟೇ ತಾನೇ ?" ಎಂದು ಪದ್ಮಪಾದನು ಕುದುರೆಯ ಮೇಲೆ ನೇತಾಡುವ ಒಂದು ಚೀಲದೊಳಗಿನಿಂದ ಸಾವಿರ ಮೊಹರಿಗಳನ್ನು ತೆಗೆದು ಪಿಂಗಳನಿಗೆ ಕೊಡುತ್ತ, "ಈ ಹಣವನ್ನು ನಿನ್ನ ತಾಯಿಗೆ ಕೊಟ್ಟು ಬಾ. ನಿನ್ನ ಕ್ಷೇಮವನ್ನು ಕುರಿತು ಆಕೆ ಹೆದರಬೇಕಾದ ಅಗತ್ಯವೇನಿಲ್ಲ. ನಾಳೆ ಇದೇ ಹೊತ್ತಿಗೆ ಇಲ್ಲಿಗೆ ಬಂದು ನನ್ನನ್ನು ನೋಡು.. ಕಾದಿರುತ್ತೇನೆ" ಎಂದನು.

ಪಿಂಗಳನು ಪದ್ಮಪಾದನು ಕೊಟ್ಟ ಹಣವನ್ನು ತೆಗೆದುಕೊಂಡು ಬಹಳ ಸಂತೋಷದಿಂದ ಮನೆಗೆ ಹೋದನು. ಆಗ ಮನೆಯಲ್ಲಿ ಅವನ ಅಣ್ಣಂದಿರು ಇರಲಿಲ್ಲ. ತಾಯಿಯೊಬ್ಬಳೇ ಅವನ ದಾರಿಯನ್ನು ಇದಿರುನೋಡಿಕೊಂಡಿದ್ದಳು. ಪಿಂಗಳನು ತಾನು ತಂದ ಸಾವಿರ ಮೊಹರಿಗಳನ್ನು ತಾಯಿಯ ಮುಂದೆ ಸುರಿದನು. ಅದನ್ನು ನೋಡಿ ಅವಳು ಗದಗದ ನಡುಗಿದಳು. ಅವಳ ಬಾಯಿಯಿಂದ ಮಾತೇ ಹೊರಡಲಿಲ್ಲ. ಮಗನ ಮುಖವನ್ನೇ ರೆಪ್ಪೆ ಬಡೆಯದೆ ನೋಡುತ್ತಿದ್ದಳು.

"ಏನೂ ಭಯವಿಲ್ಲಮ್ಮಾ. ನ್ಯಾಯವಾದ ಹಣವಿದು! ಒಂದು ಚೂರು ಅನ್ಯಾಯವೂ ಇದರಲ್ಲಿಲ್ಲ" ಎಂದನು ಪಿಂಗಳ ನಗುತ್ತ.

"ಇಷ್ಟು ಹಣ ಎಲ್ಲಿಂದಲೋ ಕಂದಾ ? ನನಗೇನೋ ಸಂಶಯವಾಗಿದೆಯಪ್ಪಾ ! ಇದೇನೋ ನಮ್ಮ ಒಳ್ಳೆಯದಕ್ಕೆ ಅಂತ ನನಗೆ ಕಾಣುವುದಿಲ್ಲಪ್ಪಾ, ಮಗಾ" ಎಂದಳು ತಾಯಿ.

ಪಿಂಗಳನು ನಡೆದ ಸಮಾಚಾರವನ್ನೆಲ್ಲಾ ತಾಯಿಗೆ ಹೇಳಿದನು. ಇನ್ನು ಎರಡೇ ತಿಂಗಳೊಳಗೆ ಕ್ಷೇಮವಾಗಿ ಮನೆಗೆ ಹಿಂದಿರುಗಿ ಬರುವೆನೆಂದೂ, ಸ್ವಲ್ಪವೂ ಹೆದರಬೇಕಾಗಿಲ್ಲವೆಂದೂ ತಾಯಿಗೆ ಧೈರ್ಯ ಹುಟ್ಟಿಸಿದನು.

"ಏನೋ ಅಪ್ಪ! ಮಾಂತ್ರಿಕರ ಒಳ್ಳೆಯ ತನದಲ್ಲಿ ನನಗೇನೋ ನಂಬುಗೆ ಬರುವುದಿಲ್ಲ, ಈ ಪದ್ಮ



ಪಾದನು ಎಲ್ಲರ ಹಾಗಿನವನಲ್ಲವೆಂದು ಹೇಳುತ್ತೀ. ನಮ್ಮನ್ನೆಲ್ಲಾ ತಿಳಿದವನಂತಿದ್ದಾನೆ. ನೀನು ಹೋಗದಿದ್ದರೂ ಕೆಡುಕೇ ಬರಬಹುದು. ಅವನಿಗೆ ಕೋಪ ಬಂದರೆ ಕಷ್ಟವೇ. ದೇವರ ದಯದಿಂದ ನಿನಗೇನೂ ಕಷ್ಟಬಾರದಿರಬೇಕು. ಭಲ್ಲೂಕ ಪರ್ವತಗಳಿಂದ ಸುಖವಾಗಿ ಹಿಂದಿರುಗಿ ನೀನು ಬರುವ ಹಾಗೆ ಮಾಡುವಂತೆ ಮುಕ್ಕೋಟಿ ದೇವತೆಗಳನ್ನೂ ಬೇಡಿಕೊಂಡಿರುತ್ತೇನೆ" ಎಂದಳು ತಾಯಿ.

ಮರುದಿನ ಪದ್ಮಪಾದನು ಹೇಳಿದ ಸಮಯಕ್ಕೆ ಪಿಂಗಳನು ಶುಕ ಸರೋವರದ ಕಡೆಗೆ ಹೋದನು. ಸರೋವರದ ತೀರದಲ್ಲಿ ಪದ್ಮಪಾದನೊಬ್ಬನೇ ಸುಮ್ಮನೆ ಕುಳಿತಿದ್ದನು. ಅವನ ಬದಿಯಲ್ಲಿ ಒಂದು ಚೀಲದ ಹೊರತು ಮತ್ತೇನೂ ಇದ್ದಿಲ್ಲ. ಪ್ರಯಾಣಕ್ಕೆ ಬೇಕಾದ ಕುದುರೆಯೋ ಬೇರೆ ಯಾವ ವಾಹನವೋ ಅಲ್ಲೆಲ್ಲೂ ಕಾಣಲಿಲ್ಲ.

ಪಿಂಗಳನು ಅವನ ಬಳಿಗೆ ಹೋಗಿ, "ನಾನೇನೋ ಹೇಳಿದ ಹಾಗೆ ಬಂದುಬಿಟ್ಟೆನು. ನಿಮ್ಮನ್ನು ನೋಡಿದರೆ ನಾವು ಕಾಲು ನಡಿಗೆಯಿಂದಲೇ ಪ್ರಯಾಣಮಾಡಬೇಕೆಂದು ಕಾಣುತ್ತದೆ." ಎಂದನು.

"ಕಾಲು ನಡಿಗೆಯಿಂದಲೋ ? ಅದು ನಡೆಯುವ ಮಾತಲ್ಲ. ಭಲ್ಲೂಕ ಪರ್ವತಗಳ ಹತ್ತಿರ ಹೋಗಬೇಕಾದರೆ ನಾವು ಮುನ್ನೂರು ಮೈಲು ದೂರ ಪ್ರಯಾಣ ಮಾಡಬೇಕು. ಆ ಪ್ರಯಾಣಕ್ಕೆ ಸಾಧಾರಣ ಕುದುರೆಗಳೂ ಪ್ರಯೋಜನವಿಲ್ಲ. ಇನ್ನೆರಡು ದಿನಗಳಲ್ಲಿ ಒಂದು ಪರ್ವದಿನ ಬರುತ್ತದೆ. ಆ ದಿನದಲ್ಲಿ ನಾವು ಭಲ್ಲೂಕಪರ್ವತಗಳ ಹತ್ತಿರ ಇರಲೇಬೇಕು. ಇಕೋ, ನೋಡು ನಮಗೆ ತಕ್ಕ ವಾಹನಗಳನ್ನು!" ಎಂದು ಹೇಳಿ ಪದ್ಮಪಾದನು ಒಂದು ಚಿಟಿಕಿ ಮಣ್ಣು ತೆಗೆದುಕೊಂಡು ಏನೋ ಮಂತ್ರವನ್ನು ಜಪಿಸಿ, ನೆಲದ ಮೇಲೆ ಚೆಲ್ಲಿದನು.

ಮರು ಕ್ಷಣದಲ್ಲಿ ಫಡಫಡ ಶಬ್ದಗಳಿಂದ ಭೂಮಿ ಒಡೆಯಿತು. ಆ ಒಡಕಿನೊಳಗಿನಿಂದ ತಲೆಯನ್ನೆತ್ತಿಕೊಂಡು, ಕರ್ಣ ಕಠೋರವಾಗಿ ಓಂಡ್ರಿಸುತ್ತ ಎರಡು ಕತ್ತೆಗಳು ಹೊರಗೆ ಹಾರಿ ಕುಣಿದು ನಿಂತವು. ಪದ್ಮ





ಪಾದನು ಅವುಗಳಲ್ಲಿ ಒಂದರ ಮೇಲೆ ತನ್ನ ಹತ್ತಿರವಿದ್ದ ಚೀಲವನ್ನು ನೇತಾಡುವಂತೆ ಕಟ್ಟಿ, ಅದರ ಮೇಲೆ ಏರಿ ಕುಳಿತುಕೊಂಡನು. ಪಿಂಗಳನು ಭಯಕಂಪಿತನಾಗಿ, ಏನು ಮಾಡಬೇಕೆಂದು ತೋರದೆ, ಆ ಎರಡು ಕತ್ತೆಗಳ ಕಡೆಗೆ ರೆಪ್ಪೆ ಬಡಿಯದೆ ನೋಡುತ್ತ ಕದಲದೆ ನಿಂತಿದ್ದನು.

"ಪಿಂಗಳಾ, ಅದು ನಿನ್ನ ವಾಹನ. ಏರಿ ಕುಳಿತುಕೋ. ನಾವು ಹೋಗಬೇಕಾದ ಪ್ರದೇಶ ಬಹುದೂರವಲ್ಲ ವೇನು? ಇನ್ನು ಹೊರಡೋಣ. ಸೊಗಸಾದ ವಾಹನ ಗಳು ಇವೇ. ಏರಿಕೋ" ಎಂದನು ಪದ್ಮಪಾದನು ಉತ್ಸಾಹದಿಂದ ನಗುತ್ತ.

"ಇವು ಮಾಮೂಲು ಕತ್ತೆಗಳಲ್ಲವಯ್ಯಾ. ಪಿಶಾಚಿ ಕತ್ತೆಗಳು. ನಾನು ನಿಮ್ಮ ಹಾಗೆ ಮಂತ್ರವಾದಿಯಲ್ಲ ವಷ್ಟೆ? ಹತ್ತಿ ಬಿಟ್ಟರೆ ಏನಾಗುತ್ತೋ! ಭಯ ವಾಗಿದೆ!" ಎಂದನು ಪಿಂಗಳ.

"ಇವು ಮಾಮೂಲು ಕತ್ತೆಗಳಲ್ಲವೆಂಬುದು ನಿಜವೇ. ಪಿಶಾಚಿಗಳಾದ ಮಾತ್ರಕ್ಕೆ ನೀನು ಹೆದರ ಬೇಕಾಗಿಲ್ಲ. ನಾವು ಹೇಳಿದ ಹಾಗೆ ಇವು ನಡೆಯು ತ್ತವೆ. ವಾಯುವೇಗ ಮನೋವೇಗಗಳಿಂದ ಪ್ರಯಾಣ ಮಾಡುತ್ತವೆ. ನಾನಿರುವಾಗ ನೀನೇನೂ ಹೆದರ ಬೇಕಾಗಿಲ್ಲ." ಎಂದನು ಪದ್ಮಪಾದ.

ಪದ್ಮಪಾದನ ಮಾತು ಕೇಳಿದ ಮೇಲ ಪಿಂಗಳನಿಗೆ ಧೈರ್ಯ ಬಂತು. ಆದುದಾಗಲೆಂಬ ಮೊಂಡು ಹಟದಿಂದ ಆ ಕತ್ತೆಯ ಮೇಲೆ ಏರಿ ಕುಳಿತನು. ಮರುಕ್ಷಣದಲ್ಲಿ ಎರಡು ಕತ್ತೆಗಳೂ ಗಟ್ಟಿಯಾಗಿ ಓಂಡ್ರಿಸಿ, ಸ್ವಲ್ಪ ಹೊತ್ತು ನೆಲದಲ್ಲಿ ಓಡುತ್ತಾ; ಹಾಗೆಯೇ ಆಕಾಶಕ್ಕೇರಿ ಸ್ವಲ್ಪ ದೂರ ಸಾಗಿ, ಮತ್ತೆ ನೆಲದಲ್ಲಿ ಮತ್ತೆ ಆಕಾಶದಲ್ಲಿ ಹೀಗೆ ಓಡುತ್ತಲೇ ಇದ್ದುವು. ಅವುಗಳ ವೇಗಕ್ಕೆ ಗಾಳಿ ಸ್ಯೊಂ ಸ್ಯೊಂ ಶಬ್ದದಿಂದ ಸೀಳಿ ಸೀಳಿ ದಾರಿ ಬಿಡುವುದು ಸ್ಪಷ್ಟ ವಾಗಿ ಗೊತ್ತಾಗುತ್ತಿದ್ದಿತು.

ಕತ್ತಲೆ ಮುಸುಗುವ ಸಮಯಕ್ಕೆ ಒಂದಾನೊಂದು ಕಾಡಿನ ಪ್ರಾಂತವನ್ನು ತಲುಪಿದರು. ಪದ್ಮಪಾದನು ಮೊದಲು ಕತ್ತೆಯಿಂದ ಕೆಳಗಿಳಿದು, "ಪಿಂಗಳಾ, ಈ ರಾತ್ರಿಯಲ್ಲಿ ಇಲ್ಲಿಯೇ ಇದ್ದು ದಣಿವಾರಿಸಿಕೊಳ್ಳೋಣ. ಉಳಿದಿರುವ ದೂರವನ್ನು ನಾಳೆ ಸಾಯಂಕಾಲ ದೊಳಗೆ ಮುಗಿಸಬಹುದು" ಎಂದನು. ಬಹಳ ವಾಗಿ ದಣಿದಿದ್ದ ಪಿಂಗಳನಿಗೆ ಅದು ಒಳ್ಳೆಯ ದೆನಿಸಿತು.

ಅಲ್ಲಿರುವ ಹಚ್ಚಗಿನ ಹುಲ್ಲುಗಾವಲಿನಲ್ಲಿ ಸ್ವಲ್ಪ ಹೊತ್ತು ಕುಳಿತ ಮೇಲೆ, ಪಿಂಗಳನಿಗೆ ತಣ್ಣಗೆ ಸ್ನಾನ ಮಾಡಬೇಕೆಂದು ತೋರಿತು. ಈ ಪ್ರಾಂತದಲ್ಲಿ ಎಲ್ಲಿಯಾದರೂ ಜಲಾಶಯವಿದೆಯೇ ಎಂದು ಪದ್ಮ ಪಾದನನ್ನು ಕೇಳಿದನು. ಪದ್ಮಪಾದನು ಕಾಡಿನ ಕಡೆಗೆ ಕೈ ತೋರಿಸಿ, "ಅಗೋ, ಆ ಕಾಡಿನೊಳಗೆ ಒಂದು ಕೊಳವಿದೆ. ಹೋಗಿ ಮಿಂದು ಬಂದುಬಿಡು. ಆ ಪ್ರಾಂತದಲ್ಲಿ ಯಾರನ್ನಾದರೂ ನೋಡಿದರೆ ನೀನೇನೂ ಹೆದರಬೇಕಾಗಿಲ್ಲ" ಎಂದನು.



ಪಿಂಗಳನು ಆವನು ತೋರಿಸಿದ ಕಡೆಗೆ ಹೊರಟನು. ಯಾರನ್ನಾದರೂ ನೋಡಿದರೆ ಹೆದರಬೇಕಾಗಿಲ್ಲವೆಂದು ಪದ್ಮಪಾದನು ಏಕೆ ಹೇಳಿದನೆಂದು ಅವನಿಗೆ ಅರ್ಥವಾಗಲಿಲ್ಲ. ಅವನು ಜಾಗರೂಕನಾಗಿ ಮರಗಳ ಬುಡದಲ್ಲಿ ನಡೆಯುತ್ತ, ಮುಂದೆ ಹೋಗಲು ಒಂದು ಕೊಳವಿರುವುದು ಕಂಡಿತು. ನಿರ್ಮಲವಾಗಿದ್ದ ಆ ಕೊಳದ ನೀರು ಅವನಿಗೆ ಬಹಳ ಸಂತೋಷವನ್ನುಂಟು ಮಾಡಿತು. ಅವನು ಉತ್ಸಾಹದಿಂದ ಆ ಕೊಳಕ್ಕೆ ಇಳಿಯಲು ನೋಡಿದನು. ಅಷ್ಟರಲ್ಲಿ ಆ ಪ್ರದೇಶವೆಲ್ಲಾ ನಡುಗುವ ಹಾಗೆ ದೀನಸ್ವರ ಹೊರಟಿತು. "ಯಾರಿದ್ದೀರಯ್ಯೋ! ನನ್ನನ್ನು ಈ ಕಟ್ಟಿನಿಂದ ಬಿಡಿಸಿರಪ್ಪಾ! ನಿಮಗೆ ಸಹಾಯಕನಾಗಿರುತ್ತೇನೆ, ನನ್ನನ್ನು ಕಾಪಾಡಿರಯ್ಯಾ."

ಪಿಂಗಳನು ಆ ಸ್ವರವನ್ನು ಕೇಳಿ ಬೆಚ್ಚಿಬಿದ್ದನು. ಅವನ ದೃಷ್ಟಿ ಆ ಧ್ವನಿ ಬಂದ ಕಡೆಗೆ ಹೋಯಿತು. ಕೊಳದ ತೀರದಲ್ಲೊಂದು ಕಡೆ, ಎರಡು ದೊಡ್ಡ ಬಂಡೆ ಕಲ್ಲುಗಳಿಗೆ ಸಂಕೋಲೆಯಿಂದ ಬಂಧಿಸಲ್ಪಟ್ಟ ಕರ್ರಗಿನ ವಿಕೃತಾಕಾರದ ಮನುಷ್ಯನೊಬ್ಬನು ಅವನ ಕಣ್ಣಿಗೆ ಬಿದ್ದನು.

ಪಿಂಗಳನು ಆ ಭಯಂಕರ ಮನುಷ್ಯನನ್ನು ನೋಡಿ ಧೃತಿಗೆಟ್ಟವನಾಗಿ, ಅಲ್ಲಿಂದ ಹಿಂದಿರುಗಿ ಓಡಿಬಿಡಲು ಹವಣಿಸಿದನು. ಅಷ್ಟರಲ್ಲಿ ಆ ವಿಕೃತಾಕಾರನು ಬಲವಾದ ಸಂಕೋಲೆಗಳಿಂದ ಕಲ್ಲುಗಳಿಗೆ ಕಟ್ಟಲ್ಪಟ್ಟಿರುವುದು ನೆನಪಾಗಿ ಧೈರ್ಯದಿಂದ ನೋಡುತ್ತಾ ನಿಂತಲ್ಲೇ ನಿಂತು ಬಿಟ್ಟನು.

"ಓ! ಮಹಾಪ್ರಭೂ! ಮಹಾಸ್ವಾಮೀ! ನನ್ನ ಕೈಗಳಿಗಿರುವ ಸಂಕೋಲೆಯನ್ನು ಮುರಿದು ನನ್ನನ್ನು ಕಾಪಾಡಿಬಿಡಿ. ನಾನು ನಿಮಗೆ ಎಂತಹ ಸಹಾಯ ಬೇಕಾದರೂ ಮಾಡುತ್ತೇನೆ" ಎಂದು ಆ ವಿಕೃತಾಕಾರನು ಪಿಂಗಳನನ್ನು ನೋಡಿ ಪದೇ ಪದೇ ಕೂಗತೊಡಗಿದನು.

ಅಷ್ಟು ಹೊತ್ತಿಗೆ ಪಿಂಗಳನಿಗೆ ಚೆನ್ನಾಗಿ ಧೈರ್ಯ ಬಂದಿತು. ಅವನು ಮೆಲ್ಲ ಮೆಲ್ಲನೆ ಹೆಜ್ಜೆ ಇಡುತ್ತ ಆ ವಿಕೃತಾಕಾರನ ಹತ್ತಿರ ಹೋದನು. ಹತ್ತಿರದಲ್ಲಿ ನೋಡುವಾಗ ವಿಕೃತಾಕಾರನು ಇನ್ನಷ್ಟು ಭಯಂಕರವಾಗಿ ಕಂಡನು. ತಾಳೇ ಮರದ ಅಡಿಭಾಗದಂತೆ ಅವನ ಕಾಲುಗಳಿದ್ದುವು. ಜಡೆಗಳ ಪೊದರಿನಂತೆ ಮೈ ತುಂಬಾ ಕೂದಲ ರಾಶಿಯೂ, ಆನೆಯಂತಹ ಕಿವಿಗಳೂ, ಬೆಂಕಿಯನ್ನುಗುಳುವ ಕಣ್ಣುಗಳೂ ಪಿಂಗಳನನ್ನು ಗಡ ಗಡ ನಡುಗಿಸಿದುವು.

"ಸಂದೇಹಪಡಬೇಡಿ ಸ್ವಾಮೀ! ನನ್ನನ್ನು ಕಾಪಾಡಿರಿ. ನಿಮಗೆ ಎಂತಹ ಸಹಾಯ ಬೇಕಾದರೂ ಮಾಡುತ್ತೇನೆ. ಈ ಮೂರು ಲೋಕಗಳಲ್ಲಿ ಎಲ್ಲಿಗೆ ಬೇಕಾದರೂ ನಿಮ್ಮನ್ನು ಹೊತ್ತುಕೊಂಡು ಹೋಗುತ್ತೇನೆ" ಎಂದನು ವಿಕೃತಾಕಾರದವನು.

ಪಿಂಗಳನು ಆ ಮಾತು ಕೇಳಿ ನಕ್ಕು "ನೀನು ಮೂರು ಲೋಕಗಳಿಗೆ ಮಾತ್ರವೇ ಹೊರುವವನಾದರೆ

ಹದಿನಾಲ್ಕು ಲೋಕಗಳಿಗೂ ನನ್ನನ್ನು ಹೊತ್ತು ಕೊಂಡು ಓಡುವ ಕತ್ತೆಯೇ ನನಗಿದೆ, ನಿನ್ನನ್ನು ನೋಡಿದರೆ ಕತ್ತೆಗಿಂತಲೂ ಬಲವಾಗಿರುವವನಾಗಿ ಕಾಣುವಿ. ಬುದ್ಧಿ ಕೂಡಾ ನಿನಗೆ ಕತ್ತೆಗಿಂತ ಹೆಚ್ಚೇ ಇದ್ದೀತು. ಏನು ನಿನ್ನ ಹೆಸರು ?" ಎಂದು ಕೇಳಿದನು.

"ನನ್ನ ಹೆಸರು ಭಲ್ಲೂಕಕೇತು" ಎಂದನು ಆ ವಿಕೃತಾಕಾರಿ.

"ಹಾಗಾದರೆ ಇಲ್ಲಿಗೆ ಸಮೀಪದಲ್ಲಿರುವ ಭಲ್ಲೂಕ ಪರ್ವತಗಳ ಸಮಾಚಾರ ನಿನಗೆ ಗೊತ್ತೇನು ?" ಎಂದು ಪಿಂಗಳನು ಪ್ರಶ್ನಿಸಿದನು.

"ಭಲ್ಲೂಕ ಪರ್ವತಗಳ ಸಮಾಚಾರವೋ ?" ಎಂದು ವಿಕೃತಾಕಾರದವನು ನಕ್ಕು "ನಾನು ಆ ಭಲ್ಲೂಕ ಪರ್ವತಗಳಿಗೆ ಒಂದು ಸಾರಿ ಅಧಿಪತಿ ಯಾಗಿದ್ದವನು. ಒಬ್ಬ ಮಾಂತ್ರಿಕನಿಂದಾಗಿ ನನಗೆ ಈ ದುರ್ದೆಶೆ ಬಂದಿದೆ. ನೀವು ನನ್ನನ್ನು ಈ ಬಂಧನ ದಿಂದ ಬಿಡಿಸಿ ಬಿಟ್ಟರೆ, ಆ ಪರ್ವತಗಳಲ್ಲಿರುವ ಸರ್ವ ಸಂಪತ್ತುಗಳನ್ನೂ ನಿಮ್ಮದಾಗಿ ಮಾಡಿಬಿಡುತ್ತೇನೆ" ಎಂದನು ವಿಕೃತಾಕಾರಿ.

ಭಲ್ಲೂಕ ಕೇತು ಹಾಗೆ ಹೇಳಿದುದನ್ನು ಕೇಳಿ, ಪಿಂಗಳನಿಗೆ ಎಲ್ಲಿಲ್ಲದಷ್ಟು ಆಸೆ ಗುಂಪುಗುಂಪಾಗಿ ಎದ್ದು ಕೊಂಡಿತು. "ಈ ಭಲ್ಲೂಕ ಕೇತುವಿನ ಸಹಾಯದಿಂದ ಭಲ್ಲೂಕ ಪರ್ವತಗಳಲ್ಲಿರುವ ನಿಧಿ ನಿಕ್ಷೇಪಗಳಷ್ಟನ್ನೂ ವಶಪಡಿಸಿಕೊಳ್ಳಬಹುದು. ಬೇಕಾದರೆ ಅದರಲ್ಲಿ ಪದ್ಮಪಾದನಿಗೂ ಭಾಗ ಕೊಟ್ಟರಾಯಿತು. ಅವನು ನನಗೆ ಕೊಡುವುದನ್ನು ಮಹಾಪ್ರಸಾದವೆಂದು ಸ್ವೀಕರಿಸುವ ಹಂಗೇನಿಲ್ಲವಷ್ಟೆ?" ಎಂದುಕೊಂಡನು.

"ಹಾಗಾದರೆ ನಿನ್ನನ್ನು ಈ ಸಂಕೋಲೆ ಬಂಧನ ದಿಂದ ಬಿಡುಗಡೆ ಮಾಡುತ್ತೇನೆ. ಆಮೇಲೆ ನೀನು ನನಗೆ ಕೆಡುಕು ಮಾಡುವುದಿಲ್ಲ ಎಂಬುದಕ್ಕೆ ನಂಬುಗೆ ಏನಿದೆ ?" ಎಂದು ಕೇಳಿದನು ಪಿಂಗಳ.

ಭಲ್ಲೂಕಕೇತು ಆಸೆಯಿಂದ ಪಿಂಗಳನನ್ನು ನೋಡುತ್ತ, "ಸ್ವಾಮೀ, ಹೇಳಿದ ಮಾತು ತಪ್ಪಿದರೆ ತಲೆ ಒಡೆದು ಸಾಯುವೆನೆಂದು ನನಗೆ ಶಾಪವಿದೆ. ನಿಮಗೆ ಹಾನಿ ಮಾಡಲಾರೆನೆಂದು ಮಾತುಕೊಟ್ಟ ಮೇಲೆ, ನಾನು ಸಾಯಲಿಕ್ಕೆ ಸಿದ್ಧನಾದರೇನೇ ಮಾತು ತಪ್ಪಿಯೇನು. ನಂಬಿರಿ ಸ್ವಾಮೀ" ಎಂದನು.

ಪಿಂಗಳನಿಗೆ ಭಲ್ಲೂಕಕೇತುವಿನ ಮಾತಿನ ಮೇಲೆ ನಂಬುಗೆಯುಂಟಾಯಿತು. ಅವನು ಕೊಳದ ಬದಿ ಯಲ್ಲಿದ್ದ ಒಂದು ಕಲ್ಲನ್ನು ಎತ್ತಿಕೊಂಡು, ಸಂಕೋಲೆ ಯನ್ನು ಗುದ್ದಿ ಮುರಿಯಲು ಮುಂದಡಿ ಇಟ್ಟನು. ಆಗ ಹಿಂದಿನಿಂದ ಪದ್ಮಪಾದನು ಗಟ್ಟಿಯಾಗಿ "ಪಿಂಗಳಾ ! ನಿಲ್ಲು ನಿಲ್ಲು ! ದುಡುಕಬೇಡ !" ಎಂದು ಕೂಗಿದನು.

—(ಇನ್ನೂ ಇದೆ)






೪

[ ಪಿಂಗಳನು ಪದ್ಮಪಾದನೊಂದಿಗೆ ಭಲ್ಲೂಕಪರ್ವತಗಳ ಕಡೆಗೆ ಹೊರಟನು. ಪಿಶಾಚ ಕತ್ತೆಗಳ ಮೇಲೆ ಅವರು ಪ್ರಯಾಣಮಾಡುವಾಗ, ದಾರಿಯಲ್ಲಿ ಪಿಂಗಳನು ಮಾತ್ರ ಸ್ನಾನಮಾಡಿ ಬರುವೆನೆಂದು ಒಂದು ಕೊಳದ ಹತ್ತಿರ ಹೋದನು. ಅಲ್ಲಿ ಬಂಧಿಸಲ್ಪಟ್ಟ ಭಲ್ಲೂಕ ಕೇತು ಎಂಬುವನು ತನ್ನನ್ನು ಬಂಧ ಮುಕ್ತ ಮಾಡುವಂತೆ ಪಿಂಗಳನನ್ನು ಪ್ರಾರ್ಥಿಸಿದನು. ಪಿಂಗಳನು ಅದಕ್ಕೆ ಸಿದ್ಧನಾದಾಗ ಹಿಂದಿನಿಂದ ಪದ್ಮಪಾದನು ಅವನನ್ನು ಕೂಗಿ ತಡೆದನು.—]

ಅವಸರದಿಂದ ತನ್ನನ್ನು ಕೂಗಿ ತಡೆದ ಪದ್ಮಪಾದನ ಧ್ವನಿಯನ್ನು ಕೇಳಿ, ಪಿಂಗಳನು ಬೆಚ್ಚಿಬಿದ್ದು ಹಿಂದಿರುಗಿ ನೋಡಿದನು. ಬಂಧಿಸಲ್ಪಟ್ಟವನ ಸಂಕಲೆಯನ್ನು ಮುರಿಯಲು ಕೈಗೆತ್ತಿಕೊಂಡ ಕಲ್ಲು ಪಿಂಗಳನ ಕೈಯಿಂದ ಅವನಿಗೆ ತಿಳಿಯದಂತೆ ಜಾರಿ ಕೊಳದಲ್ಲಿ ಬಿದ್ದು ದೊಡ್ಡ ಶಬ್ದವಾಯಿತು. ಆಕಸ್ಮಾತ್ತಾಗಿ ಆದ ಆ ಶಬ್ದದಿಂದ ಪಿಂಗಳನು ಮತ್ತಷ್ಟು ಬೆಚ್ಚಿಬಿದ್ದನು.

ಅಷ್ಟರಲ್ಲಿ ಸಮೀಪಕ್ಕೆ ಬಂದ ಪದ್ಮಪಾದನು ಕೋಪದಿಂದ ಪಿಂಗಳನನ್ನು ನೋಡುತ್ತ, " ಪಿಂಗಳಾ, ಅವನು ಯಾರೆಂದು ಅಂದುಕೊಂಡೆ ? ಯಾರಾದರೂ ದೈನ್ಯಭಾವ ತೋರಿಸಿದ ಕೂಡಲೇ ಹಿಂದು ಮುಂದು ಯೋಚಿಸದೆ ಮಾಡಿಬಿಡುವುದೇನು ? " ಎಂದು ಪ್ರಶ್ನಿಸಿದನು.

ಪಿಂಗಳನು ಒಂದುಸಾರಿ ಭಲ್ಲೂಕ ಕೇತುವನ್ನು ನೋಡಿ, ಸುಮ್ಮನೆ ತಲೆ ತಗ್ಗಿಸಿ ನಿಂತನು, ಕಳವು ಮಾಡುವಾಗಲೇ ಸಿಕ್ಕಿಬಿದ್ದವನ ಹಾಗೆ, ನಾಚಿಗೆಯಾಗಿತ್ತು ಅವನಿಗೆ. ಗುರುವಿನ ಮುಂದೆ ಅಪರಾಧ ಮಾಡಿದ ಶಿಷ್ಯನ ಹಾಗಾಯಿತು ಅವನ ಸ್ಥಿತಿ.

ಆಗ ಭಲ್ಲೂಕ ಕೇತು ಪದ್ಮಪಾದನನ್ನು ಅನುಮಾನದಿಂದ ನೋಡುತ್ತ, "ಸ್ವಾಮಿ, ತಾವು ಯಾರು?



ಒಂದು ಪುಣ್ಯ ಕಾರ್ಯ ಮಾಡಲಿದ್ದ ಈ ಯುವಕ ನನ್ನು ಹೀಗೇಕೆ ತಡೆಯುತ್ತೀರಿ ? " ಎಂದು ಕೇಳಿದನು.

" ಪುಣ್ಯ ಕಾರ್ಯವೇ! " ಎಂದು ಪದ್ಮಪಾದನು ದೊಡ್ಡ ದನಿಯಿಂದ ನಕ್ಕು, " ನೀನು ಯಾರೆಂಬು ದನ್ನು ನಾನರಿಯೆನೆಂದುಕೊಂಡೆಯಾ ? ನನ್ನ ಹತ್ತಿರ ನಿನ್ನ ವಿನಯ ವಿಧೇಯತೆಗಳೊಂದೂ ನಡೆಯು ಲಾರದು. ನಿನ್ನನ್ನು ಕುರಿತು ಸರ್ವಸ್ವವನ್ನೂ ನಾನು ಎಂದೋ ತಿಳಿದಿದ್ದೇನೆ." ಎಂದು ಮತ್ತಷ್ಟು ನಕ್ಕನು.

ಕೂಡಲೇ ಪಿಂಗಳನು ಅವಮಾನವನ್ನು ತೊಡೆದು ಕೊಳ್ಳುವ ದಾರಿ ತಿಳಿದು, " ಇವನ ಹೆಸರು ಭಲ್ಲೂಕ ಕೇತುವಂತೆ. ನಾವು ಹೋಗತಕ್ಕ ಭಲ್ಲೂಕ ಪರ್ವತ ಗಳಿಗೆ ಇವನು ಅಧಿಪತಿಯಾಗಿದ್ದನಂತೆ. ಯಾವನೋ ಒಬ್ಬ ದೊಡ್ಡ ಮಾಂತ್ರಿಕನಿಂದ ತನಗೆ ಈ ದುರವಸ್ಥೆ ಬಂತೆಂದು ಹೇಳಿದ. ಅಷ್ಟು ದೊಡ್ಡವನಿಗೆ ಇಂಥಾ ಗತಿ ಬಂದದ್ದು ನೋಡಿ ಸಹಿಸಲಾಗದೆ ಅವನನ್ನು ಬಿಡಿಸಲು ನೋಡಿದೆ " ಎಂದನು.

" ಹೌದು ಹೌದು. ಒಬ್ಬಾನೊಬ್ಬ ಮಾಂತ್ರಿಕನಿಂದ ಇವನಿಗೆ ಈ ಗತಿ ಬಂದುದು ನಿಜವೇ. ಆ ಒಬ್ಬಾ ನೊಬ್ಬ ಮಾಂತ್ರಿಕನು ಯಾರೆಂದು ನೀನು ಬಲ್ಲೆಯಾ ಪಿಂಗಳಾ ? ಅವನಿಂದ ಇವನಿಗೆ ಏಕೆ ಈ ಗತಿ ಬಂತೆಂಬುದು ನಿನಗೆ ಗೊತ್ತೇ ? ಅಂತಹ ಮುಖ್ಯ ಸಂಗತಿ ತಿಳಿಯದೆ ಇವನ ಮಾತು ಮಾತ್ರ ಕೇಳಿ ಇವನನ್ನು ಬಿಡಿಸಲು ಮುಂದಾದೆಯಲ್ಲಾ ? " ಎಂದು ಪ್ರಶ್ನಿಸಿದನು ಪದ್ಮಪಾದ.

ತಿಳಿಯದು ಎಂಬಂತೆ ತಲೆಯಾಡಿಸಿ ಪಿಂಗಳನು ಭಲ್ಲೂಕ ಕೇತುವಿನ ಕಡೆಗೆ ನೋಡಿದನು.

" ಈ ಭಲ್ಲೂಕ ಕೇತುವನ್ನು ಹಿಡಿದು ಕಬ್ಬಿಣದ ಸಂಕಲೆಯಿಂದ ಇಲ್ಲಿರುವ ಬಂಡೆಗಲ್ಲಿಗೆ ಕಟ್ಟಿದವನು, ಒಬ್ಬಾನೊಬ್ಬ ಮಂತ್ರಗಾರನಲ್ಲ. ಬಹು ದೊಡ್ಡ ಮಂತ್ರಗಾರನಾದ ಮಹಾಮಾಯನು." ಎಂದು ಪದ್ಮಪಾದನು ಭಲ್ಲೂಕ ಕೇತುವನ್ನು ಸುಡುವ ಹಾಗೆ ತೀಕ್ಷ್ಣ ದೃಷ್ಟಿಯಿಂದ ನೋಡಿದನು.

ಭಲ್ಲೂಕ ಕೇತು ಆ ಮಾತುಗಳನ್ನು ಕೇಳಿ, ಕೋಪ ದಿಂದ ಹಲ್ಲು ಕಟಕಟ ಕಡಿಯುತ್ತ, " ನೀನಾರು ? ನನ್ನ ಸಂಗತಿಗಳೆಲ್ಲ ನಿನಗೆ ಹೇಗೆ ಗೊತ್ತಾಯಿತು? ಆ ಮಹಾಮಾಯನ ವೃತ್ತಾಂತವನ್ನು ನಿನಗೆ ಯಾರು ಹೇಳಿದರು ? ನೀನೇಕೆ ಈ ಕಡೆಗೆ ಬಂದೆ ? ನೀನು ಕೂಡಾ ಮಂತ್ರಗಾರನೇನೂ ಅಲ್ಲವಷ್ಟೆ ? " ಎಂದು ತೀವ್ರ ಸ್ವರದಿಂದ ಕೇಳಿದನು.

" ಹೌದು. ನಾನೂ ಮಂತ್ರಗಾರನೇ. ನನ್ನ ಹೆಸರು ಪದ್ಮಪಾದ. ಮಹಾಬಲಶಾಲಿಯಾಗಿ ಪಾತಾಳ ತಂತ್ರಿಯಾದ ನಿನ್ನನ್ನು ಜಯಿಸಿ, ನಿನ್ನನ್ನು ಈ ಬಂಡೆ ಗಲ್ಲಿಗೆ ಬಂಧಿಸಿದ ಆ ಮಹಾಮಾಯನ ಸಮಾಧಿಯ ಮೇಲೆಯೇ ದಾಳಿಮಾಡಲು ನಾನು ಹೊರಟಿದ್ದೇನೆ" ಎಂದನು ಪದ್ಮಪಾದ.

" ಹೌದೇನು? ಮಹಾಮಾಯನ ಸಮಾಧಿಯ ಮೇಲೆಯೇ ನೀವಿಬ್ಬರೂ ದಾಳಿ ಹೋಗುವವರೇ ?

ಅದು ನಿಜವೇ ಆದರೆ, ನೀವು ಮಹಾಮಂತ್ರವಾದಿಗಳಿರಬೇಕು. ಹಾಗಾದರೆ ನನ್ನ ವಿಜ್ಞಾಪನೆಯನ್ನು ಲಾಲಿಸಿರಿ. ಆ ಮಹಾಮಾಯನ ಬದ್ಧ ಶತ್ರುವಾದ ನನ್ನ ಸಹಾಯ ನಿಮಗೆ ಅಗತ್ಯವಾಗಿರುತ್ತದೆ. ಅದಕ್ಕಾಗಿ ನನ್ನನ್ನು ಈ ಕಷ್ಟದಿಂದ ಬಂಧಮುಕ್ತ ಮಾಡಿಬಿಡಿ. ಯಾವಾಗಲೂ ನಿಮ್ಮ ದಾಸನಾಗಿರುತ್ತೇನೆ." ಎಂದನು ಭಲ್ಲೂಕ ಕೇತು.

"ನಿನ್ನ ಸುಳ್ಳು ಪೊಳ್ಳು ಮಾತುಗಳನ್ನು ನಂಬಿಬಿಡುವಷ್ಟು ಮೂರ್ಖನಲ್ಲ ನಾನು. ಮೊದಲೇ ಹೇಳಿದೆನಲ್ಲಾ ನಿನ್ನನ್ನು ಪೂರ್ತಿ ಬಲ್ಲೆನೆಂದು ?" ಎಂದನು ಪದ್ಮಪಾದನು ನಗುತ್ತಾ.

ಪಿಂಗಳನು ಪದ್ಮಪಾದನ ಬಳಿಗೆ ಬರುತ್ತ, "ಪದ್ಮಪಾದರೇ. ಇವನನ್ನು ನಾವು ಕಾಪಾಡಬಹುದೆಂದೇ ಕಾಣುತ್ತದೆ. ಕಾರಣವೇನೆಂದರೆ, ಹೇಳಿದ ಮಾತು ತಪ್ಪಿದರೆ ತಲೆಯೊಡೆದು ಹೋಗುತ್ತದೆಂದು ಯಾರೋ ಅವನಿಗೆ ಶಾಪ ಕೊಡಾ ಕೊಟ್ಟಿದ್ದಾರಂತೆ" ಎಂದನು.

"ಅವನು ಹೇಳಿದ ಆ ಮಾತು ನಂಬಿಯೇ ನೀನು ಅಪಾಯದಲ್ಲಿ ಸಿಕ್ಕಿಕೊಳ್ಳಲು ಸಿದ್ಧನಾದೆ. ಮಹಾಮಾಯನ ಹತ್ತಿರವಿದ್ದ ಮಂತ್ರಶಕ್ತಿಯ ವಸ್ತುಗಳು ನಮ್ಮದಾಗುವವರೆಗೂ ಈ ಭಲ್ಲೂಕ ಕೇತುವನ್ನು ಬಿಡುಗಡೆ ಮಾಡಲೇ ಕೂಡದು. ಮೊದಲು ಆ ವಸ್ತುಗಳು ನಮ್ಮದೆಂದಾಗಲಿ. ಆಮೇಲೆ ಬೇಕಾದರೆ ಇವನನ್ನು ನಮ್ಮ ದಾಸನಾಗಿ ಮಾಡಿಕೊಳ್ಳಬಹುದು" ಎಂದನು ಪದ್ಮಪಾದ.

"ಹಾಗಾದರೆ ಸ್ವಾಮೀ..." ಎಂದು ಭಲ್ಲೂಕ ಕೇತು ಏನೋ ಹೇಳಲು ನೋಡುವಾಗ, ಪದ್ಮಪಾದನು ಅವನನ್ನು ತಡೆದು, "ಭಲ್ಲೂಕಾ, ನಿನ್ನ ನಯವಿನಯ ವಿಧೇಯತೆಗಳಾವುದೂ ನನ್ನನ್ನು ಮೋಸಪಡಿಸಲಾರವು. ಮಹಾಮಾಯನು ಸಮಾಧಿಗೊಂಡ ಪಾಳುದೇವಳದೊಳಗೆ ನಾನು ಪ್ರವೇಶಿಸಿದ ಮೇಲೆ, ನಿನ್ನನ್ನು ಈ ಬಂಧನದಿಂದ ಬಿಡುಗಡೆ ಮಾಡುತ್ತೇನೆ. ಅದುವರೆಗೂ ನೀನು ಇಲ್ಲಿ ಕಟ್ಟುಗೊಂಡಿರಲೇ ಬೇಕು !" ಎಂದು ಹೇಳಿ ಹಿಂದಿರುಗಿದನು. ಪಿಂಗಳನೂ ಅವನ ಹಿಂದೆಯೇ ಹೊರಟನು. "ಅಯ್ಯೋ ! ನನ್ನ ಹಣೆ ಬರೆಹವೇ ! ಹೂಂ !" ಎಂದು ಭಲ್ಲೂಕ ಕೇತು ಹಣೆ ಚಚ್ಚಿಕೊಂಡುದು ಕೇಳಿಸಿತು.



ಅವರು ಕತ್ತೆಗಳನ್ನು ಬಿಟ್ಟು ಕೆಳಗಿಳಿದ ಜಾಗಕ್ಕೆ ಬಂದರು. ಅಲ್ಲಿ ಹಸಿರು ಹುಲ್ಲುಗಾವಲಿನ ನೆಲ ಹಚ್ಚಗಿತ್ತೇ ಹೊರತು ಕತ್ತೆಗಳು ಈಗ ಕಾಣಲೇ ಇಲ್ಲ. ಪಿಂಗಳನು ಆಶ್ಚರ್ಯ ಪಡುತ್ತ ಸುತ್ತುಮುತ್ತಲೂ ನೋಡಿ, "ಪದ್ಮಪಾದರೇ, ನಮ್ಮ ಪಿಶಾಚಿ ವಾಹನಗಳು ಎಲ್ಲಿವೆ ? ಈ ಪ್ರಾಂತದಲ್ಲಿಯೇ ಮೇದುಕೊಂಡಿರಬಹುದೆಂದುಕೊಂಡಿದ್ದೆ. ಕಾಣುವುದಿಲ್ಲವೇಕೆ ?" ಎಂದನು.

"ಅವು ಕತ್ತೆಗಳ ರೂಪದಲ್ಲಿರುವ ಪಿಶಾಚಿಗಳೇ ಹೊರತು ನಿಜವಾದ ಕತ್ತೆಗಳಲ್ಲವಷ್ಟೆ ? ಅಂಥವುಗಳು




ಹುಲ್ಲು ಮೇದು ಹೊಟ್ಟೆ ತುಂಬಿಸುತ್ತವೇನು ? ಅವೆರಡೂ ಆಹಾರ ಸಂಪಾದನೆಗೆ ಹೋಗಿವೆ. ಈಗ ನಮ್ಮ ಹೊಟ್ಟೆಯ ಸಂಗತಿ ನೋಡಬೇಕು." ಎಂದು ಪದ್ಮಪಾದನು ಹೊಟ್ಟೆ ತಡವಿಕೊಳ್ಳುತ್ತ ನೆಲದಲ್ಲಿ ಹಾಸಿರುವ ಮೆತ್ತಗಿನ ಜಮಖಾನೆಯಂತಹ ಹಸಿರು ಹುಲ್ಲುಗಳ ಮೇಲೆ ಕುಳಿತು, ಪಿಂಗಳನನ್ನೂ ಕುಳಿತು ಕೊಳ್ಳುವಂತೆ ಸನ್ನೆದೋರಿದನು.

ಪಿಂಗಳನು ಕೂಡಾ ಅವನ ಪಕ್ಕದಲ್ಲೇ ಕುಳಿತು, "ಅದು ನಿಜವೇ. ನನಗೂ ಒಳ್ಳೆಯ ಹಸಿವೆಯಾಗುತ್ತಾ ಇದೆ. ನಾವು ನಮ್ಮೊಂದಿಗೆ ಆಹಾರ ತಂದುಕೊಳ್ಳಲು ಮರೆತುಬಿಟ್ಟೆವು. ಈಗ ಈ ಕಾಡಿನಲ್ಲಿ ತಿನ್ನುವಂಥಾದ್ದು ಏನಿದೆಯೋ ಹುಡುಕಬೇಕಾಯಿತು. ಅಪ್ಪಣೆ ಯಾಗಲಿ" ಎಂದನು.

ಪದ್ಮಪಾದನು, ಪಿಂಗಳನು ಆಹಾರ ಹುಡುಕಲು ಅಪ್ಪಣೆ ಕೇಳಿದುದನ್ನು ನೋಡಿ ನಕ್ಕು, "ಪಿಂಗಳಾ, ನನ್ನ ಅಪ್ಪಣೆ ಕೇಳು. ಅಗೋ ಅಲ್ಲಿರುವ ಆ ಕಂದು ಬಣ್ಣದ ಚೀಲವನ್ನು ಇತ್ತ ತೆಗೆದುಕೊಂಡು ಬಾ" ಎಂದು ಸಮೀಪವಿದ್ದ ಚೀಲವನ್ನು ತೋರಿಸಿದನು.

ಪಿಂಗಳನು ಆ ಚೀಲವನ್ನು ಎತ್ತಿಕೊಂಡು, ಅದರೊಳಗೆ ಕೈ ತೂರಿಸಿ ಏನಿದೆಯೋ ಎಂದು ಹುಡುಕಿದನು. ಖಾಲೀ ಚೀಲವನ್ನು ನೋಡಿ ನಿರಾಶೆಯಾಯಿತು. ಅದರೊಳಗೆ ತಿಂಡಿ ತುಂಬಿಸಲು ಮರೆತನೋ ಅಥವಾ ಅದನ್ನೆತ್ತಿಕೊಂಡು ಗೆಡ್ಡೆಗೆಣಸು ಕಿತ್ತು ತರಲು ಹೇಳುವನೇನೋ ಎಂದುಕೊಂಡನು. ಅಷ್ಟರಲ್ಲಿ ಪದ್ಮಪಾದನು ಆ ಚೀಲವನ್ನು ತೆಗೆದುಕೊಂಡು, "ಪಿಂಗಳಾ, ನಿನಗೆ ಯಾವ ಬಗೆಯ ಭೋಜನ ಬೇಕು ? ಯಾವ ಯಾವ ಭಕ್ಷ್ಯಗಳು ಬೇಕು ? ನೆನೆದುಕೋ, ಕೇಳಿಕೋ. ದಾಕ್ಷಿಣ್ಯಪಡಬೇಡ" ಎಂದನು ನಗುತ್ತ.

"ಬಗೆಬಗೆಯ ತಿಂಡಿಗಳೇ! ಉರಿಯುವ ಹೊಟ್ಟೆಗೆ ಒಂದಿಷ್ಟು ಚಟ್ನೀ ಅನ್ನ ಸಿಕ್ಕಿದರೇ ಬ್ರಹ್ಮಾಂಡವಾಯ್ತು. ಈ ಚೀಲದಲ್ಲಿ ಏನಿದೆ ಮಣ್ಣು? ಎಲ್ಲಾ ನೆನೆಯುತ್ತಾ ಹೊಟ್ಟೆ ತುಂಬಿತೆಂದು ಕೂಡಾ ನೆನೆಯಬೇಕೇನು ?" ಎಂದನು ಪಿಂಗಳ.

ಪದ್ಮಪಾದನು ಚೀಲದ ಬಾಯಿ ಬಿಡಿಸಿ, ಅದರೊಳಗೆ ಮುಖವಿಟ್ಟು, ಮೆಲ್ಲಗೆ ಏನೋ ಮಂತ್ರವನ್ನು ಗೊಣಗಿ, "ಪಿಂಗಳಾ! ಈಗ ಚೀಲದೊಳಗೆ ಏನಿದೆಯೋ ನೋಡು" ಎಂದು ಚೀಲವನ್ನು ಪಿಂಗಳನ ಮುಂದಿಟ್ಟನು.

ಪಿಂಗಳನು ಆತುರದಿಂದ ಚೀಲದೊಳಗೆ ಕೈ ಹಾಕಿದನು. ಅವನ ಕೈಗೆ ಬಿಸಿಬಿಸಿಯಾದ ಒಂದು ಬೆಳ್ಳಿಯ ಪಾತ್ರ ತಗಲಿತು. ಅದನ್ನು ಹೊರಗೆತ್ತಿದಾಗ, ಅದರಲ್ಲಿ ಮಲ್ಲಿಗೆ ಮೊಗ್ಗೆಗಳಂತಹ ಅನ್ನ ತುಂಬಿತ್ತು. ಅವನು ಆಶ್ಚರ್ಯಪಡುತ್ತ ಪದ್ಮಪಾದನನ್ನು ನೋಡಿದನು.

ಪದ್ಮಪಾದನು ನಗುತ್ತ, "ನಿನಗೆ ಬೇಕಾದುದೆಲ್ಲವೂ ಪಲ್ಯ, ಚಟ್ನಿ, ಹುಳಿ, ಸಾರು, ಕೂಟು



ಪಾಯಸ ಕೂಡಾ ಆ ಚೀಲದಲ್ಲಿವೆ. ಬೇಗ ಬೇಗ ಹೊರಗೆ ತೆಗೆದಿಡು. ಎರಡು ಬಗೆ ಸಿಹಿ ಭಕ್ಷ್ಯಗಳೂ ಇವೆ ನೋಡು " ಎಂದನು.

ಹತ್ತು ನಿಮಿಷ ಕಳೆಯುವುದರೊಳಗೆ ಪಿಂಗಳನು ಆ ಚೀಲದೊಳಗಿನಿಂದ ಇಪ್ಪತ್ತೈದು ಬಗೆಯ ಮೇಲೋಗರ ಪದಾರ್ಥಗಳನ್ನು ಹೊರಗೆ ತೆಗೆದನು. ಪಾಯಸ ಕೂಡಾ! ಚೆನ್ನಾಗಿ ಹಸಿದುಕೊಂಡಿದ್ದ ಪದ್ಮಪಾದನೂ ಪಿಂಗಳನೂ ಲಕ್ಷಣವಾಗಿ ಕುಳಿತು ಊಟ ಮುಗಿಸಿ ತೃಪ್ತಿಯಿಂದ ತೇಗಿದರು. ಅನಂತರ ತುಂಬಿದ ಹೊಟ್ಟೆಯನ್ನು ತಡವುತ್ತಾ, ಸ್ವಲ್ಪ ಹೊತ್ತು ವಿಶ್ರಾಂತಿ ತೆಗೆದುಕೊಂಡು, ಮತ್ತೆ ಎದ್ದು ಮುಂದಿನ ಪ್ರಯಾಣಕ್ಕೆ ಸಿದ್ಧರಾದರು.

ಪದ್ಮಪಾದನು ಒಂದು ಚಿಟಿಕೆ ಮಣ್ಣು ತೆಗೆದುಕೊಂಡು ಮಂತ್ರಿಸಿ, ಭೂಮಿಯ ಮೇಲೆ ಹಾಕಿದ ಕೂಡಲೇ, ಫಟಫಟನೆ ಭೂಮಿ ಒಡೆಯಿತು. ಆ ಸೀಳಿನೊಳಗಿನಿಂದ ಕತ್ತೆಯ ರೂಪದ ಎರಡು ಪಿಶಾಚಿಗಳು ಭೀಕರವಾಗಿ ಗಾಂಡ್ರಿಸುತ್ತಾ ಮೇಲೆ ಬಂದುವು. ಅವು ಮೊದಲಿನ ಕತ್ತೆಗಳೇ. ಇಬ್ಬರೂ ಮೊದಲಿನಂತೆ ಆ ಕತ್ತೆಗಳ ಮೇಲೆ ಕುಳಿತು ಭಲ್ಲೂಕ ಪರ್ವತಗಳ ಕಡೆಗೆ ದಾರಿಬಿಟ್ಟರು.

ಎರಡು ಮೂರು ಗಂಟೆಗಳವರೆಗೆ ಪ್ರಯಾಣ ಸಾಗಿತು. ತರುವಾಯ ಭೂಮ್ಯಾಕಾಶಗಳು ಒರೆಸಿಕೊಂಡ ಹಾಗಿರುವ ಒಂದು ಜಾಗದಲ್ಲಿ, ಕರ್ರಗಿನ ಹೊಗೆ ಮುತ್ತಿಕೊಂಡಿರುವುದು ಕಂಡು ಬಂತು. ಪಿಂಗಳನು ಆ ಕಡೆಗೆ ಕೈ ನೀಡಿ ತೋರಿಸುತ್ತ, "ಪದ್ಮಪಾದರೇ, ಅಲ್ಲಿ ಕಾಣುವುದು ಮೋಡವೋ, ಹೊಗೆಯೋ ? ವಿಚಿತ್ರವಾಗಿ ಕದಲುತ್ತಾ ಇದೆ ! " ಎಂದು ಕೇಳಿದನು.

ಪದ್ಮಪಾದನು ಸ್ವಲ್ಪ ಹೊತ್ತು ಆ ಕಡೆಗೆ ಪರೀಕ್ಷಿಸಿ ನೋಡಿ, "ಪಿಂಗಳಾ, ಅದು ಮೋಡವೂ ಅಲ್ಲ, ಹೊಗೆಯೂ ಅಲ್ಲ. ಭಲ್ಲೂಕ ಪರ್ವತಗಳಿರುವ ಪ್ರದೇಶದಲ್ಲಿ ಕಾವಲಾಗಿರುವ ರಾಕ್ಷಸ ಗಣ! ಬಹುಶಃ ಅವರೆಲ್ಲ ನಮ್ಮ ಬರುವಿಕೆಯನ್ನು ತಿಳಿದು ನಮ್ಮನ್ನು ಹೆದರಿಸಲು ಪ್ರಯತ್ನಿಸುವ ಹಾಗೆ ಕಾಣುತ್ತದೆ. ನಾವೀಗ ಎಲ್ಲಿಗೆ ಬರಬೇಕೋ ಅಲ್ಲಿಗೆ ಬಂದಿದ್ದೇವೆ. ಎಚ್ಚರವಿರಬೇಕಾದ ಸಮಯ ಬಂತು " ಎಂದನು.

ಪದ್ಮಪಾದನ ಮಾತು ಮುಗಿಯಿತೆನ್ನುವಷ್ಟರಲ್ಲಿ, ಅವರ ಇದಿರು ಸುಮಾರು ಐವತ್ತು ಗಜಗಳಷ್ಟು ದೂರದಲ್ಲಿ ಕಪ್ಪಗಿನ ಹೊಗೆಯ ಉಂಡೆಯೊಂದು ಭೂಮಿಯ ಮೇಲಿನಿಂದ ಗುಂಡಗೆ ಆಕಾಶಕ್ಕೆದ್ದು, ಸುಳಿ ತಿರುಗುತ್ತ ತಾಳೇ ಮರದ ಪ್ರಮಾಣದಷ್ಟಾಗಿ ನಿಂತಿತು. ಪಿಂಗಳನು ಹೆದರಿ ನಡುಗುತ್ತ ಪದ್ಮಪಾದನನ್ನು ನೋಡಿದನು.

ಪದ್ಮಪಾದನು ಏನೋ ಮಂತ್ರವನ್ನು ಉಚ್ಚರಿಸುತ್ತ, ತಾನು ಏರಿದ ಕತ್ತೆಯನ್ನು ಆ ಕಡೆಗೆ ಓಡಿಸಿದನು. ಮರುಕ್ಷಣದಲ್ಲಿ ಕರಿ ಹೊಗೆಯ ಕಂಬ ಮಾಯವಾಯಿತು.

ಪದ್ಮಪಾದನು ಪಿಂಗಳನನ್ನು ನೋಡಿ, "ಪಿಂಗಳಾ, ಹೆದರಬೇಡ. ಇಕೋ. ನಿನಗೆ ರಕ್ಷೆಯಾಗಿ ಈ ಕತ್ತಿಯನ್ನು ಕೊಡುತ್ತೇನೆ. ನಿನ್ನನ್ನು ಯಾವ ರೂಪದಿಂದ ಇದಿರಿಸಲು ಬರುವ ರಾಕ್ಷಸನನ್ನಾದರೂ ನೀನು ಇದರಿಂದ ಹೊಡೆದು ಸಂಹರಿಸಿಬಿಡಬಹುದು" ಎಂದು ಪಿಂಗಳನ ಕೈಗೊಂದು ಕತ್ತಿಯನ್ನು ಕೊಟ್ಟನು. ಅದೇ ಕ್ಷಣದಲ್ಲಿ ಅವರಿಬ್ಬರ ನಡುವೆ ಇದ್ದ ಭೂಮಿ ನಡುಗಿತು.

ಪದ್ಮಪಾದನೂ ಪಿಂಗಳನೂ ಹಿರಿಕೊಂಡಿದ್ದ ಕತ್ತಿಗಳೆರಡೂ ಆಚೆಯ ಬದಿಗೆ ಓಡಿದುವು. ಮರುಕ್ಷಣದಲ್ಲಿ ಮಾರುದ್ದದ ದಂತಗಳೊಂದಿಗೆ, ಶರೀರವೆಲ್ಲಾ ಜಡೆಗೂದಲು ತುಂಬಿದ ದೊಡ್ಡದೊಂದು ಆನೆ ಘೀಂಕರಿಸುತ್ತಾ ಪಿಂಗಳನ ಮೇಲೆ ಹಾರಿತು.

ಪಿಂಗಳನು ಸ್ವಲ್ಪವೂ ಹಿಂಜರಿಯದೆ ತನ್ನ ಕೈಯಲ್ಲಿದ್ದ ಕತ್ತಿ ಬೀಸುತ್ತ ಆನೆಯ ಮೇಲೆ ಹಾರಿದನು. ಕೂಡಲೇ ಆನೆ ಮಹಾ ಸಂಕಟ ಅನುಭವಿಸುವಂತೆ ಶಬ್ದ ಮಾಡಿ, ಕ್ಷಣ ಮಾತ್ರದಲ್ಲಿ ಕರ್ರಗಿನ ಹೊಗೆಯಾಗಿ ಮಾರ್ಪಟ್ಟು ಸುಳಿಸುಳಿ ತಿರುಗುತ್ತಾ ದೂರ ಓಡಿಹೋಯಿತು. ಇದು ಪಿಂಗಳನಿಗೆ ತಮಾಶೆಯ ಆಟದಂತಾಗಿ "ಹೋ!" ಎಂದು ಆನಂದದಿಂದ ಕೂಗಿದನು, ಕತ್ತಿಯನ್ನು ಕುಣಿಸುತ್ತಾ.

"ಭೇಷ್! ಪಿಂಗಳಾ! ಯುವಕನಾದವನು ತೋರಿಸಬೇಕಾದ ಧೈರ್ಯವೆಂದರೆ ಇದೇ. ಸೊಪ್ಪಿನ ಶಬ್ದದ ಪೆಟ್ಟಿಗೆ ಪಿಶಾಚಿಯೂ ಓಡುತ್ತದೆನ್ನುವುದು ಇದಕ್ಕೇ. ನಿನಗೆ ಕೊಟ್ಟ ಕತ್ತಿಯಲ್ಲಿ ಯಾವ ಮಂತ್ರಶಕ್ತಿಯೂ ಇಲ್ಲ. ಆದರೆ ಮುಂದಾಗಿ ಆ ಮಾತು ಹೇಳಿದ್ದರೆ, ನೀನು ಇಷ್ಟು ಧೈರ್ಯದಿಂದ ಆ ಮಾಯಾ ಗಜವನ್ನು ಇದಿರಿಸುತ್ತಿದ್ದಿಲ್ಲ. ಈಗ ತಿಳಿಯಿತೆ? ಕತ್ತಿಯಲ್ಲಿ ಯಾವುದೂ ಇಲ್ಲ. ಎಲ್ಲಾ ಇರುವುದು ಎದೆಯಲ್ಲಿಯೇ! ಧೈರ್ಯಶಾಲಿಗಳನ್ನು ಬಗ್ಗಿಸಲು ಯಾರಿಗೂ ಸಾಧ್ಯವಿಲ್ಲ" ಎಂದನು ಪದ್ಮಪಾದ.

ಪಿಂಗಳನು ತನ್ನ ಕೈಯಲ್ಲಿದ್ದ ಕತ್ತಿಯನ್ನು ಒಂದು ಸಾರಿ ಆಶ್ಚರ್ಯದಿಂದ ನೋಡಿ, "ಈ ಕತ್ತಿಯಲ್ಲಿ ನಿಜಕ್ಕೂ ಮಂತ್ರಶಕ್ತಿ ಏನಿಲ್ಲವೇ? ಆದರೂ ಚಿಂತಿಲ್ಲ.



ಹರಿತವಾಗಿದೆ! ಹೇಗೆ ಬೇಕೋ ಹಾಗೆ ಬಗ್ಗುವಂಥಾದ್ದಾದರೂ ಬಲವಾಗಿದೆ. ಇದರಿಂದ ನಾನು ಸಾವಿರ ಮಂದಿ ರಾಕ್ಷಸರನ್ನಾದರೂ ಇದಿರಿಸ ಬಲ್ಲೆನು. ಜೈ ಪಾತಾಳ ಭೂತಾ!" ಎಂದು ಕತ್ತಿಯನ್ನು ಗಾಳಿಯಲ್ಲಿ ಗಿರಗಿರ ತಿರುಗಿಸಿದನು.

ಪಿಂಗಳನು ಪ್ರದರ್ಶಿಸಿದ ಧೈರ್ಯಸಾಹಸಗಳು ಪದ್ಮಪಾದನನ್ನು ಬಹಳವಾಗಿ ಆಕರ್ಷಿಸಿದುವು. ಅವನು ಪಿಂಗಳನನ್ನು ಆಪ್ಯಾಯತೆಯಿಂದ ನೋಡುತ್ತ, "ಪಿಂಗಳಾ, ನಾವೀಗ ಭಲ್ಲೂಕ ಪರ್ವತಗಳನ್ನು ಸಮೀಪಿಸಿಬಿಟ್ಟೆವು, ನಾವು ಸೇರಬೇಕಾದ ನದಿ ಈ ಪರ್ವತಗಳ ಮಧ್ಯದಲ್ಲಿರುವ ಕಣಿವೆಯಲ್ಲಿದೆ. ಕಾಲು ನಡಿಗೆಯಿಂದ ಅಲ್ಲಿಗೆ ಹೋಗಿ ಮುಟ್ಟಲು ಬಹಳ ಕಾಲ ಬೇಕಾಗುತ್ತದೆ. ಎಲ್ಲೆಲ್ಲೂ ಕಲ್ಲುಗಳು, ಹತ್ತಬೇಕು, ಇಳಿಯಬೇಕು. ಅದು ಬಹಳ ಕಷ್ಟವಾದುದರಿಂದ, ಈ ಪಿಶಾಚಿ ಕತ್ತೆಗಳನ್ನು ಬೆಟ್ಟಗಳ ಮೇಲಿನಿಂದ ಹಾರಿಸಿ, ಆ ಕಣಿವೆಗೆ ಇಳಿದು ಬಿಡೋಣ. ಗಟ್ಟಿಯಾಗಿ ಕುಳಿತುಕೋ! ತಲೆ ತಿರುಗದಂತೆ ಬೇಕಾದರೆ ಕಣ್ಣು ಮುಚ್ಚಿಕೋ!" ಎಂದು ಯಾವುದೋ ಮಂತ್ರವನ್ನು ಉಚ್ಚರಿಸಿದನು.

ಪಿಂಗಳನು ಅವನ ಮಾತಿನಂತೆ ಸಿದ್ಧನಾಗುತ್ತಿರುವಾಗಲೇ ಪಿಶಾಚಿ ಕತ್ತೆಗಳೆರಡೂ ಆಕಾಶಕ್ಕೇರಿದುವು. ಅವು ಬೆಟ್ಟದ ಶಿಖರಗಳ ಮೇಲು ಭಾಗದಲ್ಲಿ ಹಾರುತ್ತಾ, ನಡುವಿನ ಕಣಿವೆಯಲ್ಲಿ ಹರಿಯುತ್ತಿದ್ದ ನದಿಯ ಬದಿಯಲ್ಲಿ ನೆಲಕ್ಕಿಳಿದುವು.

ಪದ್ಮಪಾದನೂ, ಪಿಂಗಳನೂ ವಾಹನಗಳನ್ನು ಬಿಟ್ಟು ಕೆಳಗಿಳಿದರು, ಮರುಕ್ಷಣದಲ್ಲಿ ಅವೆರಡೂ ಮಾಯವಾದುವು.

ಪದ್ಮಪಾದನು ನದಿಯ ತೀರದಲ್ಲಿ ಕುಳಿತು ಕೈಯಿಂದ ನೀರನ್ನು ಕದಲಿಸುತ್ತ, ಯಾವುದೋ ಮಂತ್ರವನ್ನು ಪಠಿಸತೊಡಗಿದನು. ಕ್ರಮವಾಗಿ ನದಿಯಲ್ಲಿ ಅಲೆಗಳು ಹುಟ್ಟಿ, ಗುಡ್ಡದಷ್ಟು ಎತ್ತರಕ್ಕೆ ಏರುತ್ತ ಹೊಗೆಯನ್ನು ಕಾರತೊಡಗಿದುವು. ಪಿಂಗಳನು ಈ ದೃಶ್ಯವನ್ನು ನೋಡುತ್ತ ಕದಲದೆ ನಿಂತಿದ್ದನು. ಸುತ್ತುಮುತ್ತಲೂ ಯಾವ ಪ್ರಾಣಿಯೂ



ಇಲ್ಲಿ. ನಿರ್ಮಾನುಷ್ಯ ಪ್ರದೇಶ. ಇಂತಹ ಪ್ರದೇಶದಲ್ಲಿ ಹೀಗೆ ಇರಬೇಕಾದರೆ, ಪದ್ಮಪಾದನ ಮಂತ್ರಶಕ್ತಿಗೆ ಈಡುಜೋಡಿಲ್ಲವೆಂದು ಅವನಿಗೆ ಕಾಣುತ್ತಿತ್ತು.

ಸ್ವಲ್ಪ ಹೊತ್ತಿನ ಮೇಲೆ ಪದ್ಮಪಾದನು ಈಕಡೆಗೆ ಬಂದು, ಚೀಲದೊಳಗಿರುವ ಗಾಜಿನ ಜಾಡಿಯನ್ನು ತರುವಂತೆ ಪಿಂಗಳನಿಗೆ ಹೇಳಿದನು. ಪಿಂಗಳನು ಗಾಜಿನ ಜಾಡಿಯನ್ನು ತಂದು ಪದ್ಮಪಾದನ ಮುಂದೆ ಇಟ್ಟನು. ಅದರೊಳಗೆ ಮೊಸಳೆಗಳ ರೂಪದಲ್ಲಿರುವ ಮಹಾಮಾಯನ ಶಿಷ್ಯರಿಬ್ಬರನ್ನೂ ಪದ್ಮಪಾದನು ಕಣ್ಣು ತಿರುಗಿಸಿ ನೋಡುತ್ತ, "ಇನ್ನಾದರೂ ನಿಮ್ಮ ನಿಜ ರೂಪ ಧರಿಸುವಿರಾ ? ಇಲ್ಲವೇ ಸುಟ್ಟು ಬೂದಿ ಮಾಡಿ ಈ ನದಿಯ ನೀರಿನಲ್ಲಿ ಕಲೆಸಿಬಿಡಲೆ?" ಎಂದು ಕೇಳಿ ಹೂಂಕರಿಸಿದನು.

ಕೂಡಲೇ ಗಾಜಿನ ಜಾಡಿ ಫಟೀರನೆ ಒಡೆದು ಚೂರುಗಳೆಲ್ಲಾ ಎತ್ತಲೋ ಹಾರಿ ಹೋದುವು. ಕರ್‍ರಗಿನ ವಿಕೃತಾಕಾರಿಗಳಾದ ಇಬ್ಬರು ವ್ಯಕ್ತಿಗಳು ಪ್ರತ್ಯಕ್ಷರಾಗಿ ಪದ್ಮಪಾದನಿಗೆ ನಮಸ್ಕಾರ ಮಾಡುತ್ತ "ಮಹಾ ಮಾಂತ್ರಿಕರೇ ! ನಾವು ನಿಮ್ಮ ದಾಸರು, ದಾಸರು. ಏನು ತಮ್ಮ ಅಪ್ಪಣೆ?" ಎಂದು ಕೇಳಿದರು.

"ಮಹಾಮಾಯನು ಸಮಾಧಿಯಾಗಿರುವ ಪಾಳು ದೇವಾಲಯಕ್ಕೆ ಪ್ರವೇಶಿಸ ಬೇಕಾಗಿದೆ. ಮೊದಲು ಈ ನದಿಯ ನೀರು ಬತ್ತಿ ಹೋಗುವ ಹಾಗೆ ಮಾಡಿರಿ. ನೋಡಿರೇನು ? ಇದು ನನ್ನ ಆಜ್ಞೆ ! " ಎಂದು ಪದ್ಮಪಾದನು ಕಠಿಣವಾಗಿ ಉತ್ತರವಿತ್ತನು.

ಮಹಾಮಾಯನ ಶಿಷ್ಯರು ಸ್ವಲ್ಪಹೊತ್ತು ತಮ್ಮೊಳಗೆ ಮುಖ ನೋಡಿಕೊಂಡರು. ಉತ್ತರ ಹೇಳಲು ಅವರು ಹಿಂಜರಿಯುವುದನ್ನು ನೋಡಿ ಪದ್ಮಪಾದನು ಕೋಪದಿಂದ ಕಣ್ಣು ಕೆಕ್ಕರಿಸಿಕೊಂಡು "ನನ್ನ ಆಜ್ಞೆ ಕಿವಿಗೆ ಬಿದ್ದಿಲ್ಲವೇನು ? ಆಂ!" ಎಂದು ಪ್ರಶ್ನಿಸಿದನು.

ಮಹಾಮಾಯನ ಶಿಷ್ಯರು ಹೆದರಿ ಗಡಗಡಿಸುತ್ತ, ಪದ್ಮಪಾದನಿಗೆ ಕೈಮುಗಿದು, "ಈ ನದಿ ಬತ್ತಿ ಹೋಗಬೇಕಾದರೂ, ಮಹಾಮಾಯನ ಸಮಾಧಿ ಇರುವ ಪಾಳು ದೇವಾಲಯಕ್ಕೆ ಪ್ರವೇಶಿಸಬೇಕಾದರೂ, ಮೊದಲು ಪಿಂಗಳನೆಂಬ ಮೀನುಗಾರ ಯುವಕನು ಇಲ್ಲಿಗೆ ಬರಬೇಕಾಗಿರುತ್ತದೆಂದು ತಮಗೆ ತಿಳಿಯದೆ ? " ಎಂದರು.

"ಇದೋ! ಇಲ್ಲಿ ನಿಂತಿರುವವನೇ ಮೀನುಗಾರ ಪಿಂಗಳ ! " ಎಂದು ಪದ್ಮಪಾದನು ಪಿಂಗಳನ ಕಡೆಗೆ ಬೆರಳು ತೋರಿಸಿದನು.

ಮಹಾಮಾಯನ ಶಿಷ್ಯರು ಪಿಂಗಳನನ್ನು ಆಶ್ಚರ್ಯದಿಂದ ನೋಡಿ, "ಮಹಾ ಪ್ರಸಾದ ! ನಿಮ್ಮ ಆಜ್ಞೆ ಈಗಲೇ ನೆರವೇರಿಸುತ್ತೇವೆ" ಎಂದು ಹೇಳಿ ಅದೃಶ್ಯರಾದರು. —(ಇನ್ನೂ ಇದೆ)






೫

[ಪದ್ಮಪಾದನು ಪಿಂಗಳನನ್ನು ಭಲ್ಲೂಕಕೇತುವಿನ ಮಾಯೆಯಲ್ಲಿ ಬೀಳದಂತೆ ರಕ್ಷಿಸಿದ ಮೇಲೆ, ಇಬ್ಬರೂ ಕೂಡಿ ಭಲ್ಲೂಕ ಪರ್ವತಗಳ ಕಡೆಗೆ ಹೊರಟರು. ದಾರಿಯಲ್ಲಿ ಹೊಗೆರೂಪದ ಭಯಂಕರ ಪಿಶಾಚಿಗಳು ಇದಿರಾದುವು. ಮೊಸಳೆ ರೂಪದಲ್ಲಿದ್ದ ಮಹಾಮಾಯನ ಶಿಷ್ಯರು ಪದ್ಮಪಾದನಿಗೆ ಹೆದರಿ ಶರಣಾಗತರಾಗಿ ಸಹಾಯ ಮಾಡಲು ಒಪ್ಪಿಕೊಂಡು ಅದೃಶ್ಯರಾಗಿ ಹೋದರು.]

**ಪಿಂ**ಗಳನನ್ನು ನೋಡಿ ಮಹಾಮಾಯನ ಶಿಷ್ಯರಿಬ್ಬರೂ ಅದೃಶ್ಯರಾಗಿ ಹೋದ ಕೂಡಲೇ, ಪಿಂಗಳನು ಒಂದೂ ಅರ್ಥವಾಗದೆ ಆಶ್ಚ್ಯಾಶ್ಚರ್ಯದಿಂದ ಪದ್ಮಪಾದನನ್ನು ನೋಡಿ, "ಪದ್ಮಪಾದರೇ! ಇದೀಗ ಮಾಯವಾಗಿ ಹೋದವರು ಏನಾದರು? ಮೊಸಳೇ ರೂಪಪಡೆದು ಈ ನದಿಯೊಳಗೆ ಹೊಕ್ಕು ಬಿಡಲಿಲ್ಲವಷ್ಟೆ?" ಎಂದು ಕೇಳಿದನು,

"ಮೊಸಳೆಯಾದರೆನ್ನುವಿಯಾ? ಅಂತಹ ಸೂಚನೆ ನಿನಗೇನಾದರೂ ಕಂಡಿತೆ?" ಎಂದು ಪದ್ಮಪಾದನು ಗಾಬರಿ ಬಿದ್ದವನಂತೆ ನದಿಯನ್ನು ನೋಡಿ, ತನ್ನನ್ನು ಸಮಾಳಿಸಿಕೊಂಡು, "ಹಾಗೇನಿಲ್ಲ ಪಿಂಗಳಾ, ಒಂದು ವೇಳೆ ಅವರಿಬ್ಬರೂ ಮತ್ತೆ ಮೊಸಳೆಗಳಾಗಿ ಬಿಟ್ಟರೆ ಕಥೆ ಮೊದಲಿಗೇ ಬರುತ್ತದೆ. ಅವರನ್ನು ಕೈವಶಪಡಿಸಿಕೊಳ್ಳಲು ನನ್ನ ಸಹೋದರರಿಬ್ಬರೂ ಆಹುತಿಯಾದ ಸಂಗತಿ ನಿನಗೆ ಗೊತ್ತಿದೆ. ನಾನು ಕೂಡಾ ಅವರಿಂದ ತಪ್ಪಿಸಿಕೊಂಡು ಕೊನೆಯ ಪ್ರಾಣದೊಂದಿಗೆ ಬದುಕಿ ಹೊರಬಿದ್ದವನು. ಮತ್ತೆ ಅವರು ಮೊಸಳೆಗಳಾಗಿ, ನಿನ್ನಿಂದ ನನ್ನನ್ನು ನೀರಿಗೆ ಬೀಳಿಸಿ ಕೊಲ್ಲಲು ನೋಡುವರೆಂದುಕೊಂಡೆಯಾ?" ಎಂದನು.

"ಹಾಗಾದರೆ ಅವರಿಬ್ಬರೂ ಈಗ ಎಲ್ಲಿಗೆ



ಹೋದರು ? ಯಾವ ರೂಪ ತಾಳಿದರು ?" ಎಂದು ಪಿಂಗಳನು ಪ್ರಶ್ನಿಸಿದನು.

"ಅವರು ಎಲ್ಲಿಗೆ ಯಾವ ರೂಪದಲ್ಲಿ ಹೋದರೆಂಬುದು ಅಷ್ಟೇನೂ ಮುಖ್ಯವಲ್ಲ. ನಾವು ಈ ನದಿಯ ಗರ್ಭದಲ್ಲಿರುವ ಪಾಳುಬಿದ್ದ ದೇವಾಲಯದೊಳಗೆ ಪ್ರವೇಶಿಸಬೇಕಾಗಿದೆ. ಆ ದೇವಾಲಯಕ್ಕಿರುವ ಐದುದ್ವಾರಗಳನ್ನು ತೆರೆದರೆ ಹೊರತು ಮಹಾಮಾಯನು ಸಮಾಧಿಯಾಗಿರುವ ಕೋಣೆಯನ್ನು ತಲಪಲು ಸಾಧ್ಯವಿಲ್ಲ. ಅದಕ್ಕೆ ಆ ಶಿಷ್ಯರು ನಮಗೆ ಸಹಾಯ ಮಾಡುತ್ತಾರೆ. ಮಾಡಲೇಬೇಕು " ಎಂದನು ಪದ್ಮಪಾದ.

"ನನಗೆ ಅಷ್ಟು ಚೆನ್ನಾಗಿ ಈಜಲು ಬಾರದು. ಭಯಂಕರ ಒಯ್ಲಿನ ಪ್ರವಾಹದ ಈ ನದಿಯೊಳಗಿರುವ ಪಾಳು ದೇವಾಲಯವನ್ನು ನಾನು ಹೇಗೆ ಪ್ರವೇಶಿಸಲು ಸಾಧ್ಯ? ನೀರಿನೊಳಗೆ ಉಸಿರು ಕಟ್ಟಿ ಸಾಯಲಾರೆನೆ?" ಎಂದನು ಪಿಂಗಳ.

ಪಿಂಗಳನು ಮುಗ್ಧಭಾವದಿಂದ ಕೇಳಿದ ಪ್ರಶ್ನೆಗೆ ಪದ್ಮಪಾದನು ನಕ್ಕು, "ಪಿಂಗಳಾ, ನಿನಗೆ ಈಜು ಬಾರದೆ ಹೋದರೂ ಗುಂಡಿಗೆಯಲ್ಲಿ ಧೈರ್ಯವಿದ್ದರೆ ಸಾಕು. ಅದು ನಿನ್ನಲ್ಲಿ ಅಪಾರವಾಗಿದೆ. ಮೊದಲು ಈ ನದಿಯಲ್ಲಿ ಒಂದು ಚುಕ್ಕೆ ನೀರಿಲ್ಲದಂತೆ ಮಾಡಬೇಕು. ಅದಕ್ಕೆ ಪ್ರಯತ್ನಿಸಬೇಕಾಗಿದೆ. ಮಹಾಮಾಯನ ಶಿಷ್ಯರಿಬ್ಬರು . ಆ ಕಾರ್ಯಕ್ಕೆ ಸಹಾಯ ಮಾಡುತ್ತಾರೆ " ಎಂದನು.

ಪಿಂಗಳನು ಬೆರಗುಗಣ್ಣುಗಳಿಂದ ನದಿಯನ್ನು ನೋಡುತ್ತ "ಇಷ್ಟೊಂದು ತುಂಬಿ ಹರಿಯುವ ದೊಡ್ಡ ನದಿಯಲ್ಲಿ ಒಂದು ಚುಕ್ಕೆ ನೀರಿಲ್ಲದ ಹಾಗೆ ಮಾಡುವುದೆಂದರೇನು ?" ಎಂದು ಮತ್ತೆ ಆಶ್ಚರ್ಯವನ್ನು ವ್ಯಕ್ತಪಡಿಸಿದನು.

"ಹಾಗೆ ಮಾಡಲೇ ಬೇಕು. ನೀರು ಪೂರ್ತಿ ಬತ್ತಿದರಷ್ಟೇ ನಮ್ಮ ಕಾರ್ಯ ನೆರವೇರುತ್ತದೆ. ನಾನೀಗಲೇ ಮಂತ್ರ ನಿಷ್ಠೆಗೆ ಕುಳಿತುಕೊಳ್ಳಲಿದ್ದೇನೆ. ನನ್ನ ನಿಷ್ಠೆಯನ್ನು ಮಹಾಮಾಯನ ಸ್ವಾಧೀನದಲ್ಲಿರುವ ದುಷ್ಟ ಶಕ್ತಿಗಳು ಹಾಳುಮಾಡಲು ಬಂದಾಗ, ಹಾಗಾಗದಂತೆ ಕಾಪಾಡುವ ಬಾಧ್ಯತೆ ನಿನ್ನದು. ಅಂದರೆ ಒಂದು ವಿಧವಾಗಿ ನೀನೇ ನನ್ನನ್ನು ರಕ್ಷಿಸಬೇಕಾಗಿರುವುದೆಂದಾಯಿತು. ನಿನ್ನ ಜೀವಕ್ಕೆ ಯಾವ ಭಯವೂ ಇಲ್ಲ " ಎಂದನು ಪದ್ಮಪಾದ.

"ನಾನು ನಿಮ್ಮನ್ನು ಕಾಪಾಡುವುದೆ ? ನಂಬಲಾಗದ ಮಾತು " ಎಂದು ಪಿಂಗಳನು ಇನ್ನಷ್ಟು ಕಳವಳ ವ್ಯಕ್ತಪಡಿಸಿದನು.

"ಹೌದಪ್ಪಾ ಪಿಂಗಳಾ, ನೀನೇ ನನ್ನನ್ನು ರಕ್ಷಿಸಬೇಕಾಗಿದೆ. ನಾನು ಮಂತ್ರ ನಿಷ್ಠೆಯಲ್ಲಿರುವಾಗ ನನ್ನ ಸುತ್ತಲೂ ಏನೇನು ನಡೆಯುತ್ತದೆಂಬುದು ನನಗೆ ಗೊತ್ತಾಗುವುದಿಲ್ಲ. ಆದುದರಿಂದ ಆಯುಧಪಾಣಿಯಾಗಿರುವ ನೀನು ಕಣ್ಣಿಗೆ ರೆಪ್ಪೆ ಬಡಿಯದಷ್ಟು ಎಚ್ಚರಿಕೆಯಲ್ಲಿ ನನ್ನನ್ನು ಕಾಪಾಡಿಕೊಂಡಿರ

ಬೇಕು. ಅದಕ್ಕೆ ತಕ್ಕ ಆಯುಧ ಕೊಡುತ್ತೇನೆ. ಇಗೋ, ತೆಗೆದುಕೋ " ಎಂದು ಪದ್ಮಪಾದನು ವಾತಾವರಣದೊಳಗೆ ಕೈ ಚಾಚಿ, ಕಣ್ಣು ಕೋರೈಸುವಂತೆ ಜಗಜಗನೆ ಹೊಳೆಯುವ ಒಂದು ಗದೆಯನ್ನು ತೆಗೆದು ಪಿಂಗಳನ ಕೈಗೆ ಕೊಟ್ಟನು.

ಆಕಾಶದ ಗಾಳಿಯಿಂದ ತೆಗೆದುಕೊಟ್ಟ ಆ ಗದೆಯನ್ನು ಪಿಂಗಳನು ಹಿಡಿದುಕೊಂಡು ಗಿರಗಿರನೆ ತಿರುಗಿಸಿ ನೋಡಿ, ಹೆಗಲ ಮೇಲಿಟ್ಟುಕೊಂಡನು. ಆಗ ತಾನೊಬ್ಬ ಭೀಮನೆಂಬ ವೀರಭಾವ ಅವನಿಗುಂಟಾಯಿತು. ಪದ್ಮಪಾದನು ಅವನನ್ನು ಮೆಚ್ಚುಗೆಯಿಂದ ನೋಡುತ್ತ, "ನೋಡಿಕೋ, ಪಿಂಗಳಾ. ಇನ್ನು ನಾನು ಧ್ಯಾನಕ್ಕೆ ಕುಳಿತು ಮಂತ್ರೋಚ್ಚಾರ ಮಾಡಿಕೊಂಡಿರುತ್ತೇನೆ. ಬಗೆಬಗೆಯ ಮಾಯಾ ರೂಪಗಳಿಂದ ನಮ್ಮನ್ನು ಕಾಡಿಸಲು ಬರುವ ಮಹಾ ಮಾಯನ ಪಿಶಾಚ ಗಣಗಳಿಂದ ನನ್ನನ್ನು ಮಾತ್ರವಲ್ಲದೆ, ನಿನ್ನನ್ನು ಕೂಡಾ ರಕ್ಷಿಸಿಕೊಳ್ಳುವ ಶಕ್ತಿ ನಿನಗಿದೆ. ಎಚ್ಚರದಲ್ಲಿರು. ಬೇಗದಲ್ಲೇ ನದೀ ಜಲವನ್ನು ಸ್ತಂಭನಗೊಳಿಸಿ ಇಂಗಿಹೋಗುವಂತೆ ಮಾಡುತ್ತೇನೆ, ನೋಡು " ಎಂದನು.

"ಆಗಲಿ, ಹಾಗೇ ಆಗಲಿ. ಈ ಗದೆಯ ಸಹಾಯದಿಂದ ನಾನು ಎಂತಹ ರಾಕ್ಷಸರನ್ನಾದರೂ ಓಡಿಸಿಬಿಡುತ್ತೇನೆ. ಜೈ ಪದ್ಮಪಾದರಿಗೆ !" ಎಂದು ಗದೆಯನ್ನು ಕುಣಿಸಿದನು ಪಿಂಗಳ.

ಪದ್ಮಪಾದನು ನದಿಯ ತೀರದಲ್ಲಿ ಪದ್ಮಾಸನ ಹಾಕಿಕೊಂಡು ಕುಳಿತು, ನದಿಯ ಜಲವನ್ನು ಎರಡು ಮೂರು ಸಾರಿ ಕೈಯಿಂದ ಕಲಕಿ "ಚಲನ ಜಲ ಸರ್ವಸ್ವಂ ಸ್ತಂಭನಂ ಕುರುಕುರು ! ಶೀಘ್ರಂ ಭವ್ಯಂ ಫಟ್‌ಫಟಃ ..." ಎಂದು ಗುಣುಗುತ್ತಾ ಕಣ್ಣು ಮುಚ್ಚಿದನು. ತುಟಿಗಳು ಮಾತ್ರ ಅಲುಗುತ್ತಿದ್ದುವು.

ಪಿಂಗಳನು ನಾಲ್ಕು ಸುತ್ತಲೂ ಮೇಲೂ ಕೆಳಗೂ ನೋಡುತ್ತ ಇದ್ದ ಹಾಗೆ, ಸ್ವಲ್ಪ ಹೊತ್ತಿನಲ್ಲಿ



ಭೂಮ್ಯಾಕಾಶಗಳು ಒಂದಕ್ಕೊಂದು ತಾಗಿ ಸಿಕ್ಕಿಕೊಳ್ಳುತ್ತಿವೆಯೋ ಎಂಬ ಹಾಗೆ ಕೀಚುಕೀಚೆಂಬ ವಿಕೃತ ಧ್ವನಿ ಕೇಳತೊಡಗಿತು. ಪಿಂಗಳನು ಬೆಚ್ಚಿಬಿದ್ದು, ಅಷ್ಟರಲ್ಲೇ ಎದೆ ಗಟ್ಟಿಮಾಡಿಕೊಂಡು ಆ ಶಬ್ದ ಎಲ್ಲಿಂದ ಬರುವುದೆಂದು ನೋಡಿದನು. ಗದೆಯನ್ನು ಕೈಯಲ್ಲೆತ್ತಿಕೊಂಡು ಮೇಲೂ ಕೆಳಗೂ ನೋಡಿದನು. ಆ ಶಬ್ದ ಎಲ್ಲಿಂದ ಬರುವುದೆಂದು ಗೊತ್ತೇ ಆಗಲಿಲ್ಲ.

ಫಕ್ಕನೆ ಆಕಾಶವೆಲ್ಲಾ ಕಗ್ಗಿನ ಮೋಡದಿಂದ ಮುಚ್ಚಿಹೋದಂತೆ ತೋರಿತು. ನೋಡುತ್ತಿದ್ದ ಹಾಗೆ ಆ ಮೇಘವು ಕುಂಚಿತಗೊಳ್ಳುತ್ತಾ ಆನೆಯ ಪ್ರಮಾಣಕ್ಕೆ ನಿಂತಿತು. "ಓಹೋ ! ಈ ಮೊದಲೊಮ್ಮೆ ನನ್ನನ್ನು ಇದಿರಿಸಿದ ಮಾಯಾಗಜವಿದು ! ಮತ್ತೆ ನನ್ನ ಮೇಲೆ ಬರುತ್ತಿದೆಯೇನು !" ಎಂದುಕೊಳ್ಳುತ್ತಾ ಪಿಂಗಳನು ಗದೆಯನ್ನು ಗಟ್ಟಿಯಾಗಿ ಹಿಡಿದುಕೊಂಡನು. ಆದರೆ ಆ ಮೋಡವು ಆನೆಯ ಆಕೃತಿಯಾಗದೆ, ದೊಡ್ಡದೊಂದು ಪಕ್ಷಿಯ ಹಾಗಾಗಿ




ಅಗಲವಾದ ರೆಕ್ಕೆಗಳನ್ನು ಗಾಳಿಯನ್ನು ಸೀಳುವಂತೆ ಅಲುಗಾಡಿಸಲು ತೊಡಗಿತು.

"ಇದು ಪಿಶಾಚಿ ಗಂಡಭೇರುಂಡ ಪಕ್ಷಿ. ಯಾರೋ ಹೇಳುವುದನ್ನು ಕೇಳಿದ್ದೇನೆ. ಹಾಗೆಯೇ ಇದೆ!" ಎಂದುಕೊಂಡನು ಪಿಂಗಳ.

ಗಂಡಭೇರುಂಡ ಪಕ್ಷಿ ದಿಕ್ಕುಗಳು ಗಡಚಿಕ್ಕುವಂತೆ ಚೀರಿಕರಿಸಿಕೊಂಡು ರೆಕ್ಕೆಯಾಡಿಸುತ್ತಾ, ನೆಟ್ಟಗೆ ಪಿಂಗಳನು ನಿಂತಿರುವಲ್ಲಿಗೇ ತಲೆಕೆಳನಾಗಿ ಇಳಿಯ ತೊಡಗಿತು. ಅದು ಕೆಳಕೆಳಗೆ ಬಂದಂತೆ ಅದರ ರೆಕ್ಕೆಗಳ ಹೊಡೆತಕ್ಕೆ, ಆ ಪ್ರಾಂತದಲ್ಲಿರುವ ಮರ ಮಟ್ಟುಗಳು ತುಫಾನಿನ ಹೊಡೆತಕ್ಕೆ ಉಗಾಡುವಂತೆ ತೂಗಿತೂಗಿ ಏಳತೊಡಗಿದುವು.

ಪಿಂಗಳನು ಬೆದರಲಿಲ್ಲ. ಗಟ್ಟಿಯಾಗಿಯೇ ನಿಂತನು. ಆ ಪಕ್ಷಿ ತನ್ನನ್ನು ಕೋಳಿಯ ಮರಿಯನ್ನು ಎತ್ತಿ ಕೊಳ್ಳುವ ಹಾಗೆ ಎತ್ತಲು ಬರುವುದೆಂದು ಅವನಿಗೆ ಗೊತ್ತು. ಆದರೂ ತನ್ನ ಕೈಯಲ್ಲಿ ಪದ್ಮಪಾದನು ಕೊಟ್ಟ ಅದ್ಭುತ ಶಕ್ತಿಯ ಗದೆಯಿದೆಯಲ್ಲ! ಪಿಂಗಳನು ಸ್ವಲ್ಪವೂ ಹೆದರಲಿಲ್ಲ.

ಪಿಂಗಳನು ಆ ಗದೆಯನ್ನು ಎರಡು ಮುಷ್ಟಿಗಳಲ್ಲಿಯೂ ಬಿಗಿ ಹಿಡಿದು ಮೇಲೆತ್ತಿದ್ದನು. ಪಿಶಾಚಿ ಪಕ್ಷಿ ಅವನನ್ನು ಸಮೀಪಿಸುತ್ತಾ ಇದೆ. ಹರಿತ ಖಡ್ಗದಂತಹ ಮಾರುದ್ದವಿತ್ತು ಅದರ ಮೂಗು. ಹದನಾದ ಕಾಲುಗುರುಗಳು. ಕೆಂಗಿಡಿಗಳನ್ನು ದುರಿಸುವ ಅದರ ಕಣ್ಣುಗಳು. ಭಯಂಕರವಾಗಿ ವಿಕೃತ ರೂಪದ ಹಕ್ಕಿ! ಅದು ಹತ್ತಿರ ಬರುವಾಗ ಅದರ ರೆಕ್ಕೆಗಳಿಂದ ಹೊರಡುವ ಗಾಳಿ ರಿವ್ವರಿವ್ವನೆ ರೀಂಕರಿಸುತ್ತಿದ್ದಿತು. ಅದರ ಶಕ್ತಿಗೆ ಗಟ್ಟಿಯಾಗಿ ನಿಂತ ಪಿಂಗಳನ ಕಾಲುಗಳು ಆಚೀಚೆ ವಾಲುತ್ತಿದ್ದುವು. ಅದರೂ ಸಮಾಳಿಸಿಕೊಂಡು ನಿಂತಾಗ ಆ ಪಕ್ಷಿಯ ಕೊಕ್ಕು ಅವನ ತಲೆಯ ಕಡೆಗೆ ಚಾಚಿಕೊಂಡು ಬಂತು. ಆ ಕ್ಷಣದಲ್ಲಿ ಪಿಂಗಳನು ಕೈಯಲ್ಲಿದ್ದ ಗದೆಯನ್ನು ಬಲವಾಗಿ ಬೀಸಿದನು. ಪಕ್ಷಿ ಅದರ ಪೆಟ್ಟನ್ನು ತಪ್ಪಿಸಿಕೊಂಡು ವಿಕಾರವಾಗಿ ಆರ್ತನಾದ ಮಾಡುತ್ತ ಮೇಲೆ ಹಾರಿಹೋಯಿತು.

"ಬದುಕಿದೆನಪ್ಪ!" ಎಂದು ಪಿಂಗಳನು ಮೇಲೆ ನೋಡಿದನು. ಪಿಶಾಚಿ ಪಕ್ಷಿ ಆಕಾಶದಲ್ಲಿ ಬಹುದೂರ ಹಾರಿಹೋಗಿ, ಮಾಯವಾಗುವುದಕ್ಕೆ ಬದಲಾಗಿ, ಮೊದಲಿಗಿಂತ ವೇಗವಾಗಿ ಕೆಳಗಿಳಿದು ಬರಲು ತೊಡಗಿತು. ಪಿಂಗಳನು ಬೇಗಬೇಗನೆ ತನ್ನ ಬಲವನ್ನೆಲ್ಲಾ ಒಟ್ಟು ಕೂಡಿಸಿಕೊಂಡು, ಪಾದಗಳನ್ನು ಬಲವಾಗಿ ನೆಲದಲ್ಲಿ ಊರಿ ಗದೆಯನ್ನು ಮೇಲೆತ್ತಿ "ಈಗ ಬಾ" ಎನ್ನುತ್ತ ಸಿದ್ಧನಾಗಿ ನಿಂತನು. ಪಕ್ಷಿ ರಿವ್ವನೆ ಅವನ ನಡುನೆತ್ತಿಗೆ ನೇರಾಗಿ ಅಳವಿನೊಳಗೆ ಬರುತ್ತಲೇ ಪಿಂಗಳನು ಗದೆಯನ್ನು ಅದರ ತಲೆಯ ಮೇಲೆ ಬೀಸಿ ಹೊಡೆದನು.

ಢಾಂ ಎಂದು ಬೆಡಿ ಸಿಡಿದಂತಹ ದೊಡ್ಡ ಶಬ್ದ ಹೊರಟಿತು. ಪಿಶಾಚಿ ಪಕ್ಷಿಯ ತಲೆಯೂ ಶರೀರವೂ

ಒಡೆದು ಹೋಗಿತ್ತು. ಅದರ ತಲೆ ಒಂದು ಬದಿಗೂ, ರೆಕ್ಕೆಗಳೂ ಕಾಲುಗಳೂ ಮತ್ತೊಂದು ಬದಿಗೂ ಚೆಲ್ಲಾಚೆದರಾಗಿ ಹಾರಿ, ಮುಂಡವು ನೆಲದ ಮೇಲೆ ಬೊತ್ತನೆ ಬಿತ್ತು.

ಪಿಂಗಳನು ತನ್ನಿಂದಾದ ಅಷ್ಟು ದೊಡ್ಡ ಶತ್ರು ನಾಶವನ್ನು ನೋಡಿ, ಸಂತೋಷವನ್ನು ತಾಳಲಾರದೆ, —"ಜೈ ಪದ್ಮಪಾದಾ!" ಎಂದು ಕೂಗಿ ಗದೆಯನ್ನು ಗಿರಿಗಿರಿ ತಿರುಗಿಸಿಕೊಂಡು ನಲಿದಾಡಿದನು.

ಆಮೇಲೆ ಮಂತ್ರನಿಷ್ಠೆಯಲ್ಲಿರುವ ಪದ್ಮಪಾದನನ್ನು ನೋಡಿದನು. ಅವನಲ್ಲಿ ಯಾವ ಚಲನವೂ ಕಾಣಿಸಲಿಲ್ಲ. ಅವನ ಕಣ್ಣು ಮುಚ್ಚಿಕೊಂಡು, ತುಟಿಗಳು ಮಾತ್ರ ಕದಲಿಕೊಂಡಿದ್ದುವು. "ಅಬ್ಬ! ಈತನಿಗೆ ನಿಷ್ಠಾಭಂಗವಾಗಲಿಲ್ಲ. ಅಷ್ಟು ಸಾಕು. ಅಂಥಾ ಶಬ್ದಕ್ಕೂ ಚಲಿಸಲಿಲ್ಲವೆಂದರೆ ತಪಸ್ಸೆಂದರೆ ಈತನದೇ!" ಎಂದು ಪಿಂಗಳನು ತನಗೆ ತಾನೇ ಹೇಳಿಕೊಂಡನು. ಅಷ್ಟರಲ್ಲಿ ಅವನ ಕಿವಿಗಳಿಗೆ ಘಲ್ಲು ಘಲ್ಲನೆ ಗೆಜ್ಜೆಗಳ ನಿನಾದವು ಕೇಳತೊಡಗಿತು.

ಫಕ್ಕನೆ ಪಿಂಗಳನು ನಿಶ್ಚೇಷ್ಟಿತನಾಗಿ ನೋಡುತ್ತ ನಿಂತನು. ಅವನ ಇದಿರಿನಲ್ಲಿ ಸರ್ವಾಲಂಕಾರ ಭೂಷಿತಳಾದ . ಅಪ್ಸರಸಿಯನ್ನು ನಾಚಿಸುವಂತಹ ಯುವತಿಯೊಬ್ಬಳು ನಾಟ್ಯವಾಡುತ್ತ ಇನಿಗೊರಳಿನಿಂದ ಹಾಡತೊಡಗಿದಳು. ಅವಳ ಸೌಂದರ್ಯವನ್ನೂ, ಗಂಧರ್ವಗಾನವನ್ನೂ ಕೇಳಿದಾಗ ಪಿಂಗಳನಿಗೆ ಕ್ಷಣ ಕಾಲ ಮೈಮರೆತುಹೋಯಿತು.

ಆಗ ಯುವತಿ ಮಂಜುಲ ಕಂಠದಿಂದ, "ಪಿಂಗಳಾ, ನಿನ್ನ ಅಂದವಾದ ಸೊಬಗನ್ನು ನೋಡಿ ನಾನು ಇಲ್ಲಿಗೆ ಬಂದಿದ್ದೇನೆ. ನನ್ನನ್ನು ಮದುವೆ ಮಾಡಿಕೊಂಡು ಬಿಡು. ಈ ಮದುವೆಗೆ ಗಾಂಧರ್ವ ವಿವಾಹವೆಂದು ಶಾಸ್ತ್ರ ಸಮ್ಮತವಾದ ಹೆಸರಿದೆ. ನನ್ನಿಂದ ನಿನಗೆ ಬೇಕು ಬೇಕಾದ ಸಂಪತ್ತುಗಳೂ ಒದಗುತ್ತವೆ" ಎಂದಳು.




ಈ ಸಮಯದಲ್ಲಿ ಪಿಂಗಳನು ತನ್ನನ್ನು ತಾನು ಸಮಾಧಾನಪಡಿಸಿಕೊಂಡು, "ಏನು ಹೇಳಿದಿ? ನನ್ನ ಅಂದವನ್ನು ನೋಡಿ ನೀನು ಬಂದಿಯೇನು? ನಾನು ಯಾವ ರಾಜನ ಕುಮಾರನೋ ಎಂದು ಅಂದುಕೊಂಡೆಯಾ? ಹಾಗೆಲ್ಲಾ ಭ್ರಮೆಗೆ ಬೀಳಬೇಡ. ನಾನು ಬಲೆಗಾರ ಪಿಂಗಳ, ಅಷ್ಟೇ" ಎಂದನು.

"ವೃತ್ತಿಯಲ್ಲಿ ಬಲೆಗಾರ ಬೆಸ್ತನಾದ ಮಾತ್ರಕ್ಕೆ ಏನು ಕಡಿಮೆಯಾಯಿತು? ನಿನ್ನಂಥಾ ಸುಂದರ ಪುರುಷನು ಹದಿನಾಲ್ಕು ಲೋಕಗಳಲ್ಲಿಯೂ ಇರಲಾರನು" ಎಂದು ಯುವತಿ ನಾಟ್ಯವಾಡಲು ತೊಡಗಿದಳು.

ಪಿಂಗಳನು ಅವಳನ್ನು ಅನುಮಾನದಿಂದ, ನೋಡುತ್ತ, "ನಿನ್ನ ಕಂಠಸ್ವರದೊಂದಿಗೆ ಶ್ರುತಿಗೆ ಸೇರುವ ಹಾಗೆ ಅನೇಕ ಪಕ್ಕ ವಾದ್ಯಗಳು ಕೂಡಾ ಕೇಳುತ್ತಿವೆಯಲ್ಲ? ಆ ವಾದ್ಯದವರು ನನ್ನ ಕಣ್ಣಿಗೆ ಕಾಣುವುದಿಲ್ಲವೇಕೆ?" ಎಂದನು.




"ನನ್ನನ್ನು ಮದುವೆ ಮಾಡಿಕೊಂಡರಷ್ಟೇ ಅವರೆಲ್ಲಾ ಕಾಣಿಸುವರು. ನಾನು ಖೇಚರಿ ಹೆಣ್ಣು ! ನನ್ನನ್ನು ಮದುವೆಯಾದರೆ ನೀನೂ ಖೇಚರನಾಗಿ ಆಕಾಶದಲ್ಲಿ ಹಾರಾಡಬಹುದು" ಎಂದಳು ಅವಳು.

"ಖೇಚರಿಯೇ? ಓಹೋ ! ಹರಿಕಥೆಯಲ್ಲಿ ಕೇಳಿದ್ದೇನೆ. ಆಕಾಶದಲ್ಲಿ ಸಂಚರಿಸುವ ಗಂಧರ್ವ ಹುಡುಗಿಯೋ ?" ಎಂದು ಪಿಂಗಳನು ಗದೆಯನ್ನೆತ್ತಿ ಕೊಂಡು ಅವಳನ್ನು ಸಮೀಪಿಸಲು ಎರಡಡಿ ಮುಂದಿಟ್ಟನು.

"ತಡಿ ತಡಿ ! ಮೊದಲು ಆ ಗದೆಯನ್ನು ದೂರ ಬಿಸುಡು. ನನಗೆ ಆಯುಧಗಳೆಂದರೆ ಕೆಟ್ಟ ಭಯ !" ಎಂದು ಖೇಚರಿ ಹಿಂದಕ್ಕೆ ನಡೆದಳು.

ಆ ಮಾತು ಕೇಳಿ ಅವಳು ಯಾರೆಂದು ಪಿಂಗಳನಿಗೆ ಗೊತ್ತಾಗಿಬಿಟ್ಟಿತು. ಪದ್ಮಪಾದನಿಗೆ ನಿಷ್ಠಾಭಂಗವಾಗದಂತೆ, ನೋಡಿಕೊಂಡಿರುವ ತನ್ನನ್ನು ಮೊದಲು ಮಾಯಮಾಡಿ ಸಂಹರಿಸಲು ಬಂದ ಪಿಶಾಚಿಯೇ ಇವಳು ಎಂದು ಗೊತ್ತಾಯಿತು. ಅವನು ಉಕ್ಕುತ್ತಿರುವ ಕೋಪವನ್ನು ಅಡಗಿಸಿ, ಇಲ್ಲದ ಸಂತೋಷವನ್ನು ಬರಮಾಡಿಕೊಂಡು, "ಓ ಖೇಚರಕಾಂತಾಮಣೀ ! ನಿನ್ನನ್ನು ಮದುವೆಯಾಗಲು ನನ್ನ ಅಭ್ಯಂತರವೇನೂ ಇಲ್ಲ. ಇದೊಂದು ನನ್ನ ಭಾಗ್ಯವೇ ಸರಿ. ಆದರೆ ಸಮಯಕ್ಕೆ ಇಲ್ಲಿ ನನ್ನ ಮುತ್ತಾತನವರ ಮೂರನೇ ಪತ್ನೀಮಣಿ ಇಲ್ಲವೆಂದು ಚಿಂತಿಸುತ್ತಿದ್ದೇನೆ. ನನ್ನನ್ನು ಪೋಷಿಸಿ ಬೆಳೆಸಿ ದೊಡ್ಡವನಾಗಿ ಮಾಡಿದವಳು ಆಕೆಯೇ. ಆದರೂ ಪರವಾಗಿಲ್ಲ ಅನ್ನು. ನಮ್ಮ ವಂಶಾಚಾರದ ಪ್ರಕಾರ ಈ ಗದೆಯಿಂದ ಒಂದು ಸಾರಿ ನಿನ್ನ ತಲೆಯನ್ನು ತಡವಿಬಿಡುತ್ತೇನೆ. ತಲೆಬಾಗು. ಮದುವೆಯಾಗೋಣ" ಎನ್ನುತ್ತಾ ಮುಂದಡಿ ಇಟ್ಟನು.

ಖೇಚರಿ ಕಿರ್ರನೆ ಕಿರಿಚಿ ಹಿಂದೆ ಓಡಲು ನೋಡಿದಳು. ಅಷ್ಟರೊಳಗೆ ಪಿಂಗಳನು ತನ್ನ ಗದೆಯಿಂದ ಅವಳ ನೆತ್ತಿಯ ಮೇಲೆ ಒಂದೇಟು ಹಾಕಿಯಾಗಿತ್ತು ! ಮರುಕ್ಷಣದಲ್ಲಿ ದೊಡ್ಡದೊಂದು ಆರ್ಭಟೆ ! ಮಾಯಾ ಸುಂದರೀ ರೂಪದ ಆ ಪಿಶಾಚಿ ಕೂಡಾ ಚೂರುಚೂರಾಗಿ ಆಕಾಶದಲ್ಲಿ ಎಂಟು ದಿಕ್ಕುಗಳಿಗೂ ಹಾರಿ ಮಾಯವಾಯಿತು.

ಪಿಂಗಳನು ದೊಡ್ಡದನಿಯಿಂದ ನಗುತ್ತ ಹಿಂದಿರುಗಿ ಪದ್ಮಪಾದನ ಬಳಿಗೆ ಬಂದನು. ಇನ್ನೂ ಪದ್ಮಪಾದನು ಧ್ಯಾನ ನಿಷ್ಠೆಯಲ್ಲೇ ಇದ್ದಾನೆ. ಪಿಂಗಳನ ಕಣ್ಣು ನದಿಯ ಕಡೆಗೆ ಹೋಯಿತು. ಅವನಿಗಾದ ಆಶ್ಚರ್ಯಕ್ಕೆ ಅಂತ್ಯವೇ ಇರಲಿಲ್ಲ. ನದಿಯಲ್ಲಿ ನೀರು ಹರಿಯುವುದು ನಿಂತು ತಳದಿಂದ ತಳಕ್ಕೆ ಇಂಗಿ ಹೋಗುತ್ತಾ ಇದೆ. ಅದುವರೆಗೂ ಆ ನೀರಿನಲ್ಲಿ ವಾಸವಾಗಿದ್ದ ಜಲಚರಗಳು ಗುಂಪು ಗುಂಪಾಗಿ ನೆಲಕ್ಕೆ ಹಾರುತ್ತ ಅತ್ತಿತ್ತ ಎಗರಾಡಿಕೊಂಡಿವೆ.

ಆಶ್ಚರ್ಯದಿಂದ ಮೈಮರೆತು ನೋಡುತ್ತಿದ್ದವನನ್ನು "ಪಿಂಗಳಾ !" ಎಂಬ ಪದ್ಮಪಾದನ ಧ್ವನಿ

ಎಚ್ಚರಿಸಿತು. ಪದ್ಮಪಾದನು ಕಣ್ಣುಗಳನ್ನು ತೆರೆದಿದ್ದನು. ಪಿಂಗಳನು ಅವನ ಬಳಿಗೆ ಹಾರಿ "ಪದ್ಮಪಾದರೇ ! ನದಿಯನ್ನು ನೋಡಿರಿ !" ಎಂದನು.

ಪದ್ಮಪಾದನು ನದಿಯ ಕಡೆಗೆ ದೃಷ್ಟಿ ಹಾಯಿಸಿ, "ಭೇಷ್ ! ಮಹಾಮಾಯನ ಶಿಷ್ಯರು ಹೇಳಿದ ಮಾತು ಉಳಿಸಿಕೊಂಡರು. ನಮಗೆ ಬೇಕಾದ ಪಾಳು ಬಿದ್ದ ದೇವಾಲಯವೆಲ್ಲಿದೆ ?" ಎಂದನು.

ಪಿಂಗಳನು ನದಿಯ ಮಧ್ಯಭಾಗವನ್ನು ಪರೀಕ್ಷಿಸಿ ನೋಡುತ್ತ, "ಅದೋ ನೋಡಿದಿರಾ! ಈಗಲೀಗ ಶಿಖರಭಾಗವು ನೀರಿನಿಂದ ಮೇಲೆ ಬರುತ್ತಾ ಇದೆ. ಅದೇನಾ ಮಹಾಮಾಯನು ಸಮಾಧಿ ಹೊಂದಿದ ದೇವಾಲಯ ?" ಎಂದು ಕೇಳಿದನು.

ಪದ್ಮಪಾದನು ಪಿಂಗಳನು ತೋರಿಸಿದ ದಿಕ್ಕನ್ನು ನೋಡಿ, ತೃಪ್ತಿಯ ನಗುವಿನೊಂದಿಗೆ, "ಅದೇ ಪಾಳು ಬಿದ್ದ ದೇವಾಲಯ. ನದಿಯ ನೀರೆಲ್ಲಾ ಒಂದು ಚುಕ್ಕಿ ಕೂಡಾ ಇಲ್ಲದಂತೆ ಇಂಗಿ ಹೋದ ಮೇಲೆ, ಮಹಾಮಾಯನ ಶಿಷ್ಯರಿಬ್ಬರೂನಮ್ಮ ಹತ್ತಿರ ಬರುತ್ತಾರೆ. ಅದಿರಲಿ. ನಾನು ನಿಷ್ಠೆಯಲ್ಲಿರುವಾಗ, ಅದನ್ನು ಭಗ್ನಪಡಿಸಲು ಪಿಶಾಚಿಗಳೇನೂ ಬರಲಿಲ್ಲವಷ್ಟೆ ?" ಎಂದು ಕೇಳಿದನು.

ಪಿಂಗಳನು ಹೆಮ್ಮೆಯಿಂದಲೂ ಸಂತೋಷದಿಂದಲೂ ತಾನು ಸಂಹರಿಸಿದ ಗಂಡಭೇರುಂಡ ಪಕ್ಷಿಯನ್ನೂ, ಮಾಯದ ಸುಂದರಾಂಗಿಯನ್ನೂ ಕುರಿತು ವಿವರಿಸಿ ಹೇಳಿದನು. ಪದ್ಮಪಾದನು ಮೆಚ್ಚುಗೆಯಿಂದ ಪಿಂಗಳನ ಭುಜ ತಟ್ಟುತ್ತ, "ಪಿಂಗಳಾ, ಗಂಧರ್ವಸ್ತ್ರೀಯ ರೂಪದಲ್ಲಿ ಬಂದ ಪಿಶಾಚಿನಿಯ ಸೌಂದರ್ಯಕ್ಕೆ ವಶನಾಗದೆ ನಿನ್ನನ್ನು ನೀನು ನಿಗ್ರಹಿಸಿಕೊಂಡದ್ದು ಬಹು ದೊಡ್ಡ ವಿಷಯ. ಇದು ನನಗೆ ಬಹಳ ಆನಂದವನ್ನುಂಟುಮಾಡಿದೆ. ನೀನು ಪಾಳುದೇಗುಲದೊಳಗೆ ಪ್ರವೇಶಿಸುವಾಗಲೂ ಇಂತಹವೇ ಆದ ಕೆಲವು ಪರೀಕ್ಷೆಗಳನ್ನು ಇದಿರಿಸಬೇಕಾಗಿ ಬರುತ್ತದೆ. ನೀನು ಖಂಡಿತಾ ಗೆಲ್ಲುವಿ ಎಂಬ ನಂಬುಗೆ ನನಗಾಗಿದೆ. ಆದರೂ ಜಾಗ್ರತೆಯಿಂದಿರು" ಎಂದನು.

ಅಷ್ಟರಲ್ಲಿ ನದಿಯ ಮಧ್ಯದಿಂದ "ಓ ಮಹಾ ಮಾಂತ್ರಿಕಾ ! ಇತ್ತ ನೋಡಿರಯ್ಯಾ !" ಎಂಬ ಜೋಡು ಕಂಠಗಳಿಂದ ಹೊರಟ ದೊಡ್ಡದೊಂದು ಕೂಗು ಕೇಳಿತು.

ಪದ್ಮಪಾದನೂ ಪಿಂಗಳನೂ ಆಕಡೆಗೆ ನೋಡಿದರು. ಒಂದು ದೇವಾಲಯದ ಶಿಖರವು ಅವರ ದೃಷ್ಟಿಯನ್ನು ಆಕರ್ಷಿಸಿತು. ಅದರ ಪಕ್ಕದಲ್ಲಿ ನಿಂತಿರುವ ಮಹಾಮಾಯನ ಶಿಷ್ಯರಿಬ್ಬರೂ ಕಣ್ಣಿಗೆ ಬಿದ್ದರು. ಅವರು ಪದ್ಮಪಾದನ ಕಡೆಗೇ ನೋಡಿಕೊಂಡಿದ್ದರು.

(ಇನ್ನೂ ಇದೆ)






## ೬

[ಪದ್ಮಪಾದನೂ ಪಿಂಗಳನೂ ಭಲ್ಲೂಕ ಪರ್ವತ ಕಣಿವೆಯಲ್ಲಿ ಹರಿಯುವ ನದಿಯ ಬದಿಗೆ ಹೋದರು. ನದಿಯ ನೀರನ್ನೆಲ್ಲ ಬತ್ತಿಸಲು ಪದ್ಮಪಾದನು ಸಮಾಧಿ ನಿಷ್ಠೆಯಲ್ಲಿ ಮಂತ್ರ ಜಪಿಸುತ್ತಿರುವಾಗ, ಪಿಂಗಳನು ಗದೆಯೊಂದಿಗೆ ಕೆಡಿಸಲು ಬರುವ ದುಷ್ಟ ಶಕ್ತಿಗಳನ್ನು ಓಡಿಸುತ್ತ ಅವನನ್ನು ರಕ್ಷಿಸುತ್ತಿದ್ದನು. ಸ್ವಲ್ಪ ಹೊತ್ತಿಗೆ ನದಿಯ ನೀರು ಬತ್ತಿತು. ಅದರಡಿಯಲ್ಲಿದ್ದ ದೇವಾಲಯದ ಶಿಖರವು ಕಂಡಿತು.]

**ಬ**ತ್ತಿ ಹೋದ ನದಿಯ ತಳದಲ್ಲಿ ಮೇಲೆದ್ದು ಕಾಣುವ ದೇವಾಲಯ ಶಿಖರವನ್ನು ಪದ್ಮಪಾದನು ಸ್ವಲ್ಪ ಹೊತ್ತು ನೆಟ್ಟಗಣ್ಣಿನಿಂದ ನೋಡಿದನು. ಆ ಶಿಖರದ ಪಕ್ಕದಲ್ಲಿ ನಿಂತುಕೊಂಡಿದ್ದ ಮಹಾ ಮಾಯನ ಶಿಷ್ಯರನ್ನು ನೋಡಿ ಹತ್ತಿರ ಬರುವಂತೆ ಕೈಸನ್ನೆ ಮಾಡಿದನು.

ಅವರಿಬ್ಬರೂ ನಿಮಿಷಮಾತ್ರದೊಳಗೆ ಪದ್ಮ ಪಾದನ ಸಮೀಪಕ್ಕೆ ಬಂದು ಬಾಗಿ ನಮಸ್ಕರಿಸಿ ಬಹಳ ವಿನಯದಿಂದ ಅವನ ಅಪ್ಪಣೆಯನ್ನು ಇದಿರು ನೋಡುವವರಂತೆ ನಿಂತರು.

"ಸರಿ. ನಿಮ್ಮಿಂದ ಆಗಬೇಕಾದ ಕೆಲಸವಾಯಿತು. ನೀವು ನನ್ನ ಆಜ್ಞೆಯನ್ನು ಶಿರಸಾವಹಿಸಿ ನೆರವೇರಿ ಸಿದಿರಿ. ನನಗೆ ಬಹಳ ತೃಪ್ತಿಯನ್ನುಂಟು ಮಾಡಿದಿರಿ. ಸಂತೋಷವಾಯಿತು. ಪ್ರಸ್ತುತದಲ್ಲಿ ನೀವು ನಿಮ್ಮ ಇಷ್ಟ ಬಂದ ಸ್ಥಳಕ್ಕೆ ಹೋಗಬಹುದು. ನನ್ನ ಮಂತ್ರ ಶಕ್ತಿಯ ಕಾಲು ಭಾಗ ಮಾತ್ರ ನಿಮ್ಮನ್ನು ಹಿಡಿದಿರು ತ್ತದೆ." ಎಂದು ಪದ್ಮಪಾದನು ಅವರನ್ನು ನೋಡಿ ಹೇಳಿದನು.

ಆದರೆ ಮಹಾಮಾಯನ ಶಿಷ್ಯರು ಸಂತೋಷ ದಿಂದ ಹೊರಡಲು ಸಿದ್ಧರಾದರಂತೆ ಕಾಣಲಿಲ್ಲ.








ಅವರೇನೋ ಬೇರೆ ಆಲೋಚನೆಯಿಂದ ಪರಸ್ಪರ ನೋಡಿಕೊಂಡರು. ಬಳಿಕ ಅವರಲ್ಲಿ ಒಬ್ಬನು ಧೈರ್ಯ ತಂದುಕೊಂಡು, "ಅಯ್ಯಾ, ಮಹಾ ಮಾಂತ್ರಿಕಾ! ದಯಮಾಡಿ ನಮ್ಮದೊಂದು ವಿಜ್ಞಾಪನೆಯನ್ನು ಆಲಿಸಬೇಕೆಂದು ಬೇಡಿಕೊಳ್ಳುತ್ತೇವೆ. ನಮ್ಮಿಂದ ನಿಮಗೆ ಆಗಬೇಕಾದ ಸಹಾಯ ಆಗಿಹೋಯಿತು. ಇನ್ನಾದರೂ ನಮ್ಮನ್ನು ಮಂತ್ರಬಂಧನದಿಂದ ಪೂರ್ತಿ ಬಿಡುಗಡೆ ಮಾಡಿ ಕಳುಹಿಸಬಾರದೆ? ಹೀಗೆಯೇ ನಾವಿರುವುದರಿಂದ, ಸ್ವತಂತ್ರವಾಗಿ ತಿರುಗಾಡಲು ಸಾಧ್ಯವಿಲ್ಲದಂತೆ ಸೂತ್ರದ ಕೊನೆಯನ್ನು ಮಂತ್ರದ ಮೂಲಕ ನಿಮ್ಮಲ್ಲೇ ಇಟ್ಟುಕೊಂಡಿದ್ದೀರಲ್ಲಾ? ಪೂರ್ತಿ ಬಿಟ್ಟುಬಿಡಬಾರದೆ? ನಾವು ಬೇಕಂತ ನಿಮಗೆ ಯಾವ ಕೇಡೂ ಬಗೆದವರಲ್ಲ. ಅದು ನಿಮಗೂ ಗೊತ್ತಿದೆ" ಎಂದರು ದೀನ ಸ್ವರದಿಂದ.

"ಓ ಅದುವೋ ನಿಮ್ಮ ಆಲೋಚನೆ? ನನ್ನನ್ನು ಯಾರೆಂದುಕೊಂಡಿದ್ದೀರಿ? ನಾನು ಯಾವ ಕೆಲಸಕ್ಕೆ ಬಂದೇನೋ ಆ ಕೆಲಸ ಪೂರ್ತಿ ನೆರವೇರದೆ ನಿಮ್ಮನ್ನು ಮಂತ್ರಬಂಧದಿಂದ ಮುಕ್ತಮಾಡುವೆನೆಂದು ಕೊಂಡಿರಾ, ನಿಮ್ಮ ಈ ವಿನಯಗಳನ್ನು ನಂಬಿ?" ಎಂದು ಪದ್ಮಪಾದನು ಗಟ್ಟಿಯಾಗಿ ನಕ್ಕು, "ನೀವೇನಾದರೂ ಸಾಧಾರಣ ಪಿಶಾಚಿಗಳಲ್ಲವೆಂದು ನನಗೆ ಗೊತ್ತು. ಮಹಾ ದುಷ್ಟ ಕ್ರೂರ ಪಿಶಾಚಗಣಕ್ಕೆ ಸೇರಿದವರು ನೀವು! ಆದ್ದರಿಂದ ನಿಮ್ಮ ಗುರುವಿನ ಸಮಾಧಿಯಿಂದ ನಾನು ಸಂಗ್ರಹಿಸಬೇಕಾದುದನ್ನು ಸಂಗ್ರಹಿಸದೆ, ನಿಮ್ಮನ್ನು ಮಂತ್ರಬಂಧನದಿಂದ ಪೂರ್ತಿ ಮುಕ್ತಮಾಡಲು ಸಾಧ್ಯವೇ ಇಲ್ಲ. ಈಗ ಬಿಡುವಷ್ಟಕ್ಕೇ ತೃಪ್ತರಾಗಿರಿ. ಹೆಚ್ಚಿನ ಕಷ್ಟ ಕೊಡಲಾರೆ" ಎಂದನು.

ಪದ್ಮಪಾದನು ಹೇಳಿದುದನ್ನು ಕೇಳಿ, ಮಹಾ ಮಾಯನ ಶಿಷ್ಯರಿಬ್ಬರೂ ಏನೂ ತೋರದವರಂತಾದರು. ಆ ಸ್ಥಿತಿಯಲ್ಲಿ ಅವರು ಪದ್ಮಪಾದನಿಗೆ ಸಾಷ್ಟಾಂಗ ನಮಸ್ಕಾರಮಾಡಿ, "ಮಹಾ ಮಾಂತ್ರಿಕಾ! ನಾವು ನಿಮಗೆ ದಾಸಾನುದಾಸರಾಗಿರುವವರು. ಮಂತ್ರ ಬಲದಿಂದ ನೀವು ನಮ್ಮನ್ನು ಬಂಧಿಸಿದಂದಿನಿಂದಲೂ ನಮಗೆ ಹೊಟ್ಟೆ ತುಂಬಾ ಆಹಾರವಿಲ್ಲದಾಗಿದೆ. ನಾವು ಶಕ್ತಿಹೀನರಾಗಿ ಹೋಗಿಬಿಟ್ಟೆವು. ಇನ್ನು ಮುಂದೆ ಅಂತಹ ಶಕ್ತಿ ನಮಗೆ ಬರುವುದೆಂಬ ನಂಬುಗೆಯೂ ನಮಗಿಲ್ಲ." ಎಂದು ವಿಲಪಿಸತೊಡಗಿದರು.

ಇದನ್ನು ನೋಡುತ್ತಿದ್ದ ಪಿಂಗಳನಿಗೆ ಅವರಿಬ್ಬರ ಮೇಲೆ ಬಹಳ ಕರುಣೆ ಒಸರಿತು. ಅವನು ಪದ್ಮಪಾದನ ಕಡೆಗೆ ತಿರುಗಿ. "ಇವರು ಪಾಪ, ದಾಸಾನುದಾಸರೆಂದರಲ್ಲಾ..." ಎಂದು ಏನೋ ಹೇಳಲಿರುವಷ್ಟರಲ್ಲಿ, ಪದ್ಮಪಾದನು ಅವನನ್ನು ಸುಮ್ಮನಿರುವಂತೆ ಹೇಳಿ, ಮಹಾಮಾಯನ ಶಿಷ್ಯರೊಡನೆ ಹೀಗೆಂದನು:

"ನೀವು ಇಷ್ಟು ಕಾಲ ಸರಿಯಾದ ಆಹಾರವಿಲ್ಲದೆ ಬಳಲಿದ್ದೀರೆಂಬುದು ನನಗೆ ಗೊತ್ತು. ನಿಮಗೆ ಬೇಟೆ



ಯಾಡುವ ಶಕ್ತಿಯನ್ನು ಕೊಟ್ಟುಬಿಟ್ಟರೆ, ಮರುಕ್ಷಣ ದಲ್ಲಿ ನೀವು ನನ್ನನ್ನೇ ಬೇಟೆಯಾಡಿ ಕೊಲ್ಲಲು ಪ್ರಯತ್ನಿಸುವವರು. ನಿಮಗೆ ಪಾಪ, ಪುಣ್ಯ, ಕೃತಜ್ಞತೆ ಯಾವುದೂ ತಿಳಿಯದು. ನಿಜತಾನೆ ?"

"ಮಹಾಮಾಂತ್ರಿಕರಾದ ನಿಮ್ಮನ್ನು ಏನಾದರೂ ಮಾಡ ಬೇಕಾದರೆ ಎಂತಹ ಘೋರ ಪಿಶಾಚಿಗೂ ಧೈರ್ಯಬಾರದು. ಅತ್ಯಂತ ಕ್ಷುದ್ರರಾದ ನಾವೇನು ನಿಮ್ಮನ್ನು ಬೇಟೆಯಾಡಿಯೇವು ಸ್ವಾಮಿ ?" ಎಂದು ಮಹಾಮಾಯನ ಶಿಷ್ಯರು ಮೋರೆಯಲ್ಲಿ ದೀನಾತಿ ದೀನತೆಯನ್ನು ತೋರಿಸಿ ಅಂಗಲಾಚಿದರು.

ಪದ್ಮಪಾದನು ನಕ್ಕನು. ತರುವಾಯ ಪಿಂಗಳನ ಕೈಯಿಂದ ಮಂತ್ರಶಕ್ತಿಯ ಗದೆಯನ್ನು ತೆಗೆದು ಕೊಂಡು, "ಇದೋ, ನಿಮಗಿಬ್ಬರಿಗೂ ಪ್ರಸ್ತುತಕ್ಕೆ ಮಾನವರ ಹೊರತು ಬೇರೆ ಯಾವುದನ್ನಾದರೂ ಕೊಂದು ತಿನ್ನುವ ಶಕ್ತಿಯನ್ನು ಕೊಡುತ್ತೇನೆ. ಅದಕ್ಕೆ ತಕ್ಕ ಹಾಗೆ ನಿಮಗೆ ಯಾವ ರೂಪ ಬೇಕು ? ಕೇಳಿರಿ !" ಎಂದು ಕೇಳಿದನು.

"ಪದ್ಮಪಾದರೇ, ಅವರಿಗೆ ಆನೆಯ ರೂಪ ಕೊಟ್ಟುಬಿಡಿರಿ. ಅದಕ್ಕಿಂತ ದೊಡ್ಡ ರೂಪ ಯಾವುದಿದೆ ? ಅಲ್ಲಿ ಕಾಣುವ ಕಾಡಿನೊಳಗೆ ನಿರ್ಭಯ ವಾಗಿ ಬದುಕಿರುತ್ತಾರೆ " ಎಂದನು ಪಿಂಗಳ.

"ಆನೆಯ ರೂಪವೇ ! ಬೇಡ ಬೇಡ !" ಎಂದು ಮಹಾಮಾಯನ ಶಿಷ್ಯರಿಬ್ಬರೂ ಏಕಕಂಠದಿಂದ ಕೂಗಿದರು : "ಆ ರೂಪದಲ್ಲಿ ನಾವು ಸೊಪ್ಪು ಸೊದೆಗಳ ಹೊರತು ಮಾಂಸ ತಿನ್ನಲು ಸಾಧ್ಯವಿಲ್ಲ. ಸಸ್ಯಾಹಾರವೆಂದರೆ ನಮಗೆ ಆಗದು. ಅದು ನಮಗೆ ವಿಷತುಲ್ಯವೇ ಆಗುತ್ತದೆ. ಕಡೆಗೆ ಇನ್ನಿಷ್ಟು ಬಲ ಇಳಿದು ಯಾವುದಕ್ಕೂ ಆಗದ ಹಾಗಾಗುತ್ತೇವೆ."

"ಹಾಗಾದರೆ ನಿಮ್ಮಲ್ಲಿ ಒಬ್ಬನನ್ನು ಸಿಂಹ ವಾಗಿಯೂ–" ಎಂದು ಪದ್ಮಪಾದನು ಮಹಾ ಮಾಯನ ಶಿಷ್ಯರಲ್ಲಿ ಒಬ್ಬನ ತಲೆಯ ಮೇಲೆ ಗದೆ ಯಿಂದ ಬಡಿದನು. ಮರುಕ್ಷಣದಲ್ಲಿ ಅವನು ಸಿಂಹವಾಗಿ ಮಾರ್ಪಟ್ಟು ಜೂಲಾಡಿಸುತ್ತಾ ನಿಂತನು.

"ಮತ್ತೊಬ್ಬನನ್ನು ಹೆಬ್ಬುಲಿಯಾಗಿಯೂ ಮಾಡುತ್ತೇನೆ" ಎಂದು ಪದ್ಮಪಾದನು. ಮಾತು ಪೂರ್ತಿಮಾಡಿ, ಎರಡನೆಯವನ ತಲೆಯ ಮೇಲೆ ಗದೆಯಿಂದ ಹೊಡೆದನು, ಕೂಡಲೇ ಅವನು ಹೆಬ್ಬುಲಿ ಯಾಗಿ ಬದಲಾದನು.

ಪಿಂಗಳನು ಅವರಿಬ್ಬರ ಮಾರ್ಪಾಡುಗಳನ್ನು ನೋಡಿ, ಆಶ್ಚರ್ಯಪಟ್ಟು, "ಭಲೆ ಭಲೆ ! ಇನ್ನು ನಿಮಗಿಬ್ಬರಿಗೂ ಬೇಕಾದಷ್ಟು ಮಾಂಸಾಹಾರ ! ಅಲ್ಲಿ ಕಾಣುವ ಅಡವಿಯಲ್ಲಿ ಗಮ್ಮತ್ತಾಗಿರಬಹುದು !" ಎಂದು ಹೆಬ್ಬುಲಿಯನ್ನೂ, ಸಿಂಹವನ್ನೂ ತಡವಿ ತಟ್ಟಿ ದನು. ಕೂಡಲೇ ಕ್ರೂರಮೃಗಗಳ ರೂಪದಲ್ಲಿರುವ ಮಹಾಮಾಯನ ಶಿಷ್ಯರಿಬ್ಬರೂ, ಭೀಕರವಾಗಿ ಗರ್ಜಿ ಸುತ್ತ ಅತ್ತ ಕಾಣುವ ಕಾಡಿನ ಕಡೆಗೆ ಓಡಿದರು. ಈ ರೂಪಗಳು ಅವರಿಗೆ ತೃಪ್ತಿಯನ್ನು ತಂದಂತೆ ಕಾಣಿಸಿತು.







ಪದ್ಮಪಾದನು ಮಹಾಮಾಯನ ಶಿಷ್ಯರು ಕಾಡಿಗೆ ಓಡುವ ಚೆಂದವನ್ನು ಸ್ವಲ್ಪ ಹೊತ್ತು ನೋಡಿ, ಪಿಂಗಳನ ಕಡೆಗೆ ತಿರುಗಿ, "ಇನ್ನು ನಾವು ಬಹಳ ಜಾಗರೂಕರಾಗಿರಬೇಕಾಗಿದೆ. ನಮ್ಮ ಪ್ರಯತ್ನವನ್ನು ಕೆಡಿಸಿಹಾಕಲಿಕ್ಕಷ್ಟೇ ಅಲ್ಲದೆ, ನಮ್ಮನ್ನು ಸಂಹರಿಸಲಿಕ್ಕೆ ಕೂಡಾ ಅನೇಕ ದುಷ್ಟಶಕ್ತಿಗಳು ಕಾದುಕೊಂಡಿವೆ. ಇದನ್ನು ಮರೆಯದೆ ನಮ್ಮ ಕೆಲಸ ನೋಡಿಕೊಳ್ಳಬೇಕು. ಹೀಗೆ ಬಾ, ಇಲ್ಲಿನಿಂತು ಚೆನ್ನಾಗಿ ನೋಡು! ಬತ್ತಿದ ನದಿಯ ಮಧ್ಯದಲ್ಲಿ ಆ ಹಾಳು ದೇವಾಲಯದ ಶಿಖರವು ನಿನಗೆ ಸ್ಪಷ್ಟವಾಗಿ ಕಾಣುವುದಷ್ಟೆ?" ಎಂದು ಪಿಂಗಳನನ್ನು ತನ್ನ ಮುಂದೆ ನಿಲ್ಲಿಸಿ ಕೇಳಿದನು.

ಪಿಂಗಳನು ಅದರ ಕಡೆಗೆ ನೋಡುತ್ತ ಕಾಣುತ್ತದೆಂದು ತಲೆಯಾಡಿಸಿದನು.

"ಹಾಗಾದರೆ ನೀನೇ ಅದಕ್ಕೆ ತಕ್ಕವನೆಂದು ನಿಶ್ಚಯವಾಯಿತು. ನಿನಗೆ ಜಯವಾಗುವುದೂ ನಿಶ್ಚಯ. ನೀನೀಗ ಆ ದೇವಾಲಯಕ್ಕೆ ಹೋಗಿ ಮಹಾಮಾಯನ ಸಮಾಧಿಯನ್ನು ತಲಪಬೇಕು. ಆ ಸಮಾಧಿಯನ್ನು ತಲಪುವ ಮೊದಲು ನೀನು ದಾಟಬೇಕಾದ ದ್ವಾರಗಳ ಸಂಖ್ಯೆ ಆರು. ಆರು ದ್ವಾರಗಳಲ್ಲಿಯೂ ರಕ್ಷಕರಾಗಿ ಬಹು ಭಯಂಕರರಾದ ಮಾಯದ ರಕ್ಕಸರಿರುತ್ತಾರೆ. ಅವರಲ್ಲಿ ಪ್ರತಿಯೊಬ್ಬರೂ ನಿನ್ನನ್ನು ಸಂಹರಿಸಲಿಕ್ಕೇ ಬರುತ್ತಾರೆ. ನೀನು ಅವರನ್ನು ನೋಡಿ ಸ್ವಲ್ಪ ಮಾತ್ರ ಭಯವನ್ನು ತೋರಿಸಿದರೂ ನಮ್ಮ ಪ್ರಯತ್ನ ಹಾಳಾಗುವುದಷ್ಟೇ ಅಲ್ಲ, ಪ್ರಾಣಾಪಾಯವೂ ಉಂಟಾಗುತ್ತದೆ. ತುಂಬ ಹುಷಾರ್! ಸರ್ವಸಾಧಾರಣವಾಗಿ ನಿನ್ನ ಪರಿಚಯದ ಸ್ಥಳಕ್ಕೆ ಹೋಗುವವನ ಹಾಗೆಯೇ ಒಳಗೆ ಪ್ರವೇಶಿಸು." ಎಂದನು ಪದ್ಮಪಾದ.

ಪಿಂಗಳನು ಉತ್ತರವೇನೂ ಕೊಡಲಿಲ್ಲ. ಅವನ ದೃಷ್ಟಿ ನದಿಯ ತಳದಲ್ಲಿರುವ ಪಾಳು ದೇವಾಲಯದ ಮೇಲೆಯೇ ಇದ್ದಿತು. ಪದ್ಮಪಾದನು ಅವನನ್ನು ಒಂದು ಸಾರಿ ನೋಡಿ, "ಪಿಂಗಳಾ, ಅಲ್ಲಿಯವರೆಗೆ ನೀನೊಬ್ಬನೇ ಹೋಗುವೆನೆಂದು ಎಣಿಸಬೇಡ. ಮೊದಲನೇ ಬಾಗಿಲಿನವರೆಗೆ ನಾನೂ ನಿನ್ನೊಂದಿಗೆ ಬರುತ್ತೇನೆ. ಆ ದ್ವಾರವನ್ನು ನೀನು ತೆರೆದು ಪ್ರವೇಶಿಸಿದ ಮೇಲೆ, ಉಳಿದ ಐದು ದ್ವಾರಗಳನ್ನು ಕೂಡಾ ತೆರೆದುಕೊಂಡು, ಮಹಾಮಾಯನ ಸಮಾಧಿಯೊಳಗೆ ಪ್ರವೇಶಿಸಬೇಕಾದವನು ನೀನೇ. ಆಗ ನಾನು ಅಲ್ಲೆಲ್ಲಿಯೂ ಇರಲಾರೆನು. ಆದರೂ ನನ್ನ ದೃಷ್ಟಿ ನಿನ್ನ ಮೇಲೆಯೇ ಇರುತ್ತದೆಂದು ನಂಬು." ಎಂದನು.

ಹೀಗೆ ಹೇಳಿ ಪದ್ಮಪಾದನು ಮುಂದೆ ಹೊರಟನು. ಅವನೊಂದಿಗೆ ಪಿಂಗಳನೂ ನಡೆದನು. ಒಂದು ಬೊಟ್ಟು ನೀರೂ ಇಲ್ಲದ ನದಿಯ ತಳದಲ್ಲಿ ನಡೆದು ಅವರಿಬ್ಬರೂ ಪಾಳುದೇವಾಲಯವನ್ನು ಸಮೀಪಿಸಿದರು. ಅದರ ಮೊದಲನೇ ದ್ವಾರವು ನೋಡುವವರಿಗೆ



ಬಹಳ ಭಯವನ್ನು ಹುಟ್ಟಿಸುವಂತಿತ್ತು. ದಪ್ಪವಾದ ಕರಿಮರದ ದ್ವಾರಬಂಧದ ಬಾಗಿಲ ಹಲಗೆಗಳಿಗೆ ಅನೇಕ ವಿಧದ ಭಯಂಕರಾಕೃತಿಗಳನ್ನು ಕೆತ್ತಲಾಗಿತ್ತು. ಎರಡು ಬಾಗಿಲನ್ನೂ ಹಾಕಿ ಸೇರಿಸಿದ ಅಗಳಿಯನ್ನು ಸುತ್ತಿಕೊಂಡು ಒಂದು ಸರ್ಪವು ಹೆಡೆಬಿಚ್ಚಿ ಸುರುಳಿ ಸುರುಳಿಯಾಗಿ ಸುತ್ತಿಕೊಂಡೇ ಆಡಿಗಡಿಗೂ ಬುಸುಗುಡುತ್ತಿದ್ದಿತು.

ಪದ್ಮಪಾದನು ಆ ಸರ್ಪದ ಕಡೆಗೆ ಕೈಯಾಡಿಸಿ, "ಪಿಂಗಳಾ, ನೀನು ನಿರ್ಭಯದಿಂದ ಆ ಸರ್ಪವನ್ನು ಸರ್ಪವೆಂದುಕೊಳ್ಳದೆ ನಿನ್ನ ಕೈಯಿಂದ ಮುಟ್ಟಬೇಕು. ಆಮೇಲೆ ಒಳಗಿನಿಂದ ಒಂದು ಭೀಕರಾಕಾರವು ನಿನ್ನನ್ನು ಪ್ರಶ್ನಿಸುತ್ತದೆ. ನೀನು ಯಾರೆಂಬುದನ್ನು ನಿಃಶಂಕೆಯಿಂದ ಹೇಳಿಬಿಡು. ಆಗ ಬಾಗಿಲು ತೆರೆದು ಕೊಳ್ಳುತ್ತದೆ. ಆಮೇಲೆ ಏನೇನು ನಡೆಯುತ್ತ ದೆಂಬುದನ್ನು ನಿನಗೆ ಹೇಳುವುದೆಂದರೆ, ನನ್ನ ಮಂತ್ರ ಶಕ್ತಿಯನ್ನು ಕಳೆದುಕೊಳ್ಳುವುದೇ ಆಗುತ್ತದೆ. ಆದುದರಿಂದ ನೀನು ಯಾವುದಕ್ಕೂ ಹೆದರದಿದ್ದರೆ ಸರಿ. ಎಲ್ಲಾ ದ್ವಾರಗಳೂ ತೆರೆದುಕೊಂಡು ಮಹಾ ಮಾಯನ ಸಮಾಧಿಯ ಬಳಿಗೆ ಹೋಗುವಿ. ಅಲ್ಲಿರುವ ಅಪೂರ್ವ ವಸ್ತುಗಳ ಸಂಗತಿ ಏನೆಂಬುದೆಲ್ಲ ನಿನಗೆ ಗೊತ್ತೇ ಇದೆ. ಮತ್ತೆ ಹೇಳ ಬೇಕಾಗಿಲ್ಲವಷ್ಟೇ?" ಎಂದನು.

"ಪದ್ಮಪಾದರೇ, ನಾನು ಎಂತಹ ಭೀಕರಕ್ಕೂ ಹೆದರಲಾರೆನು. ಆದರೆ ಮರೆಯಲ್ಲಿ ಅಡಗಿಕೊಂಡಿದ್ದು ಮೋಸದಿಂದ ನನ್ನನ್ನು ಹತ ಮಾಡಲು ನೋಡು ವಂತಹ ದುಷ್ಟಶಕ್ತಿ ಯಾವುದೂ ಇಲ್ಲವಷ್ಟೆ?" ಎಂದು ಪಿಂಗಳನು ಪ್ರಶ್ನಿಸಿದನು.

"ಮನಸ್ಸು ಮಾಡಿದರೆ ನಿನ್ನನ್ನು ಮೋಸವೇ ನಿಲ್ಲದೆಯೇ ಈ ದೇವಳದಲ್ಲಿರುವ ಶಕ್ತಿಗಳು ಹತ ಮಾಡಬಲ್ಲವು. ಆದರೆ ನೀನು ಭಯವಿಲ್ಲದೆ ಮುಂದೆ ಮುಂದೆ ಹೋಗುತ್ತಿದ್ದರೆ ಅವು ನಿನ್ನನ್ನು ಏನೂ ಮಾಡಲಾರವು, ಹೆದರಿದ ಹಾಗೆ ತೋರಗಲೇಬಾರದು. ನೀನು ನಮಗೆ ಬೇಕಾದ ವಸ್ತುಗಳನ್ನು ಸಂಪಾದಿಸಿದ ಮೇಲೆ ನಿನಗಿಂತ ಹೆಚ್ಚಿನ ಶಕ್ತಿವಂತನು ಪ್ರಪಂಚದಲ್ಲೇ ಇನ್ನೊಬ್ಬನಿರಲಾರನು ನಿನಗೆ ಜಯವಾಗಲಿ!" ಎಂದನು ಪದ್ಮಪಾದ.

"ಅದಕ್ಕಾಗಿ ತಾನೇ ನಾನು ಇಷ್ಟು ಗಂಡಾಂತರ ಗಳನ್ನು ಇದಿರಿಸಲು ಸಿದ್ಧನಾದದ್ದು? ಭಯಶಂಕೆ ಗಳನ್ನೆಲ್ಲ ಎಲ್ಲಿಯೋ ಕಟ್ಟಿ ಬಿಸಾಡಿದ್ದೇನೆ. ನಾನು ಹಳೆಯ ಪಿಂಗಳನೇ ಅಲ್ಲ!" ಎನ್ನುತ್ತಾ ಪಿಂಗಳನು ಮುಂದಕ್ಕೆ ಅಡಿ ತೆಗೆದನು.

ಅದೇ ಸಮಯದಲ್ಲಿ ಪದ್ಮಪಾದನು ಹಿಂದಿರುಗಿ ಹೋಗಿ ಈ ಮೊದಲು ತಾನು ಸಮಾಧಿನಿಷ್ಠೆಯಲ್ಲಿದ್ದ ಸ್ಥಳದಲ್ಲಿ ಮಂತ್ರ ಜಪಿಸುತ್ತ ಕುಳಿತನು.

ಪಿಂಗಳನು ನಿರ್ಭೀತಿಯಿಂದ ದ್ವಾರವನ್ನು ಸಮೀಪಿಸಿ, ಹೆಡೆಯೆತ್ತಿ ಭುಸುಗುಡುತ್ತಿರುವ ಸರ್ಪ ವನ್ನು ಬಲಗೈಯಿಂದ ಎರಡು ಸಾರಿ ಮುಟ್ಟಿದನು.




ಅಷ್ಟೊಂದು ಭಯಂಕರವಾಗಿದ್ದ ಸರ್ಪ ಏನೂ ಮಾಡದೆ ತಲೆ ತಗ್ಗಿಸಿ ಸುರುಳಿಗಳನ್ನು ಅಗಳಿಯಿಂದ ಸಡಿಲಿಸಿ ಸುಮ್ಮನಾಯಿತು. ಆದರೆ ಅದೇ ಕ್ಷಣದಲ್ಲಿ ಬಾಗಿಲ ಹಿಂದೆ ಭೂಮಿ ನಡುಗುವಂತೆ ಒಂದು ಹೂಂಕಾರವು ಹೊರಟು, ಕರ್ಣಕಠೋರವಾದ ಧ್ವನಿಯಿಂದ, ಕರ್ಕಶ ಕಂಠವು ಹೀಗೆ ಪ್ರಶ್ನಿಸಿತು :

"ಒಳಗೆ ಹೇಗೆ ಬರಬೇಕೆಂದು ತಿಳಿಯದೆ ಮಹಾಮಾಯನ ಸಮಾಧಿಯ ಪ್ರಥಮ ದ್ವಾರವನ್ನು ಸಮೀಪಿಸಿದ ಅಂಜುಕುಳಿ ಭಂಡ ಯಾರವನು ? ಉತ್ತರ ಕೊಡು."

"ನನ್ನ ಹೆಸರು ಪಿಂಗಳ. ಈ ಆಲಯದೊಳಗೆ ಪ್ರವೇಶಿಸುವ ಹಕ್ಕುದಾರನು ನಾನು. ಅವಂತೀ ನಗರದ ಜಾಲಗಾರ ! ನನ್ನ ಗುರು ಮಹಾ ಮಾಂತ್ರಿಕ ಪದ್ಮಪಾದರು !" ಎಂದನು ಪಿಂಗಳ.

"ಸಾಕು ಸಾಕು ! ನಿನ್ನ ಗುರು ಯಾರೆಂಬುದು ನನಗೆ ಬೇಕಾಗಿಲ್ಲ. ನೀನು ಜಾಲರಿ ಪಿಂಗಳನೆಂದು ತಿಳಿದರೆ ಸರಿ. ಇಗೋ ಬಾಗಿಲು ತೆರೆಯುತ್ತೇನೆ". ಎಂಬ ಶಬ್ದವು ಕೇಳಿಸಿತು. ಮರುಕ್ಷಣದಲ್ಲಿ ಬಾಗಿಲುಗಳೆರಡೂ ಧಾಳಾಗಿ ತೆರೆದುವು.

ಪರ್ವತಾಕಾರನಾಗಿದ್ದ ಕರ್ರಗಿನವನೊಬ್ಬನು, ತಳತಳ ಹೊಳೆಯುವ ಕತ್ತಿಯನ್ನು ಕೈಯಲ್ಲಿಟ್ಟುಕೊಂಡು ದ್ವಾರಕ್ಕೆ ಅಡ್ಡವಾಗಿ ನಿಂತುಕೊಂಡನು. ಅವನನ್ನು ಲಕ್ಷಿಸದೆ ಪಿಂಗಳನು ಮುಂದಕ್ಕೆ ನಡೆದನು, ತಡೆ ಏನೂ ಇಲ್ಲವೆಂಬ ಹಾಗೆ !

ಪರ್ವತಾಕಾರನು ಕತ್ತಿಯ ಪೆಟ್ಟಿನ ಅಳವಿಗೆ ಪಿಂಗಳನು ಬರುತ್ತಲೇ "ಹುಂ" ಎಂದು ಹುಂಕರಿಸಿ, "ನೀನು ಜಾಲಗಾರ ಪಿಂಗಳನಾದರೆ, ನಿಜಕ್ಕೂ ಈ ದೇವಾಲಯದ ಸೊತ್ತಿನ ಹಕ್ಕುದಾರನಾದರೆ ಕುತ್ತಿಗೆ ಚಾಚು. ಒಂದೇಏಟಿಗೆ ತುಂಡಾಗುವ ಹಾಗೆ ನಿನ್ನ ಕುತ್ತಿಗೆ ಕಡಿಯುತ್ತೇನೆ" ಎಂದನು.

ರೆಪ್ಪೆ ಮುಚ್ಚುವುದರೊಳಗೆ ಪಿಂಗಳನು ಒಂದು ನಿರ್ಣಯಕ್ಕೆ ಬಂದನು. ಇಷ್ಟು ದೂರ ಬಂದು ಹಿಂದಿರುಗುವುದೆಂದರೆ ಪ್ರಾಣಾಪಾಯವೇ. ಮುಂದಡಿ ಇಟ್ಟರೂ ಪ್ರಾಣಾಪಾಯವೇ ! ಎಲ್ಲಾ ಒಂದೇ ! ಎಂದುಕೊಂಡು ಕುತ್ತಿಗೆ ಬಗ್ಗಿಸಿ ಅಡಿ ಮುಂದಿಟ್ಟನು. ಅದೇ ಕ್ಷಣದಲ್ಲಿ ಪರ್ವತಾಕಾರನ ಕೈಯಲ್ಲಿದ್ದ ಕತ್ತಿ ಝಣಂಕೆಂದು ಕೆಳಗೆ ಬಿತ್ತು. ಅದರೊಂದಿಗೆ ಪರ್ವತಾಕಾರನೂ ದಭಾಲ್ಲನೆ ಪಿಂಗಳನ ಮುಂದೆ ಬಿದ್ದು ಶವದ ಹಾಗಾದನು. ಪದ್ಮಪಾದನು ಹೇಳಿದ ಎಚ್ಚರಿಕೆಯನ್ನು ಪಿಂಗಳನು ನೆನಪಿಗೆ ತಂದುಕೊಂಡನು.

ಹೀಗಾದುದನ್ನು ನೋಡಿದ ಕೂಡಲೇ ತನ್ನ ಜಾಲಗಾರ ನಾಮದಲ್ಲಿ ಏನೋ ಮಹತ್ವವಿದೆ ಎಂದುಕೊಂಡು ಪಿಂಗಳನಿಗೆ ಎಲ್ಲಿಲ್ಲದಷ್ಟು ಬಲ ಸತ್ವವೂ ಧೈರ್ಯವೂ ಜತೆಗೂಡಿದುವು. ಅವನು ನೇರಾಗಿ ಎದೆಚಾಚಿಕೊಂಡು ಎರಡನೇ ದ್ವಾರದ ಒಳಗೆ ಹೋದನು. ಆ ದ್ವಾರದ ಬಾಗಿಲುಗಳು ಕೂಡಾ



ಬಂಧಿಸಲ್ಪಟ್ಟಿದ್ದುವು. ಕೈಯಲ್ಲಿ ದೊಡ್ಡ ಶೂಲವನ್ನು ಹಿಡಿದ ಕುದುರೇ ಸವಾರನೊಬ್ಬನು ಪಿಂಗಳನನ್ನು ನೋಡಿದ ಕೂಡಲೇ ಯಾವ ಮಾತೂ ಇಲ್ಲದೆ ಶೂಲವನ್ನು ಪಿಂಗಳನ ಗುಂಡಿಗೆಗೆ ಗುರಿ ಹಿಡಿದು ಎತ್ತಿದನು.

ಪಿಂಗಳನು ನಿರ್ಭಯದಿಂದ ಗುಂಡಿಗೆಯ ಮೇಲಿದ್ದ ಅಂಗಿಯನ್ನು ತೆರೆದು ತೋರಿಸುತ್ತ, "ನಾನು ಯಾರೆಂದು ಗೊತ್ತಿದೆಯೇ ? ಜಾಲಗಾರ ಪಿಂಗಳ !" ಎನ್ನುತ್ತ ಮುಂದೆ ನಡೆದನು. ಮರು ಕ್ಷಣದಲ್ಲಿ ಕುದುರೆಯೊಂದಿಗೆ ಸವಾರನೂ ಸಹ ಕುಪ್ಪೆ ಜಾರಿ ಬಿದ್ದ ಹಾಗೆ ನೆಲದಲ್ಲಿ ಬಿದ್ದನು, ಪಿಂಗಳನು ಇಮ್ಮಡಿ ಉತ್ಸಾಹದಿಂದ ಎರಡನೇ ದ್ವಾರವನ್ನು ತೆರೆದು ದಾಟಿ ಮೂರನೇ ದ್ವಾರವನ್ನು ಸಮೀಪಿಸಿದನು.

ಈ ಮೂರನೇ ದ್ವಾರದ ಮುಂದೆ ಕಟ್ಟಾಳುವಾದ ಬಿಲ್ಲುಗಾರನೊಬ್ಬನು ಬಿಲ್ಲಿಗೆ ಬಾಣ ಹೂಡಿ ಸಿದ್ಧನಾಗಿ ಪಿಂಗಳನನ್ನೇ ನೋಡಿಕೊಂಡಿದ್ದನು. ಪಿಂಗಳನು ರವಷ್ಟೂ ಶಂಕಿಸದೆ ಮುಂದೆ ನಡೆಯುತ್ತ, ಬಿಲ್ಲು ಗಾರನಿಗೆ ತನ್ನ ಹಣೆಯ ನಡುಭಾಗವನ್ನು ಬೆರಳಿನಿಂದ ಮುಟ್ಟಿ ತೋರಿಸಿದನು. ಉತ್ತರ ಕ್ಷಣದಲ್ಲಿ ಆ ಬಿಲ್ಲುಗಾರನು ಕೆಟ್ಟದನಿಯಿಂದ ಅರಚುತ್ತಾ ಮಾಲಿ ಕೊಂಡು ಬಿದ್ದನು. ಪಿಂಗಳನು ಮುಗುಳು ನಗುತ್ತ, ಮೂರನೆಯ ದ್ವಾರವನ್ನು ದಾಟಿದನು.

ನಾಲ್ಕನೇ ದ್ವಾರವನ್ನು ಪಿಂಗಳನು ಸಮೀಪಿಸು ವಷ್ಟರಲ್ಲಿ ಭೀಕರವಾದ ರಂಕೆಯ ಶಬ್ದ ಕೇಳತೊಡಗಿತು. ದ್ವಾರದ ಎರಡು ಬದಿಗಳಲ್ಲಿ ಎರಡು ಖಡ್ಗಮೃಗಗಳು ತಲೆ ತಗ್ಗಿಸಿ ಪಿಂಗಳನ ಮೇಲೆ ಹಾರಲು ರಂಕೆ ಮೊಳಗಿಸಿ ಭುಸುಗುಡುತ್ತಿದ್ದುವು. ಅದಕ್ಕೂ ಚಲಿಸದೆ ಪಿಂಗಳನು ಮುಂದುವರಿದು ಆ ಖಡ್ಗಮೃಗಗಳನ್ನು ತನ್ನ ಎರಡು ಕೈಗಳಿಂದಲೂ ಮುಟ್ಟಿದನು. ಕೂಡಲೇ ಅವೆರಡೂ ಭಗಭಗನೆ ಉರಿಯುತ್ತ ಬೂದಿಯ ರಾಶಿಯಾಗಿ ಬಿದ್ದುವು. ಪಿಂಗಳನು ಹಿಂದೆ ಹಾರಿ ಆ ಬೆಂಕಿಯ ಜ್ವಾಲೆಯಿಂದ ತಪ್ಪಿಸಿ ಕೊಂಡನು. ಪಿಂಗಳನು ಐದನೆಯ ದ್ವಾರವನ್ನು ಸಮೀಪಿಸುವಷ್ಟರಲ್ಲಿ, ಅವನ ಮುಂದೆ ಕಾಣಿಸಿದ ವಿಚಿತ್ರ ಮೃಗವು ಭಯಕ್ಕಿಂತ ಹೆಚ್ಚು ಆಶ್ಚರ್ಯವನ್ನೇ ಉಂಟುಮಾಡಿತು. ಅದರ ಶರೀರವೂ ಹಿಂದಿನ ಕಾಲುಗಳೂ ಸಿಂಹದ ಆಕೃತಿಯಲ್ಲಿದ್ದುವು. ತಲೆಯೂ ಮುಂದಿನ ಕಾಲುಗಳೂ ಹದ್ದಿನ ಹಾಗಿದ್ದುವು. "ಇದೆಂತಹ ಮೃಗವಪ್ಪ ! ಅಥವಾ ಪಕ್ಷಿ ಜಾತಿಯೋ ಏನೋ ?" ಎಂದು ಪಿಂಗಳನು ಅಂದುಕೊಳ್ಳು ತ್ತಿರಲು, ಆ ಗರುಡ ಸಿಂಹವು ಹಿಂಗಾಲುಗಳ ಮೇಲೆ ಎದ್ದು ರೆಕ್ಕೆಗಳನ್ನು ಗಲಗಲನೆ ಆಡಿಸುತ್ತ ಪಿಂಗಳನ ಮೇಲೆ ಧುಮುಕಿತು.

ಪಿಂಗಳನು ಕಣ್ಣು ಮುಚ್ಚಿ ಮೊಂಡುಹಟದಿಂದ "ದಾರಿ ಬಿಡು ! ನಾನು ಈ ದೇವಾಲಯದ ಹಕ್ಕು ದಾರನಾದ ಜಾಲರಿ ಪಿಂಗಳ !" ಎಂದು ಹೇಳುತ್ತ ಮುಂದಕ್ಕೆ ನಡೆದನು.





ಆಗ ಗರುಡಸಿಂಹವು ಸಿಡಿಮದ್ದು ಸಿಡಿದಂತೆ ಶಬ್ದವೆಬ್ಬಿಸಿ, ಸಿಡಿದು ಹಾರಿ ಚೂರುಚೂರಾಗಿ ಹೋಯಿತು. ಪಿಂಗಳನು ಒಂದು ಸಾರಿ ಅದರ ಕಡೆಗೆ ಕನಿಕರದಿಂದ ನೋಡಿ, ಐದನೆಯ ದ್ವಾರವನ್ನು ದಾಟಿ ಆರನೆಯ ದ್ವಾರದ ಬಳಿಗೆ ಹೋದನು.

ಈ ಆರನೆಯ ದ್ವಾರವನ್ನು ದಾಟಿಬಿಟ್ಟರೆ ತಾನು ಮಹಾಮಾಯನ ಸಮಾಧಿಯೊಳಗೆ ಪ್ರವೇಶಿಸಿ ಬಿಡುವೆನೆಂಬ ಸಂಗತಿ ಅವನ ನೆನಪಿಗೆ ಬಂತು. ಪಿಂಗಳನಿಗಾದ ಆನಂದವನ್ನು ಹೇಳತೀರದು.

ಇದುವೇ ಕೊನೆಯ ದ್ವಾರ. ಇಲ್ಲಿಯ ಭಯಂಕರಗಳನ್ನು ಮುಗಿಸಿದರೆ ತೀರಿತು. ಕೆಲಸ ಮುಗಿಯುತ್ತದೆ. ಇನ್ನು ಒಳಭಾಗದಲ್ಲಿರುವ ಉಂಗುರ, ವಜ್ರದ ಹಿಡಿಯ ಕತ್ತಿ, ಭೂಗೋಳ, ಈ ಮೂರು ಅಮೂಲ್ಯ ವಸ್ತುಗಳೂ ತನ್ನ ಕೈಗೆ ಸಿಗುತ್ತವೆ. ಸಿಗಲೇಬೇಕು.

ಪಿಂಗಳನು ಅಪರಿಮಿತ ಉತ್ಸಾಹದಿಂದ ಆರನೇ ದ್ವಾರವನ್ನು ಮುಟ್ಟಿದನು, ಅಕಸ್ಮಾತ್ತಾಗಿ ಅವನ ಕಣ್ಣುಗಳು ಭ್ರಮಿಸಿದುವು. ಆ ದ್ವಾರದ ಬದಿಯಲ್ಲಿ ಅವನ ಗುರು ಪದ್ಮಪಾದನು ಗದೆಯನ್ನು ಹಿಡಿದುಕೊಂಡು ನಿಂತಿದ್ದಾನೆ! ಪಿಂಗಳನು ಅರೆ ಮೂರ್ಛೆ ಕವಿದವನಂತೆ ಅಡಿಗಳನ್ನು ಮುಂದಿಡುವಾಗ, "ನಿಲ್ಲು! ನಿಲ್ಲು! ಯಾರು ನೀನು?" ಎಂದು ಭೀಕರಸ್ವರದಿಂದ ಪ್ರಶ್ನೆ ಹೊರಟಿತು.

"ಇವನು ಪದ್ಮಪಾದನಲ್ಲ. ನನ್ನನ್ನು ಮೋಸಪಡಿಸಲು ಯಾವುದೋ ಪಿಶಾಚಿ ಪದ್ಮಪಾದನ ಆಕೃತಿ ತಾಳಿದೆ! ಇವನು ಕಳ್ಳ! ನಿಜವಾದ ಪದ್ಮಪಾದನು ಅಲ್ಲವೇ ಅಲ್ಲ!" ಎಂದುಕೊಂಡು ಪಿಂಗಳನು ಅಂದುಕೊಳ್ಳುತ್ತಿರಲು, ಧಗಧಗನೆ ಹೊಳೆಯುವ ಗದೆ ಅವನ ಕಣ್ಣುಗಳ ಮುಂದೆ ತಿರುಗಿತು. ಪಿಂಗಳನು ಭಯಕಂಪಿತನಾಗಿ ಹಿಂದಡಿ ತೆಗೆದಿಟ್ಟನು.

"ಕಳ್ಳನಿವನು! ಸುಳ್ಳನಿವನು! ಜಾಲಗಾರ ಪಿಂಗಳ ಇವನಲ್ಲ! ದೂಡಿರಿ ಹೊರಗೆ! ದೂರ ಬಿಸುಟುಬಿಡಿ!" ಎಂಬ ಕೂಗುಗಳು ಪಿಂಗಳನ ಕಿವಿಗೆ ಬಿದ್ದುವು.

ಮರುಕ್ಷಣದಲ್ಲೇ ಅವನ ಬೆನ್ನು ತಲೆಗಳ ಮೇಲೆ ಕೋಲಿನಿಂದ ಯಾರೋ ಹೊಡೆಯ ತೊಡಗಿದರು. ಅವನ ಕಾಲಿಗೆ ನೆಲ ತಪ್ಪಿತು. ಒಂದೊಂದೇ ದ್ವಾರವು ಫಡಫಡನೆ ಮುಚ್ಚುತ್ತಾ ಬಂದಿತು. ಏನಿದು? ಯಾಕೆ ಹೀಗೆ? ಯಾವ ಶಕ್ತಿಯೋ ತನ್ನನ್ನು ಮೇಲೆ ಹಾರಿಸಿ ಬಿಟ್ಟಿದೆ ಎಂದು ಅವನಿಗೆ ತಿಳಿಯಿತು.

ಪಿಂಗಳನು ಭೀತಿಯಿಂದ ನಡುಗುತ್ತ ಆಕಾಶದಲ್ಲಿ ಹಾರಿ ಹೋಗುತ್ತಿದ್ದನು. ಅವನ ದೃಷ್ಟಿ ಕೆಳಕ್ಕಿಳಿಯಿತು. ಅಲ್ಲಿ ಪದ್ಮಪಾದನು ಕೈಗಳನ್ನು ಚಾಚಿ, ಅವನು ಕೆಳಕ್ಕೆ ಬೀಳದಂತೆ ಹಿಡಿಯಲು ಸಿದ್ಧನಾಗಿ ನಿಂತಿದ್ದನು.

—(ಇನ್ನೂ ಇದೆ)






## ೭

[ಪಿಂಗಳನು ನದೀ ಗರ್ಭದ ಪಾಳು ದೇವಾಲಯದ ಮೊದಲನೇ ದ್ವಾರವನ್ನು ಗೆದ್ದು ದಾಟಿ, ಎರಡನೇ ದ್ವಾರದಲ್ಲಿ ಇದಿರಾದ ಅಪಾಯವನ್ನೂ ಹತಮಾಡಿದನು. ಹಾಗೆಯೇ ಐದು ದ್ವಾರಗಳನ್ನೂ ಅಲ್ಲಲ್ಲಿಯ ಅಪಾಯಗಳನ್ನು ಗೆದ್ದು ಪಾರಾಗಿ ಆರನೇ ದ್ವಾರಕ್ಕೆ ಹೋದನು. ಅಲ್ಲಿ ಪದ್ಮಪಾದನ ರೂಪದಲ್ಲಿದ್ದ ಮಾಯಾ ರಾಕ್ಷಸಿಯಿಂದ ಪೆಟ್ಟು ತಿಂದು ಆಕಾಶಕ್ಕೆ ಬೀಸಿ ಒಗೆಯಲ್ಪಟ್ಟನು.]

**ದೂ**ರ ಆಕಾಶಕ್ಕೆ ಬಿಸುಡಲ್ಪಟ್ಟು ನೆಲಕ್ಕೆ ಬೀಳುವ ಪಿಂಗಳನಿಗೆ, ಕೈಚಾಚಿ ನಿಂತಿರುವ ಪದ್ಮಪಾದನನ್ನು ನೋಡಿ ಸಾಯುವೆನೆಂಬ ಭೀತಿ ಹಾರಿಹೋಯಿತು. ಮರುಕ್ಷಣದಲ್ಲಿ ಅವನು ಪದ್ಮಪಾದನ ಕೈಗಳ ಮೇಲೆ ಬಿದ್ದೂ ಆಯಿತು. ಆಹಾ! ಪದ್ಮಪಾದನು ಎಷ್ಟು ಗಟ್ಟಿಗನೋ! ನೆಲಕ್ಕೆ ಬಿದ್ದು ತಲೆಯೊಡೆಯದಂತೆ ಸಮಯಕ್ಕೆ ಎದ್ದು ತನ್ನನ್ನು ಹಿಡಿದು ಕಾಪಾಡಿದನೆಂದು ಪಿಂಗಳನು ಸಂತಸಪಡುತ್ತಿರಲು, ಪದ್ಮಪಾದನು ಅವನನ್ನು ಹಗುರಾಗಿ ಇಳಿಸಿ ನೆಲದಲ್ಲಿ ನಿಲ್ಲಿಸಿದನು.

"ಪಿಂಗಳಾ! ಏನಾಯಿತು? ಅಪಾಯಕಾರಿಯಾದ ಪೆಟ್ಟು ಬಿದ್ದಿಲ್ಲವಷ್ಟೇ? ಚೆನ್ನಾಗಿರುವೆಯಾ ಅಪ್ಪಾ?" ಎಂದು ವಾತ್ಸಲ್ಯದಿಂದ ಕೇಳಿದನು ಪದ್ಮಪಾದ. "ಹಾಗೇನಾಗಿಲ್ಲ. ನಿಮ್ಮ ಬಲ ನನ್ನಲ್ಲಿ ಸೇರಿಸಿರುವಾಗ ಪೆಟ್ಟು ಗಿಟ್ಟು ಹೇಗೆ ಬಿದ್ದೀತು? ಕಡೆಗೆ ಭೂತದ ಮಾಯೆಯಿಂದ ಸ್ವಲ್ಪ ಮೋಸ ಹೋಗಿಬಿಟ್ಟೆ. ನೀವು ನನ್ನನ್ನು ಸಾಯದಂತೆ ಬದುಕಿಸಿಬಿಟ್ಟಿರಿ. ನಿಮ್ಮ ಬೆಂಬಲ ಗಟ್ಟಿಯಾಗಿ ಇರುವಾಗ ಯಾವ ಭಯವೂ ಇನ್ನಿಲ್ಲ" ಎಂದು ಪಿಂಗಳನು ಹಿಂದಿರುಗಿ ನೋಡಿದನು.




ಅವನು ನೋಡುತ್ತಿರುವಾಗಲೇ, ಅದುವರೆಗೂ ಒಂದು ಬೊಟ್ಟೂ ನೀರಿಲ್ಲದೆ ಬತ್ತಿಹೋದ ನದಿ ಭುಸ್ಸೆಂದು ಒಮ್ಮೆಗೇ ನೀರಿನಿಂದ ಉಕ್ಕಲು ತೊಡಗಿತ್ತು ! ಅದನ್ನು ನೋಡಿ ಪಿಂಗಳನು ಅದುರಿ ಬಿದ್ದು "ಹೋ !" ಎಂದು ಕೂಗಿದನು.

ಪದ್ಮಪಾದನು ಪಿಂಗಳನ ಭುಜದ ಮೇಲೆ ತಟ್ಟುತ್ತ, "ಹೋಗಲಿಬಿಡೂ ಪಿಂಗಳಾ, ಈಸಾರಿ ನಾವು ಸೋತೆವು. ಮಹಾಮಾಯನ ಶಿಷ್ಯರು ನದಿಯನ್ನು ಮತ್ತೆ ನೀರಿನಿಂದ ತುಂಬಿಸುತ್ತಿದ್ದಾರೆ. ದೇವಾಲಯ ಕೂಡಾ ಮುಳುಗಿ ಕಾಣದೆ ಹೋಗುತ್ತದೆ. ಇಂತಹ ಕಾರ್ಯದಲ್ಲಿ ಒಂದೆರಡು ಸೋಲುಗಳನ್ನು ನೋಡಿ ಹಿಂಜರಿಯಬಾರದು. ನಮಗೆ ಬೇಕೆಂದಾಗ ನದಿಯ ಜಲವನ್ನು ಇಂಗಿಸಿ ಹಾಕಲು ನನಗೆ ಸಾಧ್ಯವಿದೆ. ಅದಿರಲಿ, ಮೊದಲು ದೇವಾಲಯದೊಳಗೆ ಪ್ರವೇಶಿಸುವಾಗ ನಿನಗಾದ ಅನುಭವಗಳನ್ನು ಹೇಳು." ಎಂದನು.

ಪಿಂಗಳನು ತಾನು ಮೊದಲನೇ ದ್ವಾರವನ್ನು ದಾಟಿ ಆರನೇ ದ್ವಾರವನ್ನು ಸೇರುವವರೆಗೂ ನಡೆದ ಘಟನೆಗಳೆಲ್ಲವನ್ನೂ ಹೇಳಿದನು.

"ಪದ್ಮಪಾದರೇ, ಅಲ್ಲಿಯೇ ನಾನು ಮೋಸ ಹೋದುದು. ಆರನೇ ದ್ವಾರದ ಹತ್ತಿರ ಅಷ್ಟೊಂದು ಬುದ್ಧಿವಂತಿಕೆಯ ಭೂತವಿರುವುದೆಂದು ನಾನು ಊಹಿಸಿರಲಿಲ್ಲ. ನಿಮ್ಮ ಹಾಗೆಯೇ ಇತ್ತು ಆ ಭೂತ ! ನಿಲ್ಲು ನಿಲ್ಲು, ನೀನು ಯಾರೆಂದು ಪ್ರಶ್ನಿಸಿದ ಅದರ ಕಂಠಸ್ವರವೂ ಸಹಾ ನಿಮ್ಮದೇ. ನಾನು ಒಂದು ಕ್ಷಣಕಾಲ ಸಂಶಯ ತಾಳಿಬಿಟ್ಟೆನು, ಅದೇ ಕ್ಷಣದಲ್ಲಿ ನನ್ನ ಬೆನ್ನಿಗೂ ತಲೆಗೂ ದಬದಬನೆ. ಪೆಟ್ಟುಗಳು ಬಿದ್ದುವು. ಯಾವುದೋ ಬಲವಾದ ಕೈಗಳು ನನ್ನನ್ನೆತ್ತಿ ಬಿಸುಟದ್ದೂ ಆಯಿತು. ಇನ್ನು ಸತ್ತೆನೆಂದುಕೊಳ್ಳುವಾಗ ನೀವು ನನ್ನನ್ನು ಹೂವಿನ ಹಾಗೆ ಹಿಡಿದು ಕಾಪಾಡಿದಿರಿ" ಎಂದನು ಪಿಂಗಳ.

"ಹಾಗೇನು ?" ಎಂದು ಪದ್ಮಪಾದನು ಕಣ್ಣು ಕೆಕ್ಕರಿಸಿ, ನದೀ ಜಲದಲ್ಲಿ ಮುಳುಗಿ ಹೋಗುತ್ತಿರುವ ದೇವಾಲಯದ ಕಡೆಗೆ ಒಂದುಸಾರಿ ನೋಡಿದನು.

"ಪಿಂಗಳಾ ! ಮಹಾಮಾಯನ ಶಿಷ್ಯರು ಇಷ್ಟೊಂದು ನೀಚಕಾರ್ಯಕ್ಕೆ ಇಳಿಯುವರೆಂದು ನಾನು ಅಂದುಕೊಂಡಿಲ್ಲ. ನಿನ್ನ ಗುರುವಾದ ನನ್ನ ಆಕೃತಿಯಲ್ಲಿ ಮಾತ್ರವೇ ಅವರು ನಿನ್ನನ್ನು ಮೋಸಪಡಿಸಿದರು. ಅದಕ್ಕೆ ಮೊದಲು ಅವರು ನಿನ್ನನ್ನು ಹೆದರಿಸಲು ನೋಡಿದ ಪ್ರತಿ ದುಷ್ಟಶಕ್ತಿಯನ್ನೂ ನೀನು ಜಯಿಸಿಬಿಟ್ಟಿರುವೆ. ಅದು ನನಗೆ ಬಹಳ ಸಂತೋಷವನ್ನುಂಟುಮಾಡಿದೆ. ಒಂದು ಸಾರಿ ಸೋತದ್ದು ಗಟ್ಟಿ ವಿಜಯಕ್ಕೆ ಬುನಾದಿಯಪ್ಪಾ" ಎಂದನು.

ಪದ್ಮಪಾದನ ಮಾತುಗಳಿಂದ ಪಿಂಗಳನಿಗೆ ಬಹಳ ಉತ್ಸಾಹವಾಯಿತು. "ಈಗ ನಾವು ಏನು ಮಾಡ

ಬೇಕೆನ್ನುವಿರಿ ? ದೇವಾಲಯವು ಮತ್ತೆ ನದೀ ಗರ್ಭದಲ್ಲಿ ಮುಳುಗಿ ಹೋಗುತ್ತಾ ಇದೆ !" ಎಂದನು.

"ಹೋಗಲಿ, ಹೋಗಲಿ. ಈ ದಿನ ಅದನ್ನು ಕುರಿತು ಇನ್ನೇನೂ ಮಾಡುವಂತಹುದಿಲ್ಲ. ಇವತ್ತಿನಿಂದ ಮೂರು ದಿನಗಳ ಮೇಲೆ ಮತ್ತೆ ಪರ್ವದಿನವೊಂದು ಒರುತ್ತದೆ. ಆದಿನ ನೀನು ಮತ್ತೊಮ್ಮೆ ಮಹಾಮಾಯಿನ ಸಮಾಧಿಯ ದೇವಾಲಯಕ್ಕೆ ಹೋಗಬೇಕಾಗುತ್ತದೆ. ಅದುವರೆಗೂ ನಾವು ಇಲ್ಲಿಯೇ ಇದ್ದುಬಿಡೋಣ. ಅಷ್ಟರವರೆಗೆ ಕಾಲಕ್ಷೇಪವಾಗಬೇಕಷ್ಟೆ ?..." ಎಂದು ಪದ್ಮಪಾದನು ಕೈಯಲ್ಲಿದ್ದ ಗದೆಯನ್ನು ಆಕಾಶಕ್ಕೆತ್ತಿ ತಿರುಗಿಸುತ್ತ, ಯಾವುದೋ ಮಂತ್ರವನ್ನು ಪಠಿಸಿದನು. ಮರುಕ್ಷಣದಲ್ಲಿ ಆ ನಿರ್ಜನ ಪ್ರದೇಶದಲ್ಲಿ ಎತ್ತರವೂ ಸುಂದರವೂ ಆದ ಭವನವೊಂದು ಎದ್ದು ನಿಂತಿತು.




ಆಶ್ಚರ್ಯದಿಂದ ಆ ಮಾಯಾಭವನವನ್ನೇ ನೋಡುತ್ತಿರುವ ಪಿಂಗಳನ ಕೈ ಹಿಡಿದುಕೊಂಡು ಪದ್ಮಪಾದನು ಅವನನ್ನು ಭವನದ ಕಡೆಗೆ ನಡೆಯಿಸಿಕೊಂಡು ಹೋದನು. ಅವರಿಬ್ಬರೂ ಭವನದೊಳಗಿನ ವಿಸ್ತಾರವಾದ ಪ್ರಾಂಗಣಕ್ಕೆ ಪ್ರವೇಶಿಸಲು ನೋಡುವಾಗ, ಮುಚ್ಚಿದ್ದ ಬಾಗಿಲುಗಳು ತಟಕ್ಕನೆ ತೆರೆದುಕೊಂಡುವು. ಆಜಾನುಬಾಹುಗಳಾದ ಕಪ್ಪಗಿನ ಲಟ್ಟಗಟ್ಟ ಶರೀರದ ಇಬ್ಬರು, ಥಾಂಡಿಗರು ಹೊರಗೆ ಬಂದು ಪದ್ಮಪಾದನಿಗೂ ಪಿಂಗಳನಿಗೂ ಬಾಗಿ ನಮಸ್ಕಾರ ಮಾಡಿ ಕೈಕಟ್ಟಿ ಎರಡು ಬದಿಗಳಲ್ಲಿ ನಿಂತು ದಾರಿ ಬಿಟ್ಟರು.

"ಯಾರಿವರು ಪದ್ಮಪಾದರೇ ?" ಎಂದು ಪಿಂಗಳನು ಅನುಮಾನದಿಂದ ಮೆಲ್ಲನೆ ಕೇಳಿದನು.

"ಇವರು ಮೂರು ದಿನಗಳವರೆಗೆ ನಮಗೆ ವಿನೋದ ಕಾಲಕ್ಷೇಪ ಮಾಡಿಸಲು ಬಂದಿರುವ ಮಾಯಾರಕ್ಕಸರು. ನಾವು ಇಲ್ಲಿ ಮೂರುದಿನ ಸುಮ್ಮನೆ ಉಗುರುಕಚ್ಚಿಕೊಂಡು ಕುಳಿತಿರಲು ಸಾಧ್ಯವೆ ? ಈ ಪಿಶಾಚಮಲ್ಲರಿಗೆ ಬಗೆಬಗೆಯ ಕುಸ್ತಿಗಳು ಗೊತ್ತಿವೆ. ಕತ್ತಿಯುದ್ಧ ಮಾಡುತ್ತಾರೆ. ಕೋಲುಗಳಿಂದ ತಾಲೀಮು ತೋರಿಸುತ್ತಾರೆ. ಹಾಡುತ್ತಾರೆ, ಕುಣಿಯುತ್ತಾರೆ. ಎಲ್ಲಾ ನೋಡುತ್ತ ನಾವು ವಿನೋದವಾಗಿ ಕಾಲ ಕಳೆಯಬಹುದು" ಎಂದನು ಪದ್ಮಪಾದ.

ಪದ್ಮಪಾದನೂ ಪಿಂಗಳನೂ ಆ ಭವನದೊಳಗೆ ಪ್ರವೇಶಮಾಡಿದರು. ಅವರಿಬ್ಬರೂ ದೊಡ್ಡದಾದೊಂದು ದ್ವಾರದ ಮೂಲಕ ವಿಸ್ತಾರವಾದ ಕೋಣೆಯನ್ನು ಪ್ರವೇಶಿಸುವಾಗ, ಅಲ್ಲಿ ಅನೇಕ ಮಂದಿ ಮಲ್ಲರೂ, ಯೋಧರೂ ಕಸರತ್ತು ಮಾಡುತ್ತಿರುವುದು ಕಂಡಿತು. ಪಿಂಗಳನು ಅವರನ್ನು ನೋಡಿ ಅನುಮಾನದಿಂದ "ಪದ್ಮಪಾದರೇ, ಇವರೆಲ್ಲಾ ಕೂಡಿ ನಮಗೇನಾದರೂ ಕೆಡುಕು ಮಾಡಲಾರರಷ್ಟೆ ?" ಎಂದನು.



"ಅಂತಹ ಭಯ ಕನಸಿನಲ್ಲಿಯೂ ಬಾರದು" ಎಂದು ಪದ್ಮಪಾದನು ಮುಂದಕ್ಕೆ ನಡೆದನು. ಅವನು ಕೈಸನ್ನೆ ಮಾಡಿ, ಮೊದಲು ನೋಡಿದ ಕಠ್ರಗಿನ ಲಟ್ಬರನ್ನು ಕರೆದು ಅವರ ಕಿವಿಯಲ್ಲಿ ಏನೋ ಹೇಳಿದನು.

ಪದ್ಮಪಾದನೂ ಪಿಂಗಳನೂ ಆ ಕೋಣೆಯಲ್ಲಿ ಅನಿಸಿಟ್ಟ ಪಟ್ಟೆಯ ಮೆತ್ತೆಗಳಿಗೆ ಒರಗಿ ಕುಳಿತರು. ಸ್ವಲ್ಪ ಹೊತ್ತಿಗೆ ಅವರ ಹತ್ತಿರ ಬಂಗಾರದ ಹರಿವಾಣ ಗಳಲ್ಲಿ ವಿಧವಿಧವಾದ ಭೋಜನ ಪದಾರ್ಥಗಳನ್ನು ತೆಗೆದುಕೊಂಡು ಅಪೂರ್ವ ಸುಂದರಿಯರಾದ ಕೆಲ ಮಂದಿ ಸ್ತ್ರೀಯರು ಬಂದರು. ಪಿಂಗಳನು ಅವರನ್ನು ನೋಡಿದ ಕೂಡಲೇ "ಪದ್ಮಪಾದರೇ, ಇವರು ಗಂಧರ್ವ ಕಾಂತೆಯರೋ ? ಅಲ್ಲ, ಆ ರೂಪ ಧರಿಸಿದ ಪಿಶಾಚಿಗಳೋ ?" ಎಂದು ಪ್ರಶ್ನೆ ಮಾಡಿದನು.

"ಉಷ್" ಎಂದು ಪದ್ಮಪಾದನು ಪಿಂಗಳನಿಗೆ ಸುಮ್ಮನಿರುವಂತೆ ಎಚ್ಚರಿಸಿ, "ಪಿಂಗಳಾ! ಇಷ್ಟು ಮೆಲ್ಲನೆ ಮಾತಾಡಿದರೂ ಅವುಗಳ ಕಿವಿಗೆ ಬೀಳ ಬಹುದು. ಇಂತಹ ಮಾತನ್ನು ಕೇಳಿದರೆ ಅವುಗಳಿಗೆ ಏನಾದರೂ ತೋರಬಹುದು. ನಮಗೆ ಸೇವೆ ಮಾಡಲು ಬಂದ ಪಿಶಾಚಿನಿಗಳಾದರೂ ಸರಿಯೆ, ನಾವು ಹೀನಗೊಳಿಸಿ ಮಾತಾಡುವುದು ಸರಿಯಲ್ಲ. ಅವರನ್ನು ಮೂರು ದಿನಗಳವರೆಗೆ ಗಂಧರ್ವ ಕಾಂತೆಯರೆಂತಲೇ ತಿಳಿದು ಸಂಭಾವಿಸೋಣ" ಎಂದು ತಿಳಿಹೇಳಿದನು.

ಪದ್ಮಪಾದನಿಗೂ ಪಿಂಗಳನಿಗೂ ಸುಖವಾಗಿ ಭೋಜನ ಮುಗಿಯಿತು. ಆಮೇಲೆ ಕರಿ ಶರೀರದ ಒಂಟರು ಕೆಲಮಂದಿ ಪಿಶಾಚಮಲ್ಲರನ್ನೂ, ಯೋಧ ರನ್ನೂ ಅಲ್ಲಿಗೆ ಕರೆದುಕೊಂಡು ಬಂದರು. ಅವರು ವಿಧವಿಧವಾದ ರೂಪಗಳನ್ನು ಧರಿಸಿ, ಕುಸ್ತೀ ಕಸರತ್ತು ಮಾಡಿದರು. ಕತ್ತಿ ತಿರುಗಿಸಿ ಖಣಾಲ್ ಖಣಾಲೆಂದು ಕಾಳಗವಾಡಿದರು. ಅದನ್ನೆಲ್ಲ ನೋಡುತ್ತಿದ್ದಂತೆ, ಪಿಂಗಳ ಪದ್ಮಪಾದರಿಗೆ ಸಮಯ ಹೋದುದೇ ಗೊತ್ತಾಗಲಿಲ್ಲ.

ಈ ವಿಧವಾಗಿ ಮೂರು ದಿನಗಳು ಕಳೆದು ಹೋದುವು. ನಾಲ್ಕನೆಯ ದಿನ ಪದ್ಮಪಾದನು ಆ ಮಾಯಾಭವನವನ್ನೂ, ಅದರೊಳಗಿದ್ದ ಮಾಯಾ ರೂಪಗಳನ್ನೂ ತನ್ನ ಮಂತ್ರಗಳಿಂದ ಮಾಯ ಮಾಡಿದನು. ಆ ಸ್ಥಳವು ಮೊದಲಿನಂತೆಯೇ ಖಾಲಿ ಯಾಯಿತು. ಪದ್ಮಪಾದನು ಈ ಮೊದಲು ಮಂತ್ರ ಪಠಿಸಿಕೊಂಡು ಕುಳಿತ ಅದೇ ಸ್ಥಳಕ್ಕೆ ಹೋಗಿ ನದಿಯ ಒದಿಯಲ್ಲಿ ಕುಳಿತನು.

ಅವನು ಪಿಂಗಳನನ್ನು ನೋಡಿ, ನದೀಗರ್ಭದಲ್ಲಿ ಮುಳುಗಿಹೋದ ಪಾಳುದೇಗುಲದ ಕಡೆಗೆ ಕೈ ತೋರಿಸಿ, "ಪಿಂಗಳಾ, ನಾನೀಗ ನದೀಜಲವನ್ನು ಇಂಗಿಸುವ ಕಾರ್ಯಕ್ಕೆ ತೊಡಗುತ್ತೇನೆ. ಈಸಾರಿ ನೀನು ಮಹಾಮಾಯನ ಸಮಾಧಿಯೊಳಗೆ ಪ್ರವೇಶಿಸುವಾಗ, ತೆಗೆದುಕೊಳ್ಳಬೇಕಾದ ಜಾಗ



ರೂಕತೆಗಳನ್ನು ಕುರಿತು ಮತ್ತೆ ಹೇಳಬೇಕಾದ ಅಗತ್ಯವಿಲ್ಲವಷ್ಟೆ ? ಎಲ್ಲಾ ನೆನಪಿದೆಯೇ ? " ಎಂದು ಕೇಳಿದನು.

"ಚೆನ್ನಾಗಿ ನೆನಪಿದೆ ಪದ್ಮಪಾದರೇ. ಈ ಮೊದಲು ತಿಂದ ಪೆಟ್ಟಿನ ಬಾಪುಗಳು ಅವುಗಳನ್ನು ಸ್ವಲ್ಪವೂ ಮರೆಯದ ಹಾಗೆ ಮಾಡಿವೆ. ನಾನು ಏನನ್ನು ಮರೆತರೂ ಆ ಪೆಟ್ಟಿನ ನೋವನ್ನೂ, ನಿಮ್ಮ ರೂಪದಲ್ಲಿ ನನ್ನನ್ನು ಮೋಸಪಡಿಸಿದ ಮಹಾಮಾಯನ ಆ ಶಿಷ್ಯನ ಮುಖಭಾವವನ್ನೂ ಎಂದಿಗೂ ಮರೆಯಲಾರೆ. ಈಸಾರಿ ಆರನೆಯ ದ್ವಾರದಲ್ಲಿರುವವನಿಗೆ ಸರಿಯಾದ ಗತಿಗಾಣಿಸಿ ಬಿಡುತ್ತೇನೆ" ಎಂದನು ಪಿಂಗಳ.

ಪದ್ಮಪಾದನು ಮಂತ್ರವನ್ನು ಜಪಿಸಿ, ಸ್ವಲ್ಪ ಹೊತ್ತಿನೊಳಗೆ ನದೀಜಲವನ್ನು ಪೂರ್ತಿ ಇಂಗಿಸಿ ಬಿಟ್ಟನು. ಪಿಂಗಳನು ನಿರ್ಭಯವಾಗಿ ಮುಂದೆ ಕಾಣುವ ಪಾಳು ದೇವಾಲಯದ ಕಡೆಗೆ ಹೋದನು. ಮೊದಲನೇ ದ್ವಾರದಲ್ಲಿ ಮೊದಲಿನ ಹಾಗೆಯೇ ಹಾವು ಭುಸುಗುಡುತ್ತಲಿತ್ತು. ಪಿಂಗಳನು ಅದರ ಹೆಡೆಯನ್ನು ಮುಟ್ಟಿದ ಕೂಡಲೇ ಅದು ಪ್ರಾಣ ಬಿಟ್ಟಿತು. ಆ ಕ್ಷಣದಲ್ಲಿ ಬಾಗಿಲಿನ ಹಿಂದಿನಿಂದ ಕರ್ಣಕಠೋರವಾದ ಪ್ರಶ್ನೆ ಕೇಳಿಸಿತು.

"ನನ್ನ ಹೆಸರು ಪಿಂಗಳ. ನಾನು ಅವಂತೀ ನಗರದ ಬಲೆಗಾರ!" ಎಂದು ಪಿಂಗಳನು ಉತ್ತರ ಕೊಟ್ಟು ಧೈರ್ಯದಿಂದ ಬಾಗಿಲನ್ನು ದೂಡಿದನು. ಬಾಗಿಲು ದಢಾಲ್ಲನೆ ತೆರೆದುಕೊಂಡಿತು. ಪರ್ವತಾಕಾರದ ಕಠ್ರಗಿನವನು ಕತ್ತಿ ಝುಳಿಪಿಸಿಕೊಂಡು ಮುಂದೆ ಬಂದನು.

ಅವನು ಪಿಂಗಳನನ್ನು ಕುತ್ತಿಗೆ ಬಾಗಿಸಲು ಹೇಳಿದುದೂ, ಪಿಂಗಳನು ಬಾಗುತ್ತಾ ಪರ್ವತಾಕಾರನನ್ನು ದೂಡಿ ಬೀಳಿಸಿದುದೂ ಎಲ್ಲಾ ಒಮ್ಮೆಗೇ ಹಿಂದಿನಂತೆಯೇ ನಡೆಯಿತು.

ಅದರಂತೆಯೇ ಪಿಂಗಳನು ಒಂದೊಂದೇ ದ್ವಾರವನ್ನು ದಾಟಿ, ಕಡೆಗೆ ಆರನೆಯ ದ್ವಾರವನ್ನು ಸಮಾಪಿಸುವಷ್ಟರಲ್ಲಿ ದ್ವಾರದ ಪಕ್ಕದಲ್ಲಿ ಪಿಂಗಳನ ತಾಯಿ ನಿಂತುಕೊಂಡು ಕಣ್ಣೀರು ಸುರಿಸುತ್ತ, "ಬೇಡಕಂದಾ ! ನಿನಗೇಕೋ ಈ ಬಗೆಯ ಶ್ರಮ ? ಯಾವನೋ ಲಾಭ ಪಡೆಯಲಿಕ್ಕಾಗಿ ನಿನ್ನನ್ನು ಹೀಗೆ ದುಡಿಸುತ್ತಾನಲ್ಲೋ ! ಬೇಡಪ್ಪಾ. ಹಿಂದಿರುಗಿ ಹೋಗಿಬಿಡು. ಆ ಪದ್ಮಪಾದನು ಕಡೆಗೆ ನಿನ್ನನ್ನೂ ಹತ ಮಾಡುತ್ತಾನೆ. ನನ್ನ ಮಾತು ನಂಬು ಮಗಾ ! ಸುಮ್ಮನೆ ನಿನ್ನ ಪಾಡಿಗೆ ಹಿಂದಿರುಗಿ ಹೋಗಿಬಿಡಪ್ಪಾ" ಎಂದು ದೀನಳಾಗಿ ಗೋಗರೆದಳು.

ಪಿಂಗಳನು ಅರೆಕ್ಷಣ ಬೆರಗಾದರೂ ಮರುಕ್ಷಣದಲ್ಲಿ ಹಿಂದಿನ ಅನುಭವ ಸ್ಮರಣೆಗೆ ಬಂತು. ಹಿಂದೆ ಪದ್ಮಪಾದನ ರೂಪದಲ್ಲಿ ತನ್ನನ್ನು ಮೋಸಪಡಿಸಿದ ಪಿಶಾಚಿಯೇ ಈಗಲೂ ತನ್ನ ತಾಯಿಯ ರೂಪ ಧರಿಸಿ ಮಾಯಾಮೋಡಿ ತೋರಿಸುತ್ತದೆ ಎಂದು



ಕೊಂಡನು. ಎಲ್ಲೋ ಮಾರುಮೂಲೆಯಲ್ಲಿರುವ ತನ್ನ ತಾಯಿ ಇಲ್ಲಿಗೆ ಬರುವುದೆಂದರೇನು ? ಇದೆಲ್ಲಾ ಪದ್ಮಪಾದರು ಹೇಳಿದಹಾಗೆ ಮಹಾ ಮಾಯನ ಶಿಷ್ಯರ ಮಾಯೆಯೇ ನಿಜ.

ಹೀಗೆಂದುಕೊಂಡು ಪಿಂಗಳನು ಹಲ್ಲು ಕಡಿಯುತ್ತ "ದಾರಿಯಿಂದ ಅಡ್ಡ ತೊಲಗು ! ನೀನು ಯಾರೆಂದು ನನಗೆ ಗೊತ್ತು ! ನನ್ನ ತಾಯಿಯ ರೂಪ ಧರಿಸಿದರೂ ಮತ್ತೇನು ಆಟ ತೋರಿಸಿದರೂ ಇನ್ನು ನನ್ನನ್ನು ಮೋಸಪಡಿಸಲು ಸಾಧ್ಯವೇ ಇಲ್ಲ. ನಾಶವಾಗಿ ಹೋಗು !" ಎಂದು ದ್ವಾರದ ಪಕ್ಕದಲ್ಲಿದ್ದ ಕತ್ತಿಯನ್ನೆತ್ತಿ ಮುಂದಕ್ಕೆ ಧುಮುಕಿದನು. ಅವನ ತಾಯಿಯ ರೂಪದ ಪಿಶಾಚಿ ಕಿರ್ರನೆ ಕಿರಿಚಿ ಮಾಯವಾಗಿ ಹೋಯಿತು.

ಪಿಂಗಳನು ಗಹಗಹಿಸಿ ನಗುತ್ತ ಆ ಕತ್ತಿಯನ್ನು ದೂರ ಬಿಸುಟು ದ್ವಾರವನ್ನು ದಾಟಿದನು. ಅವನ ಇದಿರಿನಲ್ಲಿ ಪಟ್ಟೆಯ ತೆರೆಗಳು ಗಾಳಿಗೆ ರಪರಪನೆ ಹಾರುತ್ತಿದ್ದುವು. ತೆಳ್ಳಗಿನ ಆ ತೆರೆಗಳ ಹಿಂದಿನಿಂದ ಕಣ್ಣು ಕೋರೈಸುವ ಕಾಂತಿಯನ್ನು ಹೊರಡಿಸುವ ಉನ್ನತಾಸನವು ಕಂಡುಬಂದಿತು.

ಪಿಂಗಳನು ಪಟ್ಟೆಯ ತೆರೆಯನ್ನು ತೊಲಗಿಸಿಕೊಂಡು ಒಳಗೆ ಹೋದನು. ರತ್ನ ಮಾಣಿಕ್ಯಗಳ ಕಾಂತಿಯಿಂದ ದೇದೀಪ್ಯಮಾನವಾಗಿ ಬೆಳಗುವ ಸಿಂಹಾಸನದ ಮೇಲೆ, ಮಹಾಮಾಯನು ಯೋಗನಿದ್ರೆಯಲ್ಲಿರುವ ಹಾಗೆ ಕಣ್ಣುಮುಚ್ಚಿ ಕುಳಿತಿದ್ದನು. ನೋಡಿದ ಕೂಡಲೇ ಪಿಂಗಳನಿಗೆ ಮಹಾಮಾಯನು ಸಜೀವನಾಗಿರುವಂತೆ ಅನುಮಾನವಾಯಿತು. ಅಂತಲೇ ಪಿಂಗಳನು ಉಸಿರಾಡುವುದಕ್ಕೂ ಅಂಜಿ, ಬೆಕ್ಕಿನಹಾಗೆ ಹೆಜ್ಜೆಯ ಮೇಲೆ ಹೆಜ್ಜೆ ಇಡುತ್ತ ಮಹಾಮಾಯನನ್ನು ಸಮೀಪಿಸಿದನು. ಅವನ ದೃಷ್ಟಿ ಮಹಾಮಾಯನ ಎಡಗೈಯ ಬೆರಳಿನ ಕಡೆಗೆ ಹೋಯಿತು. ಆ ಬೆರಳಲ್ಲಿ ಕಾಂತಿ ಕಿರಣಗಳನ್ನು ಹೊರಡಿಸುವ ಉಂಗುರವು ಪಿಂಗಳನನ್ನು ಆಕರ್ಷಿಸಿತು.

ಪಿಂಗಳನು ಧೈರ್ಯದಿಂದ ಮುಂದೆ ಹೋದನು. ಶವರೂಪದ ಮಹಾಮಾಯನ ಬಲಗೈಯ ಬೆರಳಿನ ಉಂಗುರವನ್ನು ಮೆಲ್ಲಗೆ ಜಾರಿಸಿಕೊಂಡನು. ಅವನ ಭಯವು ಪೂರ್ತಿ ಬಿಟ್ಟುಹೋಯಿತು. ಇನ್ನೂ ಅವನಿಗೆ ಬೇಕಾದ ಎರಡು ವಸ್ತುಗಳಿದ್ದುವು. ವಜ್ರಗಳ ಹಿಡಿಯುಳ್ಳ ಕತ್ತಿ. ಅದು ಮಹಾಮಾಯನ ಸೊಂಟದಲ್ಲಿ ನೇತಾಡಿಕೊಂಡಿದ್ದಿತು. ಪಿಂಗಳನು ಅದನ್ನು ಒರೆಯೊಂದಿಗೇ ಬಿಚ್ಚಿ, ತನ್ನ ಸೊಂಟದಲ್ಲಿ ಬಿಗಿದುಕೊಂಡನು. ಇನ್ನು ಬೇಕಾದುದು ಭೂಗೋಳ.

ಪಿಂಗಳನು ನಾಲ್ಕು ಕಡೆಗಳನ್ನೂ ಪರಿಶೀಲಿಸಿ ನೋಡಿದನು. ಒಂದು ಮೂಲೆಯಲ್ಲಿ ಮೆಟ್ಟಿಲುಗಳಿರುವುದು ಕಾಣಿಸಿತು. ಆ ಮೆಟ್ಟಿಲುಗಳ ಕೆಳಭಾಗದಲ್ಲಿ ಎತ್ತರವಾದೊಂದು ಗುಂಡಗಿನ ಮೇಜಿನ

ಮೇಲೆ ಚಂದ್ರಬಿಂಬದಂತೆ ಹೊಳೆಯುವ ಭೂಗೋಳವಿರುವುದನ್ನು ನೋಡಿದನು. ಪಿಂಗಳನು ಹತ್ತಿರ ಹೋಗಿ ಆ ಗೋಳವನ್ನು ಪರೀಕ್ಷಿಸಿ ನೋಡಿದನು. ಅದರಲ್ಲಿ ಅನೇಕ ದೇಶಗಳೂ, ಅವುಗಳ ಮೇರೆಗಳೂ, ಕೆಲಸ ಕಾರ್ಯಗಳಲ್ಲಿ ಮಗ್ನರಾದ ಪ್ರಜೆಗಳೂ, ನದಿಗಳೂ ಪರ್ವತಗಳೂ, ಅಲ್ಲಲ್ಲಿ ತಿರುಗುವ ಹಾರುವ ಮೃಗ ಪಕ್ಷಿಗಳೂ ಅದರಲ್ಲಿ ಸ್ಪಷ್ಟವಾಗಿ ಕಾಣಿಸುತ್ತಿದ್ದುವು.

ಮಹಾಮಾಯನ ಸಮಾಧಿಯಿಂದ ತಾನು ಸಂಗ್ರಹಿಸಬೇಕಾದ ಮೂರು ವಸ್ತುಗಳನ್ನೂ ತಾನು ವಶಪಡಿಸಿಕೊಂಡೆನೆಂದು ಪಿಂಗಳನಿಗೆ ಸಂತೋಷವಾಯಿತು. ಅವನು ಭೂಗೋಳವನ್ನು ತನ್ನ ಹೆಗಲಲ್ಲಿ ಹೊತ್ತುಕೊಂಡು, ಕೊನೆಯಬಾರಿ ಒಮ್ಮೆ ಮಹಾಮಾಯನು ಕುಳಿತಿರುವ ಸಿಂಹಾಸನವನ್ನು ನೋಡಿ, "ಇನ್ನು ಅಪ್ಪಣೆ" ಎಂದು ಹೇಳಿಕೊಂಡು ಹೊರಗೆ ಹೊರಟನು.

ಅವನು ಆ ದೇವಾಲಯದೊಳಗಿನಿಂದ ಹೊರಗೆ ಹೋಗುವಾಗ, ಎಲ್ಲಿಂದಲೋ ಹೊರಡುವ ಸುಶ್ರಾವ್ಯವಾದ ಸಂಗೀತಧ್ವನಿ ಕೇಳಿಸತೊಡಗಿತು. ಅದರೊಂದಿಗೆ "ಭೇಷ್! ಪಿಂಗಳಾ! ನಿನ್ನ ಧೈರ್ಯ ಸಾಹಸಗಳೂ, ಬುದ್ಧಿವಂತಿಕೆಯೂ ನಮ್ಮೆಲ್ಲರನ್ನೂ ಮೆಚ್ಚಿಸಿಬಿಟ್ಟವೆ" ಎಂಬ ಶ್ಲಾಘನೆಯ ಮಾತುಗಳೂ ಮೃದುವಾಗಿ ಅವನ ಕಿವಿಗೆ ಬಿದ್ದುವು.

ಆ ಕಂಠಸ್ವರವು ಮಹಾಮಾಯನದೇನೋ ಎಂಬ ಅನುಮಾನದಿಂದ ಪಿಂಗಳನು ಹಿಂದಿರುಗಿ ನೋಡಿದನು. ಆದರೆ ಮಹಾಮಾಯನಲ್ಲಿ ಯಾವ ಚಲನವೂ ಕಾಣಿಸಲಿಲ್ಲ.

ಪಿಂಗಳನು ಎಲ್ಲಾ ದ್ವಾರಗಳನ್ನೂ ದಾಟಿ ಹೊರಗೆ ಬಂದ ಕೂಡಲೇ ಪದ್ಮಪಾದನು ಅವನನ್ನು ಕಾದು ನೋಡಿಕೊಂಡೇ ಇದ್ದನು. "ಭೇಷ್ ಪಿಂಗಳಾ! ನಾವು ಜಯಿಸಿಬಿಟ್ಟೆವು. ಇನ್ನು ಈ ಪ್ರಪಂಚದಲ್ಲಿ ನಮ್ಮ ಶಕ್ತಿಗೆ ಇದಿರೇ ಇಲ್ಲವೆಂದು ನಂಬು" ಎಂದು ಕೂಗುತ್ತಾ ಪಿಂಗಳನನ್ನು ಇದಿರುಗೊಂಡು ಓಡುತ್ತಾ ಬಂದನು.

ಆ ಸಮಯದಲ್ಲಿ ನದೀಗರ್ಭದಲ್ಲಿ ಅಗ್ನಿಪರ್ವತವು ಸಿಡಿಯುವಂತೆ ಕರ್ಣಕಠೋರವಾದ ಮಹಾಧ್ವನಿ ಕೇಳಲು ತೊಡಗಿತು. ಇಬ್ಬರೂ ನೋಡುತ್ತಿದ್ದಂತೆ ತಾಳೇ ಮರದ ಪ್ರಮಾಣದಲ್ಲಿ ನೀರಿನ ಧಾರೆಯೊಂದು ಭೂಮಿಯೊಳಗಿನಿಂದ ಮೇಲಕ್ಕೆದ್ದಿತು. ಪದ್ಮಪಾದನು ಅದನ್ನು ನೋಡಿದ ಕೂಡಲೇ ಒಮ್ಮೆಗೇ ಹಿಂದಕ್ಕೆ ಹಾರಿದನು. ಅದರಂತೆ ಪಿಂಗಳನೂ ಹಾರಿದನು. (ಇನ್ನೂ ಇದೆ)






೭

[ಪಿಂಗಳನು ಎರಡನೇ ಸಾರಿ ಪಾಳು ದೇಗುಲದೊಳಗೆ ಪ್ರವೇಶಿಸಿ, ಅಲ್ಲಿರುವ ದುಷ್ಟ ಶಕ್ತಿಗಳನ್ನು ಜಯಿಸಿ, ಮಹಾಮಾಯನ ಸಮಾಧಿಯನ್ನು ತಲಪಿದನು. ಅನಂತರ ಮಹಾಮಾಯನ ಬೆರಳ ಉಂಗುರವನ್ನೂ, ವಜ್ರಗಳ ಹಿಡಿಯ ಖಡ್ಗವನ್ನೂ, ಭೂಗೋಳವನ್ನೂ ತೆಗೆದುಕೊಂಡು ಸುರಕ್ಷಿತನಾಗಿ ಹೊರಗೆ ಬಂದನು. ಅಷ್ಟರಲ್ಲಿ ನದೀ ಗರ್ಭದೊಳಗಿನಿಂದ ದೊಡ್ಡ ಧ್ವನಿಯೊಂದಿಗೆ ನೀರಿನ ಧಾರೆ ಮೇಲೆ ಚಿಮ್ಮಿತು.]

ಆ ನೀರಿನ ಧಾರೆಯನ್ನು ನೋಡಿ ಪದ್ಮಪಾದನು ಹೆದರಿ ಹಿಂದೆ ಹಾರಿದನು. ಅಷ್ಟು ದೊಡ್ಡ ಮಾಂತ್ರಿಕನಾದ ಪದ್ಮಪಾದನೇ ಬೆದರಿ ಬಿದ್ದು ಹಿಂದೆ ಹಾರಿದುದನ್ನು ನೋಡಿ ಪಿಂಗಳನಿಗೆ ಅತ್ಯಾಶ್ಚರ್ಯವಾಯಿತು. ಅವನು ವಿಚಿತ್ರವಾಗಿ ಪದ್ಮಪಾದನನ್ನೊಮ್ಮೆ ನೋಡಿದರೂ, ನಿಂತಲ್ಲಿಂದ ಕದಲಲಿಲ್ಲ. ಅವನು ದೊಡ್ಡ ಅದ್ಭುತವನ್ನು ನೋಡುವವನಂತೆ ನೀರಧಾರೆ ಹಾರಿ ಚಿಮ್ಮುವ ಚೆಂದವನ್ನು ನೋಡುತ್ತ "ಅಯ್ಯಾ ಪದ್ಮಪಾದರೇ ! ನಮಗೀಗ ಏನು ಇದಿರಾಗಿದೆ ? ಬೇಕಾದರೆ ಪ್ರಪಂಚವನ್ನೇ ದಾಸೋಹಂ ಅನಿಸಿಕೊಳ್ಳುವಂತಹ ಮಹಾ ಮಹಾ ಶಕ್ತಿಗಳು ನಮ್ಮ ಹತ್ತಿರ ಇರುವುವಷ್ಟೆ ? ಹಾಗಿರುವಾಗ ಕೇವಲ ಈ ನೀರು ಹಾರುವುದನ್ನು ನೋಡಿ ನಾವು ಭಯಪಡಬೇಕಾದ ಅಗತ್ಯವೇನಿದೆ ? ಹಾಗೇನಾಯಿತು ?" ಎಂದು ಕೇಳಿದನು.

ಪಿಂಗಳನ ಪ್ರಶ್ನೆ ಕೇಳಿದ ಮೇಲೆ ಪದ್ಮಪಾದನು ಸ್ವಲ್ಪಮಟ್ಟಿಗೆ ಸ್ಥಿಮಿತಕ್ಕೆ ಬಂದವನಂತಾದನು. ಅವನು ಪಿಂಗಳನನ್ನು ನೋಡಿ, ಆಪ್ಯಾಯತೆಯಿಂದ ಅವನ ಭುಜವನ್ನು ತಟ್ಟುತ್ತ, "ಪಿಂಗಳಾ, ನಿನ್ನಂಥ ಯುವಕ ವೀರನು ನನ್ನ ಪಕ್ಕದಲ್ಲಿರುವಾಗ, ನಾನು



ಯಾವುದಕ್ಕೂ ಭಯಪಡಲಾರೆನು. ಯಾವ ಮಂತ್ರ ತಂತ್ರಗಳೊಂದೂ ತಿಳಿಯದಿರುವ ನೀನು ಪ್ರದರ್ಶಿಸಿದ ಸಾಹಸವೂ ನಿರ್ಭಯತೆಯೂ ಅಮೋಘವಾದುದು. ನಾನು ಆ ನದೀ ಗರ್ಭದಿಂದೇಳುವ ನೀರಿನ ಬುಗ್ಗೆಯನ್ನು ನೋಡಿ ಹೆದರಿದೆನೆಂದು ತಿಳಿಯಬೇಡ. ಆದರೆ..." ಎಂದು ಮತ್ತೆ ನೀರ ಬುಗ್ಗೆಯ ಕಡೆಗೆ ನೋಡಿದನು.

"ಸಂದೇಹಿಸುವಿರೇಕೆ? ಏನು ಸಂಗತಿಯೋ ಹೇಳಿರಿ" ಎಂದನು ಪಿಂಗಳ.

ಪದ್ಮಪಾದನು ಕಿರುನಗೆ ತೋರಿಸಿ, "ನಾವೀಗ ಮಹಾಮಾಯನ ಎಲ್ಲಾ ಅದ್ಭುತ ಶಕ್ತಿಗಳನ್ನೂ ಪಡೆದಿದ್ದೇವೆ. ಆ ಕಾರಣದಿಂದ ಈ ಭಲ್ಲೂಕ ಪರ್ವತ ಪ್ರಾಂತದಲ್ಲಿ, ಇದಕ್ಕೆ ಮೊದಲು ಇಷ್ಟಾನುಸಾರವಾಗಿ ತಿರುಗುತ್ತಿದ್ದ ದುಷ್ಟ ಶಕ್ತಿಗಳೆಲ್ಲಾ ಬಲಹೀನವಾಗಬೇಕಿತ್ತು. ಆದರೆ ಹಾಗಾದಂತೆ ಕಾಣುವುದಿಲ್ಲ. ಅವು ಇನ್ನಿಷ್ಟು ಹೆಚ್ಚಿನ ಶಕ್ತಿಯಿಂದ ವಿಜೃಂಭಿಸುತ್ತಿವೆ. ಇದಕ್ಕೆ ಕಾರಣವೇನೆಂದು ಸರಿಯಾಗಿ ಅವಗಾಹನೆ ಆಗಲಿಲ್ಲ. ನೋಡಬೇಕಾಯಿತು. ಈಗ ಬರುವುದು ಬರಿಯ ನೀರು ಮಾತ್ರವೆಂದು ತಿಳಿಯಬೇಡ" ಎಂದನು.

ಪಿಂಗಳನಿಗೆ ಅದೆಲ್ಲಾ ಏನು ಗೊತ್ತು? ತನಗೇನೂ ತಿಳಿಯದೆಂಬಂತೆ ತಲೆ ಬಾಗಿಸಿದನು. ಪದ್ಮಪಾದನು ಮತ್ತೇನೋ ಹೇಳಲಿರುವಾಗ, ನದಿಯ ನೀರಿನ ಮೇಲೆ ಅನೇಕ ಭೀಕರಾಕಾರಗಳು, ವಿವಿಧಾಯುಧಗಳನ್ನು ಧರಿಸಿ ವಿಕೃತ ಧ್ವನಿಯಿಂದ ಅರಚುತ್ತ ಕೋಲಾಹಲವನ್ನೇ ಪ್ರಾರಂಭಿಸಿದುವು. ಅವುಗಳೊಳಗೇ ಏನೋ ಕಲಹ!

ಆ ದೃಶ್ಯವನ್ನು ನೋಡಿದ ಕೂಡಲೇ ಪಿಂಗಳನಿಗೆ ಭಯುವೆದ್ದಿತು. ಸರ್ವಾಂಗವೂ ಬೆವರಿ ನೀರಾಯಿತು. "ಅಯ್ಯಾ ಪದ್ಮಪಾದರೇ! ಈಗ ಏನು ದಾರಿ? ನನ್ನ ಜೀವಿತದ ಯಾವ ಸ್ವಪ್ನದಲ್ಲಿ ಕೂಡಾ ಇಂತಹ ವಿಕಾರಾಕಾರಗಳನ್ನು ನೋಡಿರಲಿಲ್ಲ. ಇವುಗಳ ಮೇಲೆ ನಾವು ಸಂಪಾದಿಸಿದ ಮಹಾಶಕ್ತಿಯಿಂದ ತುಂಬಿದ ಆಯುಧಗಳನ್ನು ಪ್ರಯೋಗಿಸಬೇಕಾಗಿ ಬರುತ್ತದೆಯೆ?" ಎಂದನು ಏನೋ ಸಂದೇಹದಿಂದ.

ಪದ್ಮಪಾದನು ಸ್ವಲ್ಪ ಹೊತ್ತು ನೆಲ ನೋಡಿ ಚಿಂತಿಸಿ "ಊಹೂಂ" ಎಂದು ತಲೆಯಾಡಿಸಿ, ಪಿಂಗಳನನ್ನು ನೋಡಿ, "ಇಷ್ಟುರವರೆಗೂ ಇವುಗಳನ್ನು ಬಹಳ ಭದ್ರವಾಗಿರಿಸಿಕೊಂಡಿದ್ದ ಮಹಾಮಾಯನ ಸಮಾಧಿಯನ್ನು ಭೇದಿಸಿ ಅದನ್ನು ಪ್ರವೇಶಿಸಿದ್ದೇವೆ. ಅವನ ಶಕ್ತಿಗಳು ಕೂಡಾ ಈಗ ನಮ್ಮ ವಶಕ್ಕೆ ಬಂದಿದೆ. ಆದುದರಿಂದ ಈ ದುಷ್ಟ ಪಿಶಾಚ ಗಣಗಳಿಗೆ ನಾಯಕನೇ ಇಲ್ಲದಂತಾಗಿದೆ, ಅವುಗಳೆಲ್ಲಾ ಒಬ್ಬ ನಾಯಕನಿಗಾಗಿ ಹೋರಾಡ ತೊಡಗಿವೆ. ನಾವು ಈಗ ಒಂದು ಕೆಲಸ ಮಾಡಿದರೆ ಚೆನ್ನಾಗಿರುತ್ತದೆ. ಆ ಭಲ್ಲೂಕಕೇತುವಿನ ಸಂಗತಿ ನೀನು ಮರೆಯಲಿಲ್ಲ ಷಷ್ಟೆ?" ಎಂದನು.

"ಭಲ್ಲೂಕಕೇತುವೇ! ಅವನನ್ನು ಹೇಗೆ ಮರೆಯಲು ಸಾಧ್ಯ? ಅವನು ಒಂದು ಕಾಲದಲ್ಲಿ ಈ ಪರ್ವತ ಪ್ರಾಂತಕ್ಕೆಲ್ಲಾ ಅಧಿಪತಿಯಾಗಿದ್ದವನೆಂದೂ ಹೇಳಿದ್ದಾನೆ. ನಾವು ಹಿಂದಿರುಗಿ ಹೋಗುವಾಗ ಅವನಿಗೆ ಲೋಹ ಶೃಂಖಲೆಯಿಂದ ಬಿಡುಗಡೆ ಮಾಡುತ್ತೇವೆಂತಲೂ ಮಾತು ಕೊಟ್ಟಿದ್ದೇವೆ. ಈಗ ಅವನಿಗೂ ಇದಕ್ಕೂ ಏನು ಸಂಬಂಧವೆನ್ನುವಿರಿ?" ಎಂದನು ಪಿಂಗಳ.

"ಹಾಗೆ ಕೇಳು, ಸಂಬಂಧವಿದೆ. ನಾವು ಅವನಿಗೆ ಕೊಟ್ಟ ಮಾತನ್ನು ಉಳಿಸಿಕೊಳ್ಳಲಿಕ್ಕೆ ಇದೇ ತಕ್ಕ ಸಮಯವಾಗಿದೆ. ಈ ಭಲ್ಲೂಕ ಪ್ರಾಂತದ ಕಾಡು ಬೆಟ್ಟಗಳಿಗೆ ಅಧಿಪತಿ ಎಂದು ಯಾರೂ ಇಲ್ಲದೆ ಹೋದರೆ, ಈ ಚಿಕ್ಕ ದೊಡ್ಡ ರಕ್ಕಸ ಭೂತಗಳು ತಮ್ಮೊಳಗೆ ತಾವು ಜಗಳಾಡಿ, ಈ ಪರಗಣೆಯ ಊರು ಕೇರಿ ಪಟ್ಟಣಗಳನ್ನೆಲ್ಲಾ ಅಲ್ಲಕಲ್ಲೋಲ ಮಾಡ ಬಲ್ಲಂಥವು. ಆದುದರಿಂದ ನಾವು ಮತ್ತೆ ಆ ಭಲ್ಲೂಕ ಕೇತುವಿಗೇ ಈ ಪ್ರಾಂತದ ಅಧಿಪತ್ಯವನ್ನು ಕೊಟ್ಟು ಬಿಡೋಣ. ಇವುಗಳಿಗೆಲ್ಲ ಅವನೇ ತಕ್ಕವನು, ಅಷ್ಟು ಮಾಡಿದರೆ ಇಲ್ಲಿಯ ಕೆಲಸ ಮುಗಿದಂತೆ" ಎಂದನು ಪದ್ಮಪಾದ.

"ಹೌದು. ಅದು ಬಹಳ ಒಳ್ಳೆಯ ಯೋಚನೆ. ಅವನ ರೂಪಾಕಾರಗಳು ಅದಕ್ಕೆ ತಕ್ಕ ಹಾಗೇ ಇವೆ. ನಮಗೂ ಅದರಿಂದೇನೂ ಕೆಡುಕಾಗದು. ಹಾಗೆಯೇ ಮಾಡಿಬಿಡಿರಿ" ಎಂದನು ಪಿಂಗಳ.

"ಹಾಗಾದರೆ ನೀನು ಕೂಡಲೇ ಹೊರಟುಬಿಡು. ಈ ಅಡವಿಯಲ್ಲಿರುವ ಆ ಕೊಳದ ಪ್ರದೇಶ ನಿನಗೆ ಗೊತ್ತಿದೆ ತಾನೇ? ಅವನನ್ನು ಬಂಧಮುಕ್ತ ಮಾಡಿ, ಇಲ್ಲಿಗೆ ಕರೆದುಕೊಂಡು ಬಾ. ಮುಂದಿನ ಕ್ರಮ ನಾನು ನೋಡಿಕೊಳ್ಳುತ್ತೇನೆ" ಎಂದನು ಪದ್ಮಪಾದ.

"ಒಳ್ಳೇದು. ಬಹಳ ಒಳ್ಳೇ ಆಲೋಚನೆ. ಈಗಲೇ ಹೋಗಿ ಕರೆದುಕೊಂಡು ಬರುತ್ತೇನೆ" ಎಂದನು ಪಿಂಗಳ.



ಪಿಂಗಳನು ಉತ್ಸಾಹದಿಂದ ಹೊರಡಲು ಸಿದ್ಧನಾದನು. ಪದ್ಮಪಾದನು ತನ್ನ ನಡುವಿನಲ್ಲಿದ್ದ ಮಹಾಮಾಯನ ವಜ್ರಗಳ ಹಿಡಿಯ ಖಡ್ಗವನ್ನು ಪಿಂಗಳನಿಗೆ ಕೊಟ್ಟು, "ನಿನಗೆ ವಾಹನವಾಗಿ ಆ ಪಿಶಾಚ ಗಾರ್ದಭವಿರುತ್ತದೆ. ಈ ಕತ್ತಿಯ ಸಹಾಯದಿಂದ ನೀನು ಭಲ್ಲೂಕಕೇತುವನ್ನು ಸಮೀಪಿಸದೆಯೇ, ತುಸು ದೂರದಲ್ಲಿದ್ದೇ ಅವನನ್ನು ಬಂಧಿಸಿರುವ ಕಬ್ಬಿಣದ ಸಂಕಲೆಗಳನ್ನು ಮುರಿದು ಹಾಕಬಹುದು. ಇಕೋ, ನೋಡು ವಾಹನವನ್ನು!" ಎಂದು ಗದೆಯನ್ನು ಗಾಳಿಯೊಳಗೆ ತಿರುವಿದನು.

ಕೂಡಲೇ ಭೂಮಿಯನ್ನು ಭೇದಿಸಿಕೊಂಡು ಅದರೊಳಗಿನಿಂದ ಭಯಂಕರ ಧ್ವನಿಯಿಂದ ಗಾಂಡ್ರಿಸುತ್ತ ಪಿಶಾಚ ಗಾರ್ದಭವು ಹೊರಗೆ ಹಾರಿತು,

ಪಿಂಗಳನು ಮಹಾ ಉತ್ಸಾಹದಿಂದ ಮಹಾಮಾಯನ ಕತ್ತಿಯನ್ನು ಹಿಡಿದುಕೊಂಡು ಪಿಶಾಚ ಗಾರ್ದಭದ ಮೇಲೆ ಹಾರಿ ಕುಳಿತನು. ಕೂಡಲೇ

ಗಾರ್ದಭವು ಆಕಾಶಮೇಲೆ ಎದ್ದು, ಬೆಟ್ಟಗಳನ್ನೂ, ನದಿಗಳನ್ನೂ, ಕಾಡು ಮೇಡು ತಿಟ್ಟುಗಳನ್ನೂ ದಾಟಿಕೊಂಡು ಹೋಯಿತು. ಸ್ವಲ್ಪ ಹೊತ್ತಿನೊಳಗೆ ಪಿಂಗಳನು ಭಲ್ಲೂಕಕೇತು ಬಂಧಿಸಲ್ಪಟ್ಟಿರುವ ಕೊಳದ ಪ್ರಾಂತವನ್ನು ತಲಪಿದನು.

ಖಡ್ಗಪಾಣಿಯಾಗಿ ಕತ್ತೆಯ ಮೇಲೇರಿಕೊಂಡು ಬರುವ ಪಿಂಗಳನನ್ನು ನೋಡಿದ ಕೂಡಲೇ ಭಲ್ಲೂಕಕೇತು, ದೊಡ್ಡ ದನಿಯಿಂದ ನರಳು ದನಿ ತೆಗೆಯುತ್ತ, "ಓಹೋಯ್! ಮಹಾ ಪ್ರಭೂ! ದೇವ್ರೂ! ಗಾರ್ದಭೇಂದ್ರರೇ! ನನ್ನನ್ನು ರಕ್ಷಿಸಿರೋ! ಈ ಕಬ್ಬಿಣದ ಸಂಕಲೆಗಳನ್ನು ಮುರಿದು ಹಾಕಿ ಪುಣ್ಯ ಕಟ್ಟಿಕೊಳ್ಳಿರೋ!..." ಎಂದು ಮುಂತಾಗಿ ಕೂಗ ತೊಡಗಿದನು. ಅವನ ಕೂಗು ನಾಲ್ಕು ಸುತ್ತಲೂ ಪ್ರತಿಧ್ವನಿ ಕೊಡುತ್ತಿದ್ದಿತು.

ಪಿಂಗಳನು ನಗುತ್ತಾ, ಕೊಳದ ಬದಿಯಲ್ಲೇ ಕತ್ತೆಯ ಮೇಲಿನಿಂದ ಇಳಿದು, "ಇನ್ನು ಬಾಯಿ ಮುಚ್ಚಿಕೋಯ್ಯಾ ಭಲ್ಲೂಕಕೇತೂ! ಯಾವನೋ ದೇವನೆಂದುಕೊಂಡು ನನಗೆ ಗಾರ್ದಭೇಂದ್ರನೆಂಬ ಬಿರುದು ಕೊಡುವೆಯಾ? ನಾನು ಗಾರ್ದಭೇಂದ್ರನೂ ಅಲ್ಲ, ಜಂಬುಕೇಂದ್ರನೂ ಅಲ್ಲ. ನಾನೊಬ್ಬ ಸಾಧಾರಣ ಮನುಷ್ಯನೇ. ಈ ಮೊದಲು ನೀನು ಒಂದು ಸಾರಿ ನನ್ನನ್ನು ನೋಡಿರುವುದನ್ನು ಮರೆತೆಯಾ? ನನ್ನ ಹೆಸರು ಪಿಂಗಳ, ಜಾಲರಿ ಪಿಂಗಳ. ನಿನ್ನ ಹತ್ತಿರ ಕೆಲಸವಿದ್ದುದಕ್ಕೇ ಬಂದೆನು" ಎಂದನು.

"ಆಹಾ! ನೀವು ಪಿಂಗಳರೇನು? ಹೌದೌದು, ಈಗ ನೆನಪಿಗೆ ಬಂತು. ಮಹಾಮಾಯನ ಸಮಾಧಿಯ ಮೇಲಕ್ಕೆ ದಾಳಿ ಮಾಡಲು ಹೊರಟ ಆ ನಮ್ಮ ಮಹಾ ಮಂತ್ರವಾದಿ ನಿಮಗೆ ಗುರುವಲ್ಲವೇ?" ಎಂದನು ಭಲ್ಲೂಕಕೇತು.

"ಸರಿಯಾಗಿ ಹೇಳಿದೆ. ನಿನ್ನ ನೆನಪಿನ ಶಕ್ತಿ ಮೆಚ್ಚಬೇಕಾದ್ದೇ" ಎಂದನು ಪಿಂಗಳ.

"ಅಯ್ಯಾ ಪಿಂಗಳ ಪ್ರಭೂ! ಆ ಮಂತ್ರವೇತ್ತರು ಸುಖವಾಗಿರುವರೇ? ಮಹಾಮಾಯನ ಸಮಾಧಿಯೊಳಗೆ ಪ್ರವೇಶಿಸಲು ಸಾಧ್ಯವಾಯಿತೇ? ಕಾರ್ಯವು



ಜಯವಾಯಿತೇ? ಅವರನ್ನು ಬಿಟ್ಟು ನೀವೊಬ್ಬರೇ ಹೇಗೆ ಬರಲಾಯಿತು ?" ಎಂದು ಕೇಳಿದನು ಭಲ್ಲೂಕಕೇತು.

"ಆ ಸಮಾಧಿಯೊಳಗೆ ಪ್ರವೇಶಿಸಿದವನು ನಾನು. ಇಕೋ ನೋಡು. ಆ ಮಹಾಮಾಯನ ಮಹಾ ಮಂತ್ರಶಕ್ತಿಯನ್ನೊಳಗೊಂಡ ಖಡ್ಗ !" ಎಂದು ಪಿಂಗಳನು ತನ್ನ ಕೈಯಲ್ಲಿದ್ದ ವಜ್ರಗಳ ಹಿಡಿಯ ಖಡ್ಗವನ್ನು ಝಳಪಿಸಿ, ಅದರ ಮೊನೆಯನ್ನು ಭಲ್ಲೂಕಕೇತುವಿನ ಶರೀರಕ್ಕೆ ನೇರಾಗಿ ಗುರಿಯಿಟ್ಟು ಅತ್ತಿತ್ತ ಆಡಿಸಿದನು.

ಮರುಕ್ಷಣದಲ್ಲಿ ಕಣ್ಣು ಕುಕ್ಕುವಂತಹ ಕಾಂತಿರೇಖೆಗಳು ಮಹಾ ವೇಗದಿಂದ ಆ ಕತ್ತಿಯ ಮೊನೆಯಿಂದ ಹೊರಟು, ಭಲ್ಲೂಕಕೇತುವನ್ನು ಬಂಧಿಸಿದ್ದ ಕಬ್ಬಿಣದ ಸಂಕಲೆಗೆ ತಾಗಿದುವು. ಅದೇ ಕ್ಷಣದಲ್ಲಿ ಆ ಕಬ್ಬಿಣದ ಸಂಕಲೆ ಒಣ ಹಗ್ಗದಂತೆ ಭಗ್ಗನೆ ಉರಿದು ಮಸಿ ಬೂದಿ ಕಣಗಳಾಗಿ ಹಾರಿಹೋಯಿತು.

ಭಲ್ಲೂಕಕೇತು ಸಂತೋಷಾತಿಶಯದಿಂದ ಹಾಯೆಂದು ಕೂಗಿದನು. ಆಮೇಲೆ ತನ್ನ ಮಹಾಕಾಯವನ್ನು ಒಂದು ಸಾರಿ ಕೊಡರಿಕೊಂಡು ಮೈಮುರಿದು ಎದ್ದು ನಿಂತು, ಮತ್ತೊಮ್ಮೆ ಚೆನ್ನಾಗಿ ಮೈಮುರಿದನು. ಅನಂತರ ಅವನು ಕೃತಜ್ಞತೆ ಸೂಸುವ ಕಣ್ಣುಗಳಿಂದ ಪಿಂಗಳನ ಸಮೀಪ ಬಂದು, "ಪ್ರಭೂ ! ನೀವು ಬಂದು ನನ್ನನ್ನು ಬಂಧಮುಕ್ತ ಮಾಡಿ, ಬಹಳ ಕಾಲದಿಂದ ನಾನು ಪಡುತ್ತಿರುವ ನರಕಯಾತನೆಯಿಂದ ತಪ್ಪಿಸಿದಿರಿ. ನಿಮ್ಮ ದಯದಿಂದ ನನಗೆ ಸ್ವಾತಂತ್ರ್ಯ ಸಿಕ್ಕಿತು. ಈ ಗಳಿಗೆಯಿಂದ ನಾನು ನಿಮಗೆ ದಾಸನು. ಏನು ಮಾಡಬೇಕೆಂದು ಅಪ್ಪಣೆಯಾಗಲಿ" ಎಂದನು.

"ನಾವು ಈಗಲೇ ಇಲ್ಲಿಂದ ಪದ್ಮಪಾದರ ಬಳಿಗೆ ಹೋಗಬೇಕು. ಮಹಾಮಾಯನು ತನ್ನ ಶಕ್ತಿಯನ್ನು ಕಳೆದುಕೊಂಡ ಮೇಲೆ ಭಲ್ಲೂಕ ಪರ್ವತಗಳ ಕಣಿವೆಯಲ್ಲಿರುವ ಚಿಕ್ಕವೂ ದೊಡ್ಡವೂ ಆದ ಪಿಶಾಚ ಗಣಗಳಿಗೆಲ್ಲಾ ನಾಯಕನಿಲ್ಲದೆ ಬಹಳ ಗಲಾಟೆ ಎದ್ದಿದೆ. ನಾನು ನೀನು ಎಂದು ಪಿಶಾಚಿಗಳೆಲ್ಲ ಜಗಳಾಡಿಕೊಳ್ಳುತ್ತಿದ್ದಾವೆ. ನಿನ್ನಂಥ ಮಹಾ ಶಕ್ತಿಶಾಲಿಯನ್ನು





ಮತ್ತೆ ಆ ಕ್ಷುದ್ರಜೀವಿಗಳಿಗೆ ನಾಯಕನನ್ನಾಗಿ ಮಾಡಿಬಿಡಬೇಕೆಂಬುದು ಪದ್ಮಪಾದರ ಅಭಿಪ್ರಾಯ. ಹಾಗೆ ಮಾಡದಿದ್ದರೆ ಪಿಶಾಚಿಗಳು ಕೇಳುವವರಿಲ್ಲದೆ, ಊರವರನ್ನೂ ರಾಜ್ಯವನ್ನೂ ವಂಚಿಸಿ ಹಂಚಿಕೊಂಡು, ಈ ಪ್ರಾಂತಕ್ಕೆಲ್ಲಾ ನಾನಾ ಬಗೆಯ ಕಲ್ಮಶ ಬರುವ ಹಾಗೆ ಮಾಡಬಹುದು" ಎಂದನು.

ಪಿಂಗಳನ ಮಾತು ಕೇಳಿ ಭಲ್ಲೂಕಕೇತು ಹೆದರಿ ಗಡಗಡ ನಡುಗುತ್ತ, ಎರಡು ಕೈಗಳನ್ನೂ ಜೋಡಿಸಿ ಪಿಂಗಳನಿಗೆ ಬಾಗಿ ನಮಸ್ಕಾರ ಮಾಡುತ್ತ, "ಬೇಡವೇ ಬೇಡ ಪ್ರಭೂ! ಇನ್ನು ನನಗೆ ಈ ಭೂತಪಿಶಾಚ ಗಣಗಳ ಮೇಲೆ ನಾಯಕತ್ವ ಬೇಡವೇ ಬೇಡ. ಆ ಪದವಿಯನ್ನು ಅನುಭವಿಸುವುದು ಬಹಳ ಬಾಧಾಕರವಾದುದೆಂದು ನನಗೆ ಅನುಭವವಾಗಿದೆ. ಯಾವ ಮಂತ್ರವೇತ್ತನೋ, ಮಹಾ ಧೈರ್ಯಶಾಲಿಯಾದವನೋ ನಮ್ಮ ಮೇಲೆ ದಾಳಿ ಮಾಡಲು ಬರುವುದೂ, ನಾವು ಅಷ್ಟೆಲ್ಲಾ ಶಕ್ತಿ ಕುಯುಕ್ತಿಗಳಿದ್ದು ಕೂಡಾ ದಾಳಿಯನ್ನು ತಡೆದುಕೊಳ್ಳಲಾಗದೆ ಎಲ್ಲಿಗೋ ಓಡಿಹೋಗುವುದೂ, ಅದೇ ನಮಗೆ ಜೀವಿತವಾಯಿತು. ಅಂಥಾದ್ದು ಸಾಕೋಸಾಕಾಗಿ ಹೋಯಿತು. ಈ ದಿನದಿಂದ ನಾನು ಮಾನವರನ್ನು ಸೇವಿಸಿ ಬದುಕಬೇಕೆಂದಿದ್ದೇನೆ. ಮಾನವರಲ್ಲಿ ನೀವು ಅತ್ಯಂತ ಸಾಹಸವಂತರೆಂದು ಗೊತ್ತಾಗಿದೆ. ದಯಮಾಡಿ ನನ್ನನ್ನು ನಿಮ್ಮ ದಾಸನಾಗಿ ಸ್ವೀಕರಿಸಿಬಿಡಿ. ಬೇಕಾದರೆ ನಿಮ್ಮ ಹತ್ತಿರವಿರುವ ಇತರ ದಾಸರ ಮೇಲೆ, ಗುಲಾಮರ ಮೇಲೆ ನನ್ನನ್ನು ನಾಯಕನಾಗಿ ನಿಯಮಿಸಿ ಬಿಡಿರಿ" ಎಂದನು.

"ಭೇಷ್! ನಿನ್ನ ಭಕ್ತಿಗೂ ವಿನಯಕ್ಕೂ ತುಂಬಾ ಮೆಚ್ಚಿದೆನು. ಆದರೆ ನಿನ್ನನ್ನು ಹೇಗೆ ಉಪಯೋಗಿಸಬೇಕೆಂಬುದನ್ನು ನಾನು ತೀರ್ಮಾನಿಸುವ ಸಮಸ್ಯೆಯಲ್ಲ. ಪದ್ಮಪಾದರೊಂದಿಗೆ ಮುಂದಾಗಿ ಮಾತಾಡಿ, ಅವರ ಉದ್ದೇಶವೇನೆಂಬುದನ್ನು ತಿಳಿದುಕೊಳ್ಳಬೇಕು. ಈಗ ಹೆಚ್ಚು ಮಾತಿಗೆ ಅವಕಾಶವಿಲ್ಲ. ಇನ್ನು ಹೊರಡು" ಎಂದವನೇ ಪಿಂಗಳನು ಅವನಿಗೆ ಬೆನ್ನು ಹಾಕಿ ಹಿಂದಿರುಗಿದನು.

ಪಿಂಗಳನು ತನ್ನ ಪಿಶಾಚಿ ಗಾರ್ದಭ ವಾಹನದ ಮೇಲೆ ಏರುವುದರೊಳಗೆ ಭಲ್ಲೂಕಕೇತು ಆ ಕತ್ತೆಯ ನಡುವನ್ನು ಹಿಡಿದು, "ಪ್ರಭೂ, ನಿಮ್ಮಂಥ ದೊಡ್ಡ ಮನಸ್ಸಿನ ಗೌರವಶಾಲಿಗಳು ಇಂತಹ ಕ್ಷುದ್ರ ಪಿಶಾಚಿಯನ್ನು ವಾಹನವಾಗಿ ಉಪಯೋಗಿಸುವುದು ಏನೇನೂ ಚೆನ್ನಾಗಿಲ್ಲ, ಬಹಳ ಅವಮಾನವಿದು. ನನ್ನ ಹೆಗಲಿನ ಮೇಲೆ ಏರಿಕೊಳ್ಳಿರಿ. ಕ್ಷಣ ಮಾತ್ರದಲ್ಲಿ ನಿಮ್ಮನ್ನು ನಿಮ್ಮ ಗುರುಗಳ ಹತ್ತಿರ ಸೇರಿಸಿಬಿಡುತ್ತೇನೆ" ಎಂದು ಪಿಶಾಚಿ ಗಾರ್ದಭವನ್ನು ಒಂಟಿ ಕೈಯಿಂದ ಎತ್ತಿ ಗಿರಿಗಿರಿ ತಿರುಗಿಸಿ ಮರಗಳ ಮೇಲಿನಿಂದಾಗಿ ಆಕಾಶದ ಕಡೆಗೆ ಬೀಸಿ ಒಗೆದನು.

ಆ ಪಿಶಾಚ ಕತ್ತೆ ದಿಕ್ಕುಗಳೆಲ್ಲ ಕಿತ್ತು ಬೀಳುವ ಹಾಗೆ ಗಾಂಡ್ರಿಸುತ್ತಾ ಹಾರಿ ಹೋಗುವುದನ್ನು

ನೋಡಿ, ಭಲ್ಲೂಕಕೇತು ಗಹಗಹವೆಂದು ಗಟ್ಟಿಯಾಗಿ ನಕ್ಕು, "ಪ್ರಭೂ, ಇನ್ನು ಬನ್ನಿ. ನನ್ನ ಹೆಗಲ ಮೇಲೆ ಕುಳಿತುಕೊಳ್ಳಿರಿ" ಎಂದು ಮಂಡಿಯೂರಿ ಕುಳಿತನು.

ಪಿಂಗಳನು ಸ್ವಲ್ಪವೂ ಸಂದೇಹಪಡದೆ ಗೊಡ್ಡು ಕರಡಿಯ ಹಾಗಿರುವ ಭಲ್ಲೂಕಕೇತುವಿನ ಹೆಗಲ ಮೇಲೇರಿ ಕುಳಿತನು. ಭಲ್ಲೂಕಕೇತು ಕೂಡಲೇ ಟಣ್ಣನೆ ಆಕಾಶಕ್ಕೆ ಹಾರಿ, ಕಣ್ಣುಮುಚ್ಚಿ ತೆರೆಯುವುದರೊಳಗೆ ಪಿಂಗಳನನ್ನು ಪದ್ಮಪಾದನಿರುವ ಸ್ಥಳಕ್ಕೆ ತಂದು ಇಳಿಸಿದನು.

ಪದ್ಮಪಾದನು ಭಲ್ಲೂಕಕೇತುವನ್ನು ನೋಡಿದ ಕೂಡಲೇ ಮಂದಹಾಸ ಬೀರುತ್ತ, "ಚೆನ್ನಾಗಿರುವೆಯೇನೋ ಭಲ್ಲೂಕಕೇತೂ! ಅತ್ತ ನೋಡು!" ಎಂದು ನದಿಯಲ್ಲಿ ಉಕ್ಕುತ್ತಿರುವ ನೀರ ಮೇಲೆಯೂ, ಪಕ್ಕಗಳಲ್ಲಿರುವ ಗುಡ್ಡಗಳ ಕಲ್ಲುಗಳೆಡೆಯಲ್ಲಿಯೂ ಹೋರಾಡಿಕೊಂಡಿರುವ ಅಸಂಖ್ಯಾತ ರಕ್ಕಸ ರೂಪಗಳನ್ನು ತೋರಿಸಿ, "ಇವರೆಲ್ಲರೂ ಆಧಿಪತ್ಯಕ್ಕಾಗಿ ಒಬ್ಬರ ಕೊರಳನ್ನೊಬ್ಬರು ಕೊಯ್ದುಕೊಳ್ಳುತ್ತಿದ್ದಾರೆ. ನೀನು ಅವರ ಜಗಳವನ್ನು ನಿಲ್ಲಿಸಿ. ಅವರಿಗೆಲ್ಲ ನಾಯಕನಾಗಿ, ರಾಜನಾಗಿ ಇರಬೇಕೆಂದು ನಾನು ನಿನ್ನನ್ನು ಬಂಧಮುಕ್ತ ಮಾಡಿಸಿ ಇಲ್ಲಿಗೆ ಕರೆಸಿದ್ದೇನೆ. ಇದಕ್ಕೆ ನೀನೇ ಸರಿ" ಎಂದನು.

ಪದ್ಮಪಾದನ ಮಾತುಗಳನ್ನು ಕೇಳಿ ಭಲ್ಲೂಕಕೇತು ದಿಗಿಲುಬಿದ್ದು ಪಿಂಗಳನ ಮುಖವನ್ನು ದೈನ್ಯತೆಯಿಂದ ನೋಡಿದನು. ಪಿಂಗಳನು ಪದ್ಮಪಾದನೊಂದಿಗೆ ಭಲ್ಲೂಕಕೇತುವಿನ ಕೋರಿಕೆಯನ್ನು ವಿವರಿಸಿ ಹೇಳಿ, "ಇವನ ಆಶೆಯಂತೆ ನಾನು ಇವನನ್ನು ನನ್ನ ಸೇವಕನಾಗಿ ಇಟ್ಟುಕೊಳ್ಳಬೇಕೆಂದಿದ್ದೇನೆ. ಅದಕ್ಕೆ ನಿಮ್ಮ ಅನುಮತಿ ಬೇಕು" ಎಂದನು.

"ಅದಕ್ಕೆ ನನ್ನ ಅಭ್ಯಂತರವೇನಿಲ್ಲ ಪಿಂಗಳಾ. ಆದರೆ ಈ ಜಗಳಾಡಿಕೊಂಡಿರುವ ರಕ್ಕಸ ಗಣಗಳ ಸಂಗತಿ ಹೇಗೆ? ಅವುಗಳಿಗೆಲ್ಲ ಒಂದು ಅಂತ್ಯ ತೋರಿಸಲೇ ಬೇಕು" ಎಂದನು ಪದ್ಮಪಾದ.

"ಅಷ್ಟೇ ತಾನೇ? ಅವುಗಳ ಸಂಗತಿ ನನಗೆ ಬಿಡಿ! ನಾನೀಗಲೇ...." ಎಂದು ಭಲ್ಲೂಕಕೇತು ಏನೋ ಹೇಳಲಿರುವಾಗ, ಅಲ್ಲಿರುವ ರಕ್ಕಸ ಗಣಗಳಂತಹ ಪಿಶಾಚಿಗಳೆಲ್ಲಾ, ಒಂದೇ ಸಾರಿ ಆ ಪ್ರಾಂತವೆಲ್ಲವೂ ಮಾರ್ಮೊಳಗುವಂತೆ ಏಕಕಂಠದಿಂದ, "ಓಹೋಂ! ಭಲ್ಲೂಕಕೇತೂ! ಓಹೋಂ! ಓಹೋಂ!" ಎಂದು ಅರಚುತ್ತಾ, ಪದ್ಮಪಾದನಿರುವ ಸ್ಥಳಕ್ಕೆ ಓಡೋಡಿ ಬರತೊಡಗಿದವು.

ಭಲ್ಲೂಕಕೇತು ಏನು ಹೇಳಿದನೋ, ಏನೂ ಹೇಳದೆ ಅಷ್ಟಕ್ಕೇ ಬಾಯಿಮುಚ್ಚಿದನೋ ಗೊತ್ತಾಗಲಿಲ್ಲ.

(ಇನ್ನೂ ಇದೆ)






## ೯

[ಮಹಾ ಮಾಯನ ಅದ್ಭುತ ವಸ್ತುಗಳೆಲ್ಲವನ್ನೂ ಪಿಂಗಳನು ವಶಪಡಿಸಿಕೊಂಡ ಕೂಡಲೇ, ಭಲ್ಲೂಕ ಪರ್ವತಗಳ ಮೇಲಿದ್ದ ದುಷ್ಟಶಕ್ತಿಗಳೆಲ್ಲವೂ ನಾಯಕನಿಲ್ಲದಂತಾಗಿ ತಮ್ಮೊಳಗೆ ಜಗಳಾಡಿಕೊಳ್ಳಲು ತೊಡಗಿದವು. ಪದ್ಮಪಾದನು ಭಲ್ಲೂಕಕೇತುವನ್ನು ಕರೆತರಲು ಪಿಂಗಳನನ್ನು ಕಳುಹಿಸಿದನು. ಪಿಂಗಳನು ಭಲ್ಲೂಕಕೇತುವನ್ನು ಕರೆದುಕೊಂಡು ಬಂದ ಕೂಡಲೇ ದುಷ್ಟಶಕ್ತಿಗಳೆಲ್ಲವೂ ಕೂಗಾಡುತ್ತ ಭಲ್ಲೂಕಕೇತುವಿನ ಬಳಿಗೆ ಓಡಿಬರತೊಡಗಿದವು.]

"ಇನ್ನು ನಾವು ಜಗಳಾಡ ಬೇಕಾಗಿಲ್ಲ. ನಮಗೆ ತಕ್ಕ ಮಹಾನಾಯಕ ಬಂದ, ಬಂದ..." ಎಂದು ಆ ದುಷ್ಟ ಶಕ್ತಿಯ ಪಿಶಾಚಿಗಳು ಕೂಗಾಡುತ್ತ, ಹಾರಿ, ಕುಣಿಯುತ್ತ ಬರುವುದನ್ನು ನೋಡಿ, ಪದ್ಮಪಾದನಿಗೆ ಮುಗುಳುನಗು ಬರತೊಡಗಿತು. ಆದರೆ ಭಲ್ಲೂಕಕೇತು ಆ ಪಿಶಾಚಿಗಳ ಅರ್ಭಟೆಗಳನ್ನೂ, ರೀತಿಯನ್ನೂ ನೋಡಿ, ಜಿಗುಪ್ಸೆಯ ಮುಖ ಮಾಡಿಕೊಂಡು ತಲೆಯನ್ನು ಆಚೆಗೆ ತಿರುಗಿಸಿಕೊಂಡನು. ಪದ್ಮಪಾದನು ಅವನನ್ನು ನೋಡಿ ಏನೋ ಹೇಳಲಿರುವುದನ್ನು ಗಮನಿಸಿ, ಭಲ್ಲೂಕಕೇತು ಪಿಂಗಳನಿಗೆ, ಕೈ ಮುಗಿದು,

"ಪಿಂಗಳ ಪ್ರಭೂ! ಈಗ ನೀವೇ ನನ್ನನ್ನು ಈ ಪೀಡೆಗಳಿಂದ ಕಾಪಾಡಬೇಕು. ನಿಮ್ಮ ಗುರುಗಳ ಭಾವನೆ ನನಗೆ ಗೊತ್ತಾಯಿತು. ನಾನು ಈ ಕ್ಷುದ್ರ ಪಿಶಾಚಿಗಳಿಗೆ ನಾಯಕನಾಗಿರಲಾರೆ. ದಯಮಾಡಿ ನಿಮ್ಮ ಗುರುವನ್ನು ಒಪ್ಪಿಸಿ, ನನ್ನನ್ನು ನಿಮ್ಮೊಂದಿಗೆ ಕರೆದುಕೊಂಡು ಹೋಗಿಬಿಡಿ. ನಾನಿನ್ನು ನಿಮಗೇ ಸೇವಕ. ನಿಮ್ಮ ಸೇವೆಯೊಂದೇ ನನಗೆ ಮಹಾ ಪ್ರಸಾದ" ಎಂದನು.

ಪಿಂಗಳನು ಏನೂ ಉತ್ತರ ಕೊಡದೆ ಪದ್ಮಪಾದನ ಮುಖ ನೋಡಿದನು. ಪದ್ಮಪಾದನು ಭಲ್ಲೂಕ



ಕೇತುವಿನ ಭುಜವನ್ನು ತಟ್ಟುತ್ತ, "ಭಲ್ಲೂಕಕೇತೂ! ನೀನು ಕೇವಲ ಭಾವಾವೇಗಕ್ಕೆ ಒಳಗಾಗದೆ ಆಲೋಚಿಸಿ ನೋಡು. ನೀನು ಈ ಪರ್ವತ ಪ್ರಾಂತಗಳಲ್ಲಿರುವ ಎಲ್ಲಾ ಪಿಶಾಚಗಣಗಳಿಗೂ ನಾಯಕತ್ವ ವಹಿಸಿ ಕೊಂಡಿರುವುದೇ ಎಲ್ಲರಿಗೂ ಒಳ್ಳೆಯದೆಂದು ನನ್ನ ಅಭಿಪ್ರಾಯ. ಅದರಿಂದ ನಿನಗೂ ದೊಡ್ಡ ಹೆಸರೂ ಮಹತ್ತೂ ಬರುತ್ತದೆ." ಎಂದನು,

"ಅಯ್ಯಯ್ಯೋ! ಭಾವಾವೇಗದಲ್ಲಿ ನಾನಿಲ್ಲ ಪ್ರಭೂ. ನನಗೆ ಪಿಶಾಚಿಗಳ ನಡುವಿನ ಜೀವಿತ ಬೇಡ, ಸಾಕಾಗಿ ಹೋಯಿತು. ಆ ದೊಡ್ಡತನವೂ, ಮಹತ್ತೂ, ಕೀರ್ತಿಯೂ ನನಗೆ ಬೇಡವೇ ಬೇಡ!" ಎಂದು ಭಲ್ಲೂಕಕೇತು ಪದ್ಮಪಾದನಿಗೆ ಸಾಷ್ಟಾಂಗ ನಮಸ್ಕಾರ ಹಾಕಿದನು.

ಅಷ್ಟರಲ್ಲಿ ವಿಧವಿಧವಾದ ಪಿಶಾಚಿಗಳೆಲ್ಲಾ ಅವರ ಸುತ್ತಲೂ ಕೂಡಿ "ಓಹೋಂ! ಭಲ್ಲೂಕಕೇತೂ! ನಮ್ಮ ಒಡೆಯಾ! ಓಹೋಂ! ಓಹೋಂ!" ಎಂದು ಸಂಭ್ರಮದಿಂದ ಕೂಗಾಡತೊಡಗಿದುವು. ಕರ್ಣ ಕಠೋರವಾದ ಅವುಗಳ ವಿಕೃತನಾದಗಳನ್ನು ಕೇಳಿ, ಪಿಂಗಳನು ಕಿವಿಗಳನ್ನು ಮುಚ್ಚಿಕೊಂಡು ಛೀತ್ಕರಿಸಿ, "ಅಯ್ಯಾ, ಪದ್ಮಪಾದರೇ! ನನಗೊಂದು ಒಳ್ಳೆಯ ಉಪಾಯ ತೋರುತ್ತದೆ. ಹಾಗೆ ಮಾಡಿದರೆ ಈ ಭಲ್ಲೂಕಕೇತುವಿಗೂ, ನಮಗೂ ಸಹಾ ಎಲ್ಲಾ ಸಮಸ್ಯೆ ಗಳೂ ಅಳಿಸಿಯೋಗುತ್ತವೆ. ಅಪ್ಪಣೆಯಾದರೆ ಹೇಳು ತ್ತೇನೆ." ಎಂದನು.

"ಅದೇನು? ಹೇಳಿಬಿಡು" ಎಂದನು ಪದ್ಮಪಾದ.

"ಭಲ್ಲೂಕಕೇತುವಿಗೆ ನಮ್ಮನ್ನು ಸೇವಿಸಿಕೊಂಡಿರ ಬೇಕೆಂದು ಬಹಳ ಆಸೆಯಾಗಿದೆ. ಆ ಕಾರಣದಿಂದ ಅವನು ಈ ಪಿಶಾಚಿಗಳಿಗೆ ನಾಯಕನಾಗಿ ಈ ಪರ್ವತ ಪ್ರಾಂತದಲ್ಲಿರಲು ಇಷ್ಟಪಡುವುದಿಲ್ಲ. ನಾವು ಈ ಪಿಶಾಚಿಗಳನ್ನು ಹೀಗೆಯೇ ಬಿಟ್ಟು ಹೋಗಿಬಿಟ್ಟರೆ ಇವುಗಳು ಎಂತೆಂತಹ ಘೋರಕಾರ್ಯಗಳನ್ನಾದರೂ ಕೇಳುವವರಿಲ್ಲದೆ ಮಾಡುತ್ತಾ ಇದ್ದರೆ, ಲೋಕದ ಜನರಿಗೂ ಕಷ್ಟ, ನಮಗೂ ಕೆಟ್ಟ ಹೆಸರು. ಆದ್ದರಿಂದ ಇವುಗಳನ್ನು ಸಮೂಲವಾಗಿ ನಾಶಮಾಡಿ ಬಿಡಬೇಕು. ಇವುಗಳ ಮೇಲೆ ಅಪ್ರತಿಮವಾದ ಮಹಾಮಾಯನ ಕತ್ತಿಯನ್ನು ಪ್ರಯೋಗಿಸಿ ಹತಮಾಡಿ ಬಿಡೋಣ" ಎಂದನು ಪಿಂಗಳ.

ಆ ಮಾತು ಕೇಳಿದ ಕೂಡಲೇ ಪಿಶಾಚಿಗಳೆಲ್ಲಾ ಹಾಹಾಕಾರ ಮಾಡಿದುವು, ತಮ್ಮ ಸರ್ವನಾಶ ವಾಗುವುದೆಂದು ಹೆದರಿ "ಬೇಡ್ರೀ! ಬೇಡ್ರೀ!" ಎಂದು ಅರಚಿ, ಕಡೆಗೆ ಅವೆಲ್ಲವೂ ಏಕಕಂಠದಿಂದ, "ಓ ಮಹಾಮಾಂತ್ರಿಕ ಪ್ರಭುಗಳೇ! ನಮ್ಮನ್ನು ಹೀಗೆ ನಾಶಮಾಡುವುದು ನ್ಯಾಯವಲ್ಲಾ! ಧರ್ಮ ವಲ್ಲಾ! ನಮ್ಮ ಪ್ರಭು ಭಲ್ಲೂಕಕೇತು ನಮಗೆ ನಾಯಕರಾಗಿರಲು ಒಪ್ಪದಿದ್ದರೆ ನಾವೇ ನಮ್ಮ ನಾಯಕನನ್ನು ಆರಿಸಿಕೊಳ್ಳುತ್ತೇವೆ. ನೀವು ಅನುಜ್ಞೆ ಕೊಟ್ಟರೇ ಸಾಕು!" ಎಂದುವು.



"ಹಾಗೇನು! ಒಳ್ಳೇದು. ನನ್ನ ಅಭ್ಯಂತರವೇ ನಿಲ್ಲ. ನಿಮ್ಮ ನಾಯಕತ್ವದ ಸಮಸ್ಯೆಯನ್ನು ಹೇಗೆ ಪರಿಷ್ಕರಿಸಿಕೊಳ್ಳುವಿರೆಂಬುದನ್ನು ಈಗಲೇ ಮಾಡಿ ತೋರಿಸಿರಿ, ನಾವೂ ತೃಪ್ತರಾಗುತ್ತೇವೆ" ಎಂದನು ಪದ್ಮಪಾದ.

"ನಿಮ್ಮಂಥ ಮನುಷ್ಯರೊಳಗೆ ಹೇಗೋ ಹಾಗೆಯೇ ನಮ್ಮಲ್ಲಿಯೂ ಹೆಚ್ಚಿನ ಬಲದರ್ಪ ಗಳಿರುವವನೇ ನಾಯಕನಾಗುತ್ತಾನೆ. ಆ ಶಕ್ತಿ ಯಾರಿಗೆ ಹೆಚ್ಚಾಗಿದೆ ಎಂಬುದನ್ನು ಈಗಲೇ ರುಜುಪಡಿಸಿ ಕೊಳ್ಳುತ್ತೇವೆ." ಎಂದು ಪಿಶಾಚಿಗಳೆಲ್ಲಾ ಮುಷ್ಟಿಗೆ ಮುಷ್ಟಿ, ತೋಳಿಗೆ ತೋಳು ಹೊಡೆದು ಒಂದರ ಮೇಲೊಂದು ಯುದ್ಧಕ್ಕೆ ತೊಡಗಿದುವು. ಆದರಿಂದ ಇನ್ನೊಂದು ಬಗೆಯ ಕೋಲಾಹಲವೆದ್ದಿತು.

"ಭೇಷ್! ಈ ಕ್ರಮ ಚೆನ್ನಾಗಿದೆ!" ಎಂದು ಪಿಂಗಳನು ಚಪ್ಪಾಳೆ ತಟ್ಟಿ ನೋಡುತ್ತಿದ್ದನು.

ಪಿಶಾಚಿಗಳು ನಾಯಕತ್ವಕ್ಕಾಗಿ ಪ್ರಾರಂಭಿಸಿದ ಹೋರಾಟ ಬೇಗನೇ ಮುಗಿಯಲಿಲ್ಲ. ಅವು ಕ್ಷಣ ಕ್ಷಣಕ್ಕೂ ಬೇರೆಬೇರೆ ರೂಪಗಳನ್ನು ಧರಿಸುತ್ತ ಯುದ್ಧ ಮಾಡುತ್ತಿದ್ದುವು. ಹುಲಿರೂಪವನ್ನು ನೆಲಸಮ ಮಾಡಲು ಆನೆಗಳ ರೂಪ ಧರಿಸಿದರೆ, ಆನೆ ಗಳನ್ನು ಹತಮಾಡಲು ಕೆಲವು ಪಿಶಾಚಿಗಳು ಸಿಂಹಾ ಕೃತಿಗಳನ್ನು ಧರಿಸಿದುವು. ಕೆಲವು ನಾಗರಹಾವು ಗಳಾದರೆ, ಕೆಲವು ಗರುಡಪಕ್ಷಿಗಳಾದುವು. ಪಿಂಗಳನಿಗೆ ಕಣ್ಣಿಗೆ ಹಬ್ಬದಂತಹ ಆಟವೆನಿಸಿತು.

ಹೀಗೆ ಸ್ವಲ್ಪ ಹೊತ್ತು ವಿಕೃತರೀತಿಯ ಘೋರ ಸಂಗ್ರಾಮವು ನಡೆದು, ಅಳಿದುಳಿದ ಪಿಶಾಚಿಗಳು ಕಟ್ಟಕಡೆಗೆ ತಮ್ಮ ನಾಯಕನಾಗಿ ದೊಡ್ಡದೊಂದು ಭೂತವನ್ನು ಆರಿಸಿ ಜೈಜೈ ಎಂದು ಘೋಷಿಸಿದುವು. ಅಂತೂ ಅವುಗಳಿಗೆಲ್ಲ ಒಬ್ಬ ನಾಯಕನು ಏರ್ಪಟ್ಟು ದನ್ನು ನೋಡಿ ಪದ್ಮಪಾದನಿಗೆ ಬಹಳ ಸಂತೋಷ ವಾಯಿತು. ಆವನು ಮುಂದೆ ಹೋಗಿ ಪಿಶಾಚಿಗಳ ನಾಯಕನಾದ ಮಹಾಭೂತನಿಗೆ ಆಶೀರ್ವಾದ ಮಾಡಿ, "ಸರಿ. ಇನ್ನು ನೀವೆಲ್ಲಾ ಸ್ವೇಚ್ಛೆಯಾಗಿ ಈ ಭಲ್ಲೂಕ ಪರ್ವತ ಪ್ರಾಂತದಲ್ಲಿ ಪ್ರಭಾವಶಾಲಿ ಗಳಾಗಿರಿ. ಅಹಂಕಾರಪಟ್ಟು ಊರೊಳಗೆ ಬಂದು ಮಾನವರ ಮೇಲೆ ನಿಮ್ಮ ಚೇಷ್ಟೆ ತೋರಿಸಿದರೆ ಜಾಗ್ರತೆ! ಅದುವರೆಗೆ ನಿಮ್ಮ ತಂಟೆಗೆ ನಾನಾಗಲಿ, ಪಿಂಗಳನಾಗಲಿ ಬರುವುದಿಲ್ಲವೆಂದು ಅಭಯ ನೀಡು ತ್ತೇನೆ. ಇನ್ನು ನಿಮ್ಮ ಪಾಡಿಗೆ ಹೊರಟು ಹೋಗಿ ಬಿಡಿರಿ!" ಎಂದನು.

ಪಿಶಾಚಿಗಳೆಲ್ಲ ಜಯಜಯಾಕಾರ ಮಾಡುತ್ತ, ತಮ್ಮ ಹೊಸ ನಾಯಕ ಹೆಬ್ಬೂತವನ್ನು, ಹೆಗಲುಗಳ ಮೇಲೆ ಏರಿಸಿಕೊಂಡು ಪರ್ವತಗಳ ಮೇಲೆ ಹೊರಟು ಹೋದುವು.

ಸ್ವಲ್ಪ ಹೊತ್ತು ಅವುಗಳನ್ನು ನೋಡುತ್ತಾ ಇದ್ದ ಪದ್ಮಪಾದನು ಪಿಂಗಳನ ಕಡೆಗೆ ತಿರುಗಿ, "ಪಿಂಗಳಾ. ನಾವು ಅಷ್ಟಕಷ್ಟಗಳನ್ನೆಲ್ಲ ದಾಟಿ ನಮಗೆ ಬೇಕಾದ

ಶಕ್ತಿಗಳನ್ನೆಲ್ಲಾ ಸಂಪಾದಿಸಿಕೊಂಡಿದ್ದೇವೆ. ಇದರಲ್ಲಿ ನೀನು ಮಾಡಿದ ಸಹಾಯವನ್ನು ನಾನು ಎಂದಿಗೂ ಮರೆಯಲಾರೆನು. ನೀನು ನಿನ್ನ ಮನೆಗೆ ಹೋಗುವ ಮೊದಲು, ನನ್ನ ಮನೆಯಲ್ಲಿ ಕೆಲವು ದಿನಗಳವರೆಗೆ ಅತಿಥಿಯಾಗಿರಬೇಕು. ತಾಯಿಯನ್ನು ನೋಡಲು ಅವಸರವೇನಿಲ್ಲವಷ್ಟೆ? ಸಂತೋಷವಾಗಿ ಒಪ್ಪುವೆಯಾ?" ಎಂದು ಕೇಳಿದನು,

ಹಾಗೆಯೇ ಆಗಲೆಂದು ಪಿಂಗಳನು ಒಪ್ಪಿದನು. ಪದ್ಮಪಾದನು ಒಂದು ಹಿಡಿ ಮಣ್ಣು ತೆಗೆದು ಮಂತ್ರಿಸಿ ಭೂಮಿಯ ಮೇಲೆ ಚೆಲ್ಲಿದನು. ಕೂಡಲೇ ಪಿಶಾಚ ಗಾರ್ದಭಗಳೆರಡು ಲಟಲಟನೆ ನೆಲವನ್ನು ಸೀಳಿಕೊಂಡು ಓಂಡ್ರಿಸುತ್ತಾ, ಭೂಮಿಯ ಮೇಲೆ ಹಾರಿ ನಿಂತವು,

ಪದ್ಮಪಾದನು ಒಂದು ಪಿಶಾಚ ಗಾರ್ದಭದ ಮೇಲೆ ಹಾರಿ ಕುಳಿತನು. ಪಿಂಗಳನು ಎರಡನೇ ಗಾರ್ದಭದ ಹತ್ತಿರ ಹೋಗುವುದನ್ನು ನೋಡಿ, ಭಲ್ಲೂಕಕೇತು ಅವನ ಮುಂದೆ ಮೊಣಕಾಲೂರಿ, "ಪ್ರಭೂ! ನೀವು ನನ್ನ ಹೆಗಲಿನ ಮೇಲೆ ಕುಳಿತುಕೊಳ್ಳಿ. ನಾನು ನಿಮ್ಮ ಸದಾ ಸೇವಕನು! ಹೂವಿನ ಹಾಗೆ ಎತ್ತಿಕೊಂಡು ಹೋಗುತ್ತೇನೆ." ಎಂದನು.

ಪಿಂಗಳನು ಪದ್ಮಪಾದನ ಅನುಮತಿಯಂತೆ, ಮುಗುಳು ನಗುತ್ತ, ಭಲ್ಲೂಕಕೇತುವಿನ ಹೆಗಲ ಮೇಲೇರಿ ಕುಳಿತನು. ಮರುಕ್ಷಣದಲ್ಲಿ ಪದ್ಮಪಾದನ ಗಾರ್ದಭವು ನಾಲ್ಕಾರು ಹೆಜ್ಜೆ ನೆಲದಲ್ಲಿಟ್ಟು ಆಕಾಶಕ್ಕೇರಿತು. ಅದರ ಹಿಂದೆಯೇ ಭಲ್ಲೂಕಕೇತು ಕೂಡಾ ಆಕಾಶಕ್ಕೆ ಹಾರಿ ರೊಯ್ಯನೆ ಹೋದನು. ರಾಹುತರಿಲ್ಲದ ಎರಡನೇ ಪಿಶಾಚ ಗಾರ್ದಭವು ಅವರಿಬ್ಬರ ಹಿಂದೆ ಸುಮ್ಮನೆ ಹಾರುತ್ತಾ ಹೋಗತೊಡಗಿತು.

ಕಾಡುಗಳು, ಗುಡ್ಡಗಳು, ನದಿಗಳು ಹಿಂದೆ ಹಿಂದೆ ಹೋದುವು. ಸೂರ್ಯನು ಮುಳುಗುವ ವೇಳೆ ಹತ್ತಿರ ಹತ್ತಿರ ಆಗುತ್ತಿರಲು, ಅವರು ಒಂದಾನೊಂದು ನಗರವನ್ನು ಸಮೀಪಿಸುತ್ತಿದ್ದರು. ಬೊಂಬೆ ಮನೆಗಳ ಹಾಗೆ ಕೆಳಗೆ ಕಾಣುವ ನಗರವನ್ನು



ಪದ್ಮಪಾದನು ಪಿಂಗಳನಿಗೆ ತೋರಿಸುತ್ತ, "ಆಗೋ ನೋಡು ! ಅಲ್ಲಿ ಕಾಣುವ ಗುಡ್ಡವನ್ನು ಬಳಸಿಕೊಂಡು ಹಾವಿನ ಹಾಗೆ ಹರಿಯುತ್ತಿರುವ ಬೆಟ್ಟದ ನದಿಯ ಬದಿಯಲ್ಲಿ, ಆ ಮರಗಳ ಗುಂಪು ಕಾಣುತ್ತದಷ್ಟೆ ? ಅದರಲ್ಲಿ ಹಾಲುಗಲ್ಲುಗಳ ಮನೆ ಹೇಗೆ ಹೊಳೆಯುತ್ತಾ ಇದೆ ! ಅದೇ ನನ್ನ ಪಿತೃಗೃಹ ! ನನ್ನ ಅಣ್ಣಂದಿರಿಬ್ಬರೂ ಶುಕಸರೋವರಕ್ಕೆ ಬಲಿಯಾಗಿ ಹೋದರು. ಈಗ ನಾನೇ ಆ ಮನೆಗೆ ಅಧಿಪತಿ ! ನನ್ನ ತಂದೆ ಬಿಟ್ಟುಹೋದ ಮಂತ್ರ ಗ್ರಂಥವು ಕೂಡಾ ಇನ್ನು ನನ್ನದೇ !" ಎಂದನು ಉತ್ಸಾಹದಿಂದ.

ಅವನ ಸಂಜ್ಞೆಯಿಂದ ಅವನು ಏರಿಕೊಂಡಿದ್ದ ದೆವ್ವದ ಕತ್ತೆ, ಕೆಳಗಿಳಿಯುತ್ತಾ, ಎತ್ತರ ಪ್ರಾಕಾರಗಳಿರುವ ಪದ್ಮಪಾದನ ಮನೆಯ ಮುಂದೆ ನೆಲಕ್ಕಿಳಿದು ನಿಂತಿತು. ಭಲ್ಲೂಕಕೇತುವೂ ಅಲ್ಲಿಯೇ ನೆಲಕ್ಕಿಳಿದು ಪಿಂಗಳನನ್ನು ಇಳಿಸಿದನು. ಪ್ರಾಕಾರದ ಮುಂಭಾಗದಲ್ಲಿರುವ ದೊಡ್ಡ ಕಬ್ಬಿಣದ ಬಾಗಿಲ ಮುಂದೆ ಇಬ್ಬರು ನೀಗ್ರೋ ಗುಲಾಮರು ಕಾವಲು ಕಾಯುತ್ತಿದ್ದರು. ಪದ್ಮಪಾದನನ್ನು ನೋಡಿದ ಕೂಡಲೇ ಅವರು ತಮ್ಮ ಕೈಗಳಲ್ಲಿದ್ದ ಶೂಲವನ್ನು ಮೇಲೆತ್ತಿ "ಜೈ ಪದ್ಮಪಾದಾ!" ಎಂದು ಜಯಘೋಷ ಮಾಡಿದರು.

ಮೊದಲು ಆ ಬಾಗಿಲಿನಲ್ಲಿ ಪದ್ಮಪಾದನು ಒಳಗೆ ಹೊಕ್ಕನು. ಅವನನ್ನು ಅನುಸರಿಸಿ ಪಿಂಗಳನೂ ನಡೆದನು. ದೆವ್ವದ ಕತ್ತೆಗಳೆರಡೂ ಮಾಯವಾದುವು. ಭಲ್ಲೂಕಕೇತು ಒಂದು ಬದಿಯಲ್ಲಿ ಕೈಕಟ್ಟಿ ನಿಂತನು, ಪದ್ಮಪಾದನೂ ಪಿಂಗಳನೂ ಮನೆಯ ಮುಂದಿರುವ ಮರಗಳ ಮಧ್ಯದಲ್ಲಿ ನಡೆದು ಭವನವನ್ನು ಸಮೀಪಿಸಿದರು. ಆಗ ಮೆಟ್ಟಿಲಿನ ಹತ್ತಿರ ಮಾರುದ್ದದ ಬಿಳಿಗಡ್ಡದಿಂದೊಪ್ಪುವ ಒಬ್ಬ ವೃದ್ಧನು ಇದಿರಾದನು, ಪದ್ಮಪಾದನು ಅವನನ್ನು ನೋಡಿದ ಕೂಡಲೇ ಬಾಗಿ ಪ್ರಣಾಮಮಾಡಿ, ಹಿಂದೆ ನೋಡಿ ಪಿಂಗಳನೊಂದಿಗೆ, "ಪಿಂಗಳಾ! ಇವರೇ ನಮ್ಮ ತಂದೆಯ ಗುರುಗಳು !" ಎಂದನು.

ಪಿಂಗಳನು ಕೂಡಾ ಆತನಿಗೆ ಬಾಗಿ ನಮಸ್ಕಾರ ಮಾಡಿದನು. ವೃದ್ಧನು ಪಿಂಗಳನನ್ನು ಸೂಕ್ಷ್ಮವಾಗಿ





ಪರಿಶೀಲಿಸಿ ನೋಡಿ, ಪದ್ಮಪಾದನೊಂದಿಗೆ, "ಪದ್ಮಪಾದಾ! ಈ ಹುಡುಗನು ಯಾರು? ಹೆಸರನ್ನೇನೋ ಹೇಳಿದಿ. ಅವಂತೀ ನಗರದ ಜಾಲರಿಯಲ್ಲವಷ್ಟೆ?" ಎಂದು ಕೇಳಿದನು.

"ಆ ಜಾಲರಿ ಹುಡುಗನೇ ಇವನು. ನಮಗೆ ಬೇಕಾದವನಾಗಿದ್ದ ಪಿಂಗಳನೆಂದರೆ ಇವನೇ!" ಎಂದನು ಪದ್ಮಪಾದ. ಅದನ್ನು ಕೇಳಿ ವೃದ್ಧನು ಪರಮಾನಂದಗೊಂಡು, "ಹೌದೆ? ಹಾಗಾದರೆ ನೀನು ಮಹಾಮಾಯನ ಸಮಾಧಿಯಲ್ಲಿದ್ದ ಅಪೂರ್ವ ಶಕ್ತಿಗಳೆಲ್ಲವನ್ನೂ ವಶಪಡಿಸಿಕೊಂಡಿರುವೆಯೆಂದಾಯಿತು" ಎಂದನು.

ಪದ್ಮಪಾದನು ಬಾಯಿಯಿಂದ ಏನೂ ಹೇಳದೆ, ತನ್ನ ಬೆರಳಿನಲ್ಲಿರುವ ಉಂಗುರವನ್ನೂ, ವಜ್ರಖಚಿತ ಹಿಡಿಕೆಯ ಕತ್ತಿಯನ್ನೂ, ಭೂಗೋಳವನ್ನೂ ವೃದ್ಧನಿಗೆ ತೋರಿಸಿದನು. ವೃದ್ಧನು ಅವುಗಳನ್ನು ಸ್ವಲ್ಪ ಹೊತ್ತು ಪರೀಕ್ಷಿಸಿ ನೋಡಿ, "ಪದ್ಮಪಾದಾ, ಇನ್ನು ನಿನ್ನನ್ನು ಜಯಿಸುವಂತಹ ಮಾಂತ್ರಿಕನು ಈ ಪ್ರಪಂಚದಲ್ಲಿ ಇನ್ನೊಬ್ಬನಿಲ್ಲ. ನಿನ್ನ ತಂದೆ ಬಹಳ ಪ್ರಯತ್ನಪಟ್ಟು ಕೂಡಾ ಸಾಧಿಸಲಾಗದ ಕೆಲಸವನ್ನು ನೀನು ಸಾಧಿಸಿದವನಾದೆ. ಆ ವಿಧವಾಗಿ ನಿನ್ನ ತಂದೆಯ ಆತ್ಮಕ್ಕೆ ಶಾಂತಿ ದೊರಕುವಂತೆ ಮಾಡಿದ ಪುಣ್ಯ ನಿನ್ನದಾಯಿತು. ಧನ್ಯನಾದೆಯಪ್ಪ" ಎಂದನು.

"ಇನ್ನು ನನ್ನ ತಂದೆ ಬಿಟ್ಟು ಹೋದ ಮಂತ್ರ ಗ್ರಂಥದ ಪೂರ್ತಿ ಹಕ್ಕುದಾರ ನಾನೇ ತಾನೆ?" ಎಂದು ಪದ್ಮಪಾದನು ಕೇಳಿದನು.

ವೃದ್ಧನು ಮುಗುಳು ನಗುವನ್ನು ತೋರಿಸಿ, "ಪ್ರಪಂಚವನ್ನೇ ಜಯಿಸುವಂತಹ ಎಲ್ಲಾ ಶಕ್ತಿಗಳೂ ಈಗ ನಿನ್ನ ಸ್ವಾಧೀನದಲ್ಲಿರುವಾಗ, ಆ ಮಂತ್ರಗ್ರಂಥದಿಂದ ಹೊಸದಾಗಿ ನಿನಗೇನಾಗ ಬೇಕಾಗಿದೆ? ನೀನು ಸಂಪಾದಿಸಿದ ಶಕ್ತಿಗಳಿಗಿಂತ ಹೆಚ್ಚಿಗೆ ಅದರಲ್ಲಿ ಏನೂ ಇಲ್ಲ. ತಾನು ಸಾಧಿಸಲಾಗದವುಗಳನ್ನು ತನ್ನ ಮಕ್ಕಳಿಂದ ಸಾಧಿಸಬೇಕೆಂಬುದೇ ನಿನ್ನ ತಂದೆಯ ಕೊನೆಯ ಆಸೆ. ಸಾಯುವ ಮೊದಲು ಆ ಮಂತ್ರಗ್ರಂಥವನ್ನು ಕುರಿತು ಅಂತಹ ಷರತ್ತುಗಳನ್ನು ಇಟ್ಟಿದ್ದಾನೆ. ಮಹಾಮಾಯನು ನಿನ್ನ ತಂದೆಗೆ ಪ್ರಬಲ ವಿರೋಧಿ. ನೀನು ಅವನನ್ನೇ ಜಯಿಸಿದಂತಾಯಿತು. ಇನ್ನೇನು ಕಡಿಮೆ ನಿನಗೆ?" ಎಂದನು.

ವೃದ್ಧನು ಹೇಳಿದ ಮಾತನ್ನು ಕೇಳಿದ ಮೇಲೆಯಷ್ಟೇ ಪದ್ಮಪಾದನಿಗೆ ತನ್ನ ತಂದೆಯ ಅಭಿಪ್ರಾಯವೇನೆಂದು ಅರ್ಥವಾಯಿತು. ತನ್ನ ಪ್ರಬಲ ವಿರೋಧಿಯಾದ ಮಹಾಮಾಯನನ್ನು ಶಕ್ತಿ ಹೀನನನ್ನಾಗಿ ಮಾಡಲಿಕ್ಕಾಗಿಯೇ ತಂದೆ ತನ್ನನ್ನು ಉಪಯೋಗಿಸಿದ್ದಾನೆಂಬುದು ಸ್ಪಷ್ಟವಾಯಿತು. ಸಮರ್ಥರಾದ ಇಬ್ಬರು ಅಣ್ಣಂದಿರ ಬಲಿಯಾದ ಮೇಲೆ ವಿಜಯವು ತನ್ನ ಪಾಲಿಗೆ ಬಂದಿದೆ.

ಪದ್ಮಪಾದನು ಇಂತಹ ಆಲೋಚನೆಗಳಲ್ಲಿ ತೊಳಲಿಕೊಂಡಿರುವಾಗ, ವೃದ್ಧನು ಪಿಂಗಳನ ಭುಜ



ವನ್ನು ಆಪ್ಯಾಯತೆಯಿಂದ ತಟ್ಟುತ್ತ, "ಅವಂತಿ ನಗರದ ಜಾಲರಿ ಹುಡುಗನಾದ ನೀನು, ಪದ್ಮ ಪಾದನಿಗೆ ಸಿಕ್ಕಿದ್ದೊಂದು ಅದೃಷ್ಟ. ನಿನ್ನಿಂದ ಒಂದು ಮಹಾ ಕಾರ್ಯವು ಸಾಧಿಸಲ್ಪಟ್ಟಿತು. ಇದಕ್ಕಾಗಿ ನಾನು ನಿನ್ನನ್ನು ಮನಸಾರೆ ಅಭಿನಂದಿಸುತ್ತೇನೆ" ಎಂದನು.

ಪಿಂಗಳನು ವೃದ್ಧನ ಪಾದ ಹಿಡಿದು ವಂದಿಸಿದನು. ಅಲ್ಲಿ ಪಿಂಗಳನು ಒಂದು ವಾರದವರೆಗೆ ಪದ್ಮಪಾದನ ಅತಿಥಿಯಾಗಿದ್ದ ಮೇಲೆ, ತನ್ನ ಮನೆಗೆ ಹೋಗಲು ಸಿದ್ಧನಾದನು. ಆಗ ಪದ್ಮಪಾದನು ಅವನಿಗೆ ಬೆಲೆ ಬಾಳುವ ದುಸ್ತುಗಳನ್ನೂ, ಬಂಗಾರವನ್ನೂ, ರತ್ನ ಗಳನ್ನೂ ಬಹುಮಾನವಾಗಿ ಕೊಟ್ಟನು. ಪಿಂಗಳನು ಬಹಳ ಕೃತಜ್ಞತೆಯಿಂದ ಅವುಗಳನ್ನೆಲ್ಲ ಸ್ವೀಕರಿಸಿದನು.

ಅಷ್ಟಕ್ಕೆ ತೃಪ್ತನಾಗದೆ ಪದ್ಮಪಾದನು ಅವನನ್ನು ಕಳುಹಿಸಿಕೊಡಲು ಪ್ರಾಕಾರದ್ವಾರದವರೆಗೂ ಹೋಗಿ, ಅವನ ಮುಂದೆ, ಮಹಾ ಮಾಯನ ಸಮಾಧಿಯೊಳ ಗಿಂದ ತಂದು ಕೊಂಡ ಮೂರು ವಸ್ತುಗಳನ್ನೂ ಪಿಂಗಳನಿಗೆ ತೋರಿಸಿ, "ಇಗೋ ಪಿಂಗಳಾ! ಇವು ಗಳಲ್ಲಿ ನಿನಗೆ ಬೇಕಾಗಿರುವಂತಹ ಯಾವುದಾದರೂ ಒಂದನ್ನು ಸಂತೋಷವಾಗಿ ನಿನಗೆ ಕೊಡುತ್ತೇನೆ. ತೆಗೆದುಕೋ" ಎಂದನು.

ಪಿಂಗಳನು ಅದಕ್ಕೇನೂ ಅಂಗೀಕಾರ ತೋರಲಿಲ್ಲ. ಅವನು ಮುಗುಳು ನಗುತ್ತ "ಅಯ್ಯಾ, ಪದ್ಮ ಪಾದರೇ! ಮಹಾಶಕ್ತಿ ಸಂಪನ್ನಗಳಾಗಿರುವ ಈ ವಸ್ತುಗಳು ಸಾಮಾನ್ಯ ಜಾಲರಿಯಾದ ನನ್ನ ಬಳಿ ಯಲ್ಲಿರುವುದಕ್ಕಿಂತ, ನಿಮ್ಮ ಬಳಿಯಲ್ಲಿರಬೇಕಾದುದೇ ಚೆನ್ನ. ಇವುಗಳಲ್ಲಿ ಒಂದಕ್ಕೂ ನಾನು ಅರ್ಹನಲ್ಲ. ನೀವು ಬೇರೆ ವಿಧವಾಗಿ ತಿಳಿದುಕೊಳ್ಳದಿದ್ದರೆ ನನಗೆ ಅಗತ್ಯವಾದಂತಹ ಒಂದೇ ಒಂದು ವಸ್ತು ನಿಮ್ಮ ಹತ್ತಿರ ಇದೆ." ಎಂದು ಮುಂದೆ ಹೇಳದೆ ಸುಮ್ಮನಾದನು.

"ಅದೇನಪ್ಪಾ. ಕೇಳು, ನಿಃಶಂಕೆಯಿಂದ ಕೇಳು. ಕೊಟ್ಟುಬಿಡುತ್ತೇನೆ" ಎಂದನು ಪದ್ಮಪಾದ.

"ನಿಮ್ಮ ಹತ್ತಿರ ಮಹತ್ವವಾದೊಂದು ಚೀಲವಿದೆ ಯಲ್ಲವೆ? ಅಡಿಗೆ ಮಾಡುವ ಕಷ್ಟವೇನೂ ಇಲ್ಲ ದಂತೆ, ಸಕಲ ಪದಾರ್ಥಗಳೂ ಅದರೊಳಗಿನಿಂದ ಹೊರಡುತ್ತವೆ. ಅಂತಹ ವಸ್ತು ನನ್ನ ಹತ್ತಿರವಿದ್ದ ಪಕ್ಷದಲ್ಲಿ, ವೃದ್ಧಳಾದ ನನ್ನ ತಾಯಿಗೆ ದಿನಾ ಅಡಿಗೆ ಮಾಡಬೇಕಾದ ಕಷ್ಟ ತಪ್ಪಿ, ಬಹಳ ಸಂತೋಷ ಪಡುತ್ತಾಳೆ." ಎಂದನು ಪಿಂಗಳ.

"ಅದುವೋ! ಬಹಳ ಸಂತೋಷದಿಂದ ಕೊಡು ತ್ತೇನೆ," ಎಂದು ಹೇಳಿ ಪದ್ಮಪಾದನು ಆ ಚೀಲ ವನ್ನು ತಂದು ಪಿಂಗಳನಿಗೆ ಕೊಟ್ಟುಬಿಟ್ಟನು.

ಪಿಂಗಳನು ವೃದ್ಧ ಮಂತ್ರವೇತ್ತ ಗುರುವಿಗೂ, ಪದ್ಮಪಾದನಿಗೂ ನಮಸ್ಕಾರಮಾಡಿ, ಭಲ್ಲೂಕಕೇತುವಿನ ಹೆಗಲ ಮೇಲೇರಿ ಕುಳಿತನು. ಮತ್ತೆ ಅವನ ಪ್ರಯಾಣ ಆಕಾಶ ಮಾರ್ಗದಲ್ಲಿ ಸಾಗಿತು.

ದಟ್ಟವಾದ ಮೇಘಗಳಿಂದ ಮುಚ್ಚಲ್ಪಟ್ಟ ಆಕಾಶ ಭಾಗದೊಳಗೆ ಭಲ್ಲೂಕಕೇತು ತೂರಿಕೊಂಡು ಹಾರುತ್ತ, ಮಧ್ಯಾಹ್ನವಾಗುವ ಹೊತ್ತಿಗೆ ಅವಂತೀನಗರದ ಮೇರೆಯ ಹತ್ತಿರ ಹೋದನು. ಪಿಂಗಳನು ಆ ನಗರವನ್ನೂ, ಅದರ ಕೋಡಿಯಲ್ಲಿ ಕಾಣುವ ತನ್ನ ಗುಡಿಸಲು ಮನೆಯನ್ನೂ ನೋಡಿದನು. ಅದು ಕಣ್ಣಿಗೆ ಬಿದ್ದ ಕೂಡಲೇ ಅವನು ಭಲ್ಲೂಕ ಕೇತುವಿನ ಬೆನ್ನು ತಟ್ಟಿ, "ಭಲ್ಲೂಕಾ, ಇನ್ನು ಮುಂದೆ ಹೋಗ ಬೇಡ. ಅಲ್ಲಿ ಕಾಣುವ ಮರಗಳ ಮಧ್ಯದಲ್ಲಿ ಇಳಿಸಿ ಬಿಡು" ಎಂದನು ಆತುರದಿಂದ.

ಭಲ್ಲೂಕಕೇತು ಪಿಂಗಳನು ತೋರಿಸಿದ ಸ್ಥಳದಲ್ಲಿ, ಅವಂತಿನಗರದ ಮೇರೆಯಲ್ಲಿರುವ ಒಂದಾನೊಂದು ಮರಗಳ ತೋಪಿನಲ್ಲಿ ನೆಲಕ್ಕೆ ಇಳಿದನು.

ಪಿಂಗಳನು ಅವನ ಹೆಗಲಿನಿಂದ ನೆಲಕ್ಕಿಳಿದು, ನಗರದ ಕಡೆಗೆ ನೋಡಿ, "ಭಲ್ಲೂಕಾ, ನಿನ್ನನ್ನು ಈ ರೂಪದಲ್ಲಿ ನಗರದೊಳಗೆ ಕರೆದುಕೊಂಡು ಹೋಗುವು ದೆಂದರೆ, ಬಹಳ ಉಪದ್ರಗಳಿಗೆ ಕಾರಣವಾದೀತು. ಜನರೆಲ್ಲಾ ಹೆದರಿ ಮೂರ್ಛೆಬಿದ್ದಾರು. ನನ್ನ ತಾಯಿ ಯಂತೂ ನಿನ್ನನ್ನು ನೋಡಿದರೆ....ಅಬ್ಬಾ! ಬೇಡ! ಇದಕ್ಕೇನು ದಾರಿ?" ಎಂದು ಕೇಳಿದನು.

ಪಿಂಗಳನ ತೊಳಲಾಟದ ಕಾರಣವನ್ನು ಊಹಿಸಿ ಕೊಂಡ ಭಲ್ಲೂಕ ಕೇತು ನಗಾಡಿ, "ಪ್ರಭೂ! ಚಿಂತಿಸ ಬೇಡಿ. ನೀವು ಒಬ್ಬರೇ ನಗರದೊಳಗೆ ಹೋಗಿರಿ. ನನ್ನ ಸಹಾಯ ಬೇಕಾದಾಗ ನನ್ನ ಮರ್ಮ ಮಂತ್ರ ಪಠಿಸಿರಿ. ಕೂಡಲೇ ನಾನು ನಿಮ್ಮ ಸಾನ್ನಿಧ್ಯದಲ್ಲಿರು ತ್ತೇನೆ" ಎಂದು ಅವನ ಕಿವಿಯಲ್ಲಿ ಅದೇನೋ ತನ್ನ ಮರ್ಮ ಮಂತ್ರವನ್ನು ಉಪದೇಶಮಾಡಿ, ಅದೃಶ್ಯನಾದನು.

ಪಿಂಗಳನು ಪದ್ಮಪಾದನು ಕೊಟ್ಟ ಧನರಾಶಿಯ ಮೂಟೆಯನ್ನು ಹೊತ್ತುಕೊಂಡು ತನ್ನ ಮನೆಯಕಡೆಗೆ ನಡೆದನು. ಅವನು ಮನೆಯ ಹತ್ತಿರ ಹೋದಾಗ, ಸೊರಗಿ ಕಡ್ಡಿಯಾಗಿದ್ದ ಅವನ ತಾಯಿ, ಬಾಗಿಲಹತ್ತಿರ ಕುಳಿತುಕೊಂಡು, ಶುಷ್ಕನೀರಸ ಕಂಠದಿಂದ "ಅಯ್ಯಾ! ಧರ್ಮದಾತರೇ! ಈ ಮುದುಕಿಗೆ ಏನಾದರೂ ಧರ್ಮಮಾಡಿರಪ್ಪಾ! ಹಸಿವೆ ತಾಳಲಾರೆನಯ್ಯಾ! ಯಾರೂ ದಿಕ್ಕಿಲ್ಲದವಳು" ಎಂದು ದೀನಾತಿದೀನತೆ ಯಿಂದ ಕೈಚಾಚಿ ಬೇಡಿಕೊಂಡಿರುವುದು ಅವನ ಕಣ್ಣಿಗೆ ಬಿತ್ತು.

ಪಿಂಗಳನು ಆ ದಾರುಣ ದೃಶ್ಯ ನೋಡಿ ಶರೀ ರಾದ್ಯಂತ ನಡುಗುತ್ತ, ದುಃಖವನ್ನು ತಾಳಲಾಗದೆ, ಬೀಳದಂತೆ ಸಮಾಳಿಸಿಕೊಂಡು "ಅಮ್ಮಾ, ಏನಿದೂ? ನಿನಗೆ ಇಂಥಾ ಕೆಟ್ಟ ಗತಿ ಹೇಗೆ ಬಂತು?" ಎಂದು ತಾಯಿಯ ಕಡೆಗೆ ಆತುರದಿಂದ ಓಡಿದನು.

—(ಇನ್ನೂ ಇದೆ)






## ೧೦

[ ಭಲ್ಲೂಕಕೇತು ಪಿಶಾಚ ಗಣಗಳಿಗೆ ನಾಯಕನಾಗಿರಲು ಒಪ್ಪಿಕೊಳ್ಳಲಿಲ್ಲ. ಬೇರೆ ಉಪಾಯವೇನಿಲ್ಲದೆ ಪದ್ಮಪಾದನು ತನ್ನ ದೇಶಕ್ಕೆ ಹೊರಟನು. ಅವನೊಂದಿಗೆ ಹೊರಟ ಪಿಂಗಳನು, ಪದ್ಮಪಾದನ ಮನೆಯಲ್ಲಿ ಒಂದು ವಾರ ಅತಿಥಿಯಾಗಿದ್ದು, ಆಮೇಲೆ ಭಲ್ಲೂಕಕೇತುವಿನ ಮೇಲೇರಿ ತನ್ನ ಮನೆಗೆ ತಲಪಿದನು. ನೆನೆಸಿದಾಗ ಬರುವೆನೆಂದು ಭಲ್ಲೂಕಕೇತು ಮಾಯವಾಗಿದ್ದನು. ಪಿಂಗಳನು ಭಿಕ್ಷುಕಿಯಾಗಿದ್ದ ತನ್ನ ತಾಯಿಯನ್ನು ನೋಡಿದನು. ]

ತನ್ನ ತಾಯಿಯ ಪರಮ ದೀನಾವಸ್ಥೆಯನ್ನೂ ಅವಳ ಸೊರಗಲು ಶರೀರವನ್ನೂ ನೋಡಿ ಪಿಂಗಳನು ನಿರ್ವಿಣ್ಣನಾಗಿ, ನಡುಗುವ ಕಂಠದಿಂದ ಕರೆದ ಶಬ್ದ ಕೇಳಿ ತಾಯಿ ಅವನನ್ನು ನೋಡಿ, ಗುರುತು ಹಿಡಿದು ತಬ್ಬಿಬ್ಬಾದಳು. ಪುಳಕ್ಕನೆ ಉಕ್ಕುವ ಕಣ್ಣೀರಿನೊಂದಿಗೆ ಅವಳು ನಡುಗುತ್ತಾ, ಎದ್ದು, "ಬಂದೆಯಾ ಮಗಾ! ಎಷ್ಟು ಕಾಲದ ಮೇಲೆ ನಿನ್ನನ್ನು ನೋಡಿದೆ!" ಎಂದು ಪಿಂಗಳನನ್ನು ತಬ್ಬಿಕೊಂಡಳು.

ಪಿಂಗಳನು ಅವಳನ್ನು ಸಮಾಜಾಯಿಸುತ್ತಾ, "ಅಮ್ಮಾ, ನಿನ್ನ ಸ್ಥಿತಿ ಇಷ್ಟೊಂದು ನಿಕೃಷ್ಟವಾಯಿತೇಕೆ? ನಾನು ಪ್ರಯಾಣ ಹೊರಡುವ ಮೊದಲು ನಿನ್ನ ಕೈಗೆ ಸಾವಿರ ಮೊಹರೀ ಕೊಟ್ಟೆನಲ್ಲವ? ಅದೆಲ್ಲಾ ಏನಾಯಿತಮ್ಮಾ? ಕಳ್ಳರು ಗಿಳ್ಳರು ಬಿದ್ದು ದೋಚಿಕೊಂಡರೇ? ಕೇಳುವವರಿಲ್ಲದೆ ಹೋದರೇ? ನಿನ್ನ ಅವಸ್ಥೆ ಹೀಗಾಗುವಾಗ ಅಣ್ಣಂದಿರಿಬ್ಬರೂ ಎಲ್ಲಿದ್ದಾರೆ?" ಎಂದು ಕೇಳಿದನು.

ತಾಯಿ ಕೂಡಲೇ ಉತ್ತರ ಹೇಳಲಾಗದೆ ತತ್ತರಗೊಂಡಳು. ಕಡೆಗೆ ಅವಳು ಕಣ್ಣೀರು ಒರೆಸಿಕೊಳ್ಳುತ್ತ, "ನಿನ್ನ ಅಣ್ಣಂದಿರಿಂದಾಗಿಯೇ ನನಗೆ ಈ ಕಷ್ಟ ಬಂತು ಕಂದಾ. ನೀನು ಅತ್ತ ಹೋದ ಕೂಡಲೇ



ಅವರಿಬ್ಬರೂ ನನ್ನನ್ನು ಹೊಡೆದು ಬೈದು ಆ ಸಾವಿರ ಮೊಹರಿಗಳನ್ನೂ ಎಳೆದುಕೊಂಡು ಹೋದರು. ಹೋದವರು ಈವರೆಗೂ ತಿರುಗಿ ಬರಲಿಲ್ಲ. ಎಲ್ಲಿಗೆ ಹೋದರು, ಏನಾದರು ಎಂಬುದೊಂದೂ ನಾ ಕಾಣೆನಪ್ಪಾ" ಎಂದಳು.

ತಾಯಿಯ ಮಾತು ಕೇಳಿ ಪಿಂಗಳನು ನಿಶ್ಚೇಷ್ಟಿತನಾದನು. ಹಡೆದ ತಾಯಿಯನ್ನೇ ಹಿಂಸಿಸುವ ಕ್ರೂರಿಗಳಾದ ಅಣ್ಣಂದಿರ ಸಂಗತಿ ತಿಳಿದು ಪಿಂಗಳನು ಬಹಳ ನೊಂದನು. ಒಂದೇ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದವರಿಗೆ, ಅಷ್ಟೊಂದು ಕೆಟ್ಟ ಗುಣ ಹೇಗೆ ಬಂದಿತೆಂದು ಆಶ್ಚರ್ಯಪಟ್ಟನು. ಆದರೂ ತಾನಾಗಿ ತನ್ನ ಸೋದರರನ್ನು ಹತಮಾಡಲು ಪ್ರಯತ್ನಿಸುವುದು ಧರ್ಮವಲ್ಲವೆಂದೇ ಅವನಿಗೆ ತೋರಿತು.

ಪಿಂಗಳನು ಕೃಶಳಾದ ತಾಯಿಯನ್ನು ನಡೆಸಿಕೊಂಡು ಮನೆಯೊಳಗೆ ಹೋಗಿ "ಅಮ್ಮಾ, ಇನ್ನು ನೀನು ದುಃಖಿಪಡಬೇಕಾದ ಅಗತ್ಯವೇ ಇಲ್ಲ. ದೇವರ ದಯದಿಂದ ನಾನು ಎಲ್ಲಾ ಪರೀಕ್ಷೆಗಳಲ್ಲಿಯೂ ಗೆದ್ದು, ಎಷ್ಟೋ ಹಣದೊಂದಿಗೆ ಮನೆಗೆ ಬಂದಿದ್ದೇನೆ. ನಿನ್ನ ಕಷ್ಟಗಳೂ, ನನ್ನ ಕಷ್ಟಗಳೂ ಈ ದಿನದಿಂದ ಮುಗಿದು ಹೋದುವೆಂದು ತಿಳಿ" ಎಂದು ತನ್ನೊಂದಿಗೆ ತಂದ ಚೀಲದೊಳಗಿನಿಂದ ಬೆಲೆಬಾಳುವ ಮುತ್ತು, ರತ್ನ ಬಂಗಾರಗಳನ್ನು ತೆಗೆತೆಗೆದು ತಾಯಿಗೆ ತೋರಿಸಿದನು. ನೆಲದಲ್ಲಿ ದೊಡ್ಡದೊಂದು ರಾಶಿಯಾಯಿತು. ಅದನ್ನೆಲ್ಲಾ ಚೀಲಗಳಲ್ಲಿ ತುಂಬಿಸಿ ಕಟ್ಟಿ ಭದ್ರವಾಗಿಟ್ಟನು.

ತಾಯಿಗಾದ ಆನಂದಕ್ಕೆ ಮೇರೆ ಇಲ್ಲದೆ ಹೋಯಿತು. ಅವಳು ಎರಡು ಕೈಗಳಿಂದಲೂ, ಚೀಲದೊಳಗಿರುವ ವಸ್ತುಗಳನ್ನು ಮುಟ್ಟಿ ಮುಟ್ಟಿ ನೋಡುತ್ತ, "ಕಂದಾ, ನೀನು ಅದೃಷ್ಟಶಾಲಿಯಪ್ಪಾ, ಆದ್ದರಿಂದಲೇ ಎಂತೆಂಥಾ ಕಷ್ಟಗಳನ್ನು ಎದಿರಿಸಿದರೂ ಪಾರಾಗಿ ಬರುವಂತಾಯಿತು. ಈಗ ನನಗೆ ತಾಳಲಾಗದಷ್ಟು ಹಸಿವೆ. ನಿನಗೂ ತುಂಬಾ ಹಸಿವೆಯಾಗಿರಬಹುದು. ಮೊದಲು ಪೇಟೆಗೆ ಹೋಗಿ ಎರಡು ರೊಟ್ಟೀ ತಗೊಂಡು ಬಾರಪ್ಪ. ಚಟ್ನಿಯೋ, ಪಲ್ಯವೋ ಹಾಕಿಸಿಕೊಂಡು ಬೇಗ ಬಂದುಬಿಡು. ಆಮೇಲೆ ಎಲ್ಲಾ ನಿಧಾನವಾಗಿ ಮಾತಾಡುವಾ" ಎಂದಳು.

ತಾಯಿಯ ಮಾತು ಕೇಳಿ ಪಿಂಗಳನಿಗೆ ಫಕ್ಕನೆ ನಗೆ ಬಂದಿತು. ಅವನು ತಾಯಿಯನ್ನು ಗೋಡೆಯ ಬದಿಯಲ್ಲಿರುವ ಪೀಠದ ಮೇಲೆ ಕುಳ್ಳಿರಿಸಿ, ಅವಳ ಇದಿರಿನಲ್ಲಿ ದೊಡ್ಡದೊಂದು ಎಲೆಯನ್ನು ಹರಡಿದನು. ಆಮೇಲೆ ತನ್ನೊಂದಿಗಿದ್ದ ಮಂತ್ರದ ಚೀಲವನ್ನು ಅವಳಿಗೆ ತೋರಿಸುತ್ತ, "ಅಮ್ಮಾ, ನಿನಗೆ ಎಂತಹ ಪದಾರ್ಥಗಳು ಬೇಕೆಂದು ಕಾಣುತ್ತವೋ ನೆನೆಸಿಕೋ, ಬರೇ ಅನ್ನ ಸಾರು ಮಾತ್ರವೇ ಅಲ್ಲ, ಎಂತೆಂತಹ ಭಕ್ಷ್ಯ ಬೇಕೆಂದರೂ ಸರಿಯೇ. ಕ್ಷಣದಲ್ಲೇ ತರಿಸಿಕೊಡುತ್ತೇನೆ. ಭಕ್ಷ್ಯಗಳ ಹೆಸರುಗಳು ನನಗಿಂತ ಹೆಚ್ಚು ನಿನಗೇ ಗೊತ್ತು!" ಎಂದನು.

“ಏನು ಹುಚ್ಚು ಮಾತು ಮಗಾ! ಇನ್ನೂ ನಿನ್ನ ಹುಡುಗಾಟದ ಬುದ್ಧಿ ಬಿಟ್ಟ ಹಾಡಿಲ್ಲ. ಹಸಿವೆಯಿಂದ ಪ್ರಾಣ ಕಡೆಮುಟ್ಟಿಕೊಂಡಿರುವಾಗ ಭಕ್ಷಗಿಕ್ಷಾ ಅಂತ ಹರಟುತ್ತೀಯಾ! ಹುಚ್ಚು ಮಾತು ಕಟ್ಟಿಟ್ಟು ಬೇಗ ಅಂಗಡಿಗೆ ಹೋಗಿ ಎರಡು ರೊಟ್ಟೀ ತೆಗೆದುಕೊಂಡು ಬಾರಪ್ಪ, ಸಾಕು” ಎಂದಳು ತಾಯಿ.



ಪಿಂಗಳನು ತಾಯಿಯ ಪಕ್ಕದಲ್ಲಿ ಚಕ್ಕನೆ ಕುಳಿತು, ಮಂತ್ರಪಠಿಸಿ, ಚೀಲದೊಳಗೆ ತನ್ನ ಕೈಯನ್ನು ತುರುಕಿ ಬಿಸಿ ಬಿಸಿಯಾದ ರೊಟ್ಟಿಗಳನ್ನು ಹೊರಕ್ಕೆ ಎಳೆದನು. ಈ ವಿಚಿತ್ರದಿಂದ ಬಾಯಿ ಬಿದ್ದುಹೋದ ತಾಯಿ, ಬಾಯಿ ಬಿಡುವುದರೊಳಗೆ, ಪಿಂಗಳನು ಚೀಲದೊಳಗಿನಿಂದ ಒಂದರ ಮೇಲೊಂದರಂತೆ, ಭಕ್ಷ್ಯಗಳನ್ನೂ ಮೇಲೋಗರಗಳನ್ನೂ, ಪಾಯಸವನ್ನೂ ಹೊರಗೆಳೆದು ಎಲೆಯ ಮೇಲೆ ಅಟ್ಟಿಟ್ಟಿಯಾಗಿ ಇಟ್ಟನು. ಘಮಘಮಾಯಿಸುವ ಭೋಜನ ಪದಾರ್ಥಗಳು!

ತಾಯಿ ದೊಡ್ಡ ದೊಡ್ಡ ಕಣ್ಣುಗಳಿಂದ ಅವುಗಳನ್ನು ನೋಡುತ್ತ “ಏನಪ್ಪಾ, ಇದೆಲ್ಲಾ! ಮಂತ್ರವೋ ಮಾಯವೋ! ಅಲ್ಲ ನನಗೆ ಸ್ವಪ್ನ ಬಿದ್ದಿದೆಯೋ? ನನಗೊಂದೂ ಗೊತ್ತಾಗೋದಿಲ್ಲ. ಇಷ್ಟು ಸಣ್ಣ ಚೀಲದಲ್ಲಿ ಇಷ್ಟೆಲ್ಲಾ ಪದಾರ್ಥಗಳು ಹೇಗೆ ಇಟ್ಟುಕೊಂಡೆ?” ಎಂದು ಕೇಳಿದಳು.

ಪಿಂಗಳನು ಮಂತ್ರದ ಚೀಲವನ್ನು ಮಡಚಿ ತನ್ನ ಬದಿಯಲ್ಲಿಟ್ಟುಕೊಂಡು, ಒಂದೊಂದು ಪದಾರ್ಥವನ್ನೇ ತಿನ್ನಲು ಪ್ರಾರಂಭಿಸಿ, ತಾಯಿಯ ಬಾಯಿಗೂ ತುರುಕಿ, “ಅಮ್ಮಾ, ಅದೆಲ್ಲಾ ಆಮೇಲೆ ಹೇಳುತ್ತೇನೆ. ನಿಜಕ್ಕೂ ಹೊಟ್ಟೆ ತುಂಬಿದರೆ, ನಾಲಗೆಗೆ ರುಚಿ ತಗಲಿದರೆ ಸ್ವಪ್ನ ಅಲ್ಲಾ ಅಂತ ಗೊತ್ತಾಗಿಬಿಡುತ್ತದೆ. ಮೊದಲು ಊಟ ಮಾಡಿ ಮುಗಿಸು” ಎಂದನು.

ಸ್ವಲ್ಪಹೊತ್ತಿಗೆ ಪಿಂಗಳನೊಂದಿಗೆ ಅವನ ತಾಯಿಯೂ ತೃಪ್ತಿಯಾಗಿ ಊಟ ಮಾಡಿದಳು. ಖಾಲಿಯಾದ ತಟ್ಟೆಗಳನ್ನೆಲ್ಲಾ ಪಿಂಗಳನು ಚೀಲದೊಳಗೆ ಹಾಕಿ ಮಾಯಮಾಡಿ, ಆ ಚೀಲವನ್ನು ತಾಯಿಗೆ ಕೊಡುತ್ತ, “ಇದನ್ನು ನಿನಗಾಗಿಯೇ ತಂದಿದ್ದೇನಮ್ಮ. ಇವತ್ತಿನಿಂದ ನಿನಗೆ ಅಡಿಗೆ ಮಾಡುವ ಕೆಲಸವಿಲ್ಲ, ಈ ಚೀಲದಲ್ಲಿ ಅದ್ಭುತವಾದ ಶಕ್ತಿ ಇದೆ. ಅದರ ಪ್ರಭಾವದಿಂದ ನಮಗೆ ಬೇಕಾದ ವಸ್ತುಗಳನ್ನು ನೆನೆಸಿಕೊಂಡು ಕೈಹಾಕಿದರೆ, ಆ ಪದಾರ್ಥ ಸಿಗುತ್ತವೆ. ಅದಕ್ಕಾಗಿ ಪಠಿಸಬೇಕಾದ ಮಂತ್ರ ಇದೇ. ಕಲಿತಿಟ್ಟುಕೋ” ಎಂದು ತಾಯಿಯ ಕಿವಿಯಲ್ಲಿ ಮಂತ್ರವನ್ನು ಹೇಳಿ, “ಈ ರಹಸ್ಯವನ್ನು ಮಾತ್ರ ಯಾರಿಗೂ ಗೊತ್ತಾಗದಂತೆ ನೋಡಿಕೋ” ಎಂದು ಎಚ್ಚರಿಕೆಯನ್ನೂ ಹೇಳಿದನು. ಮುದುಕಿಯಾದ ತಾಯಿ ತುಂಬ ಭಯಭಕ್ತಿಯಿಂದ ಆ ಚೀಲವನ್ನು ನೋಡಿದಳು.

ಹೀಗೆ ಆ ತಾಯಿ ಮಗಂದಿರು ಸವಿಸವಿ ಸಂತೋಷ ಸಂಭ್ರಮದಲ್ಲಿರುವಾಗ, ಬೀದಿ ಬಾಗಿಲ

ಹೊರಗೆ ಯಾರೋ ಕೆಟ್ಟ ದನಿಯಲ್ಲಿ ಗಟ್ಟಿಯಾಗಿ ರೋದಿಸುತ್ತಿರುವುದು ಕೇಳಿಸಿತು.

ಪಿಂಗಳನು ಅದೇನೆಂದು ತಿಳಿಯುವ ಆತುರದಲ್ಲಿ ಓಡಿಹೋಗಿ ಬಾಗಿಲು ತೆರೆದು ನೋಡಿದನು. ಅಲ್ಲಿ ಬಾಗಿಲಿನ ಹತ್ತಿರ ಅವನ ಅಣ್ಣಂದಿರಿಬ್ಬರು, ಜೀವದತ್ತ ಲಕ್ಷದತ್ತರು ಹರಕು ಬಟ್ಟೆಗಳಿಂದ, ಕೆದರಿದ ಕೂದಲುಗಳಿಂದ ಒಬ್ಬರನ್ನೊಬ್ಬರು ಅಪ್ಪಿಕೊಂಡು ಭೋರಿಡುತ್ತಿದ್ದರು.

ಅಷ್ಟೊಂದು ದೀನಾವಸ್ಥೆಯಲ್ಲಿ ತನ್ನ ಅಣ್ಣಂದಿರನ್ನು ನೋಡುತ್ತಲೇ, ಪಿಂಗಳನಲ್ಲಿ ಅವರ ಮೇಲಿದ್ದ ಕೋಪವು ಮಾಯವಾಗಿ, ಎಲ್ಲಿಲ್ಲದಷ್ಟು ಸೋದರ ಪ್ರೇಮ ಉಕ್ಕಿತು. ಮೊದಲು ಅವರಿಗೆ ಬಂದ ಕಷ್ಟವೇನೆಂದು ತಿಳಿಯಬೇಕೆನಿಸಿತು. ತಾಯಿಗೆ ಮಾಡಿದ ದ್ರೋಹಕ್ಕೆ ಬುದ್ಧಿ ಬಂದಿರಬೇಕೆಂದು ಅಂದುಕೊಂಡು, ಅವನು ಅವರ ಹತ್ತಿರ ಹೋಗಿ, "ಅಣ್ಣಂದಿರಾ ! ನೋಡಿ ಇಲ್ಲಿ, ಅಳಬೇಡಿ. ದೇವರ ದಯದಿಂದ ನಾನಿಷ್ಟು ಹಣ ಸಂಪಾದಿಸಿ ಕ್ಷೇಮವಾಗಿ ಮನೆಗೆ ಬಂದುಬಿಟ್ಟೆ. ನಮ್ಮ ಕಷ್ಟಗಳೆಲ್ಲಾ ತೀರಿತು. ಇನ್ನು ಹಾಯಾಗಿ ಬದುಕಿಕೊಂಡಿರಬಹುದು. ಒಳಗೆ ಬನ್ನಿ. ನಿಮ್ಮ ವಿಷಯ ತಾಯಿ ನನಗೆಲ್ಲಾ ಹೇಳಿದ್ದಾಳೆ. ಆದುದಾಯಿತು, ಬನ್ನಿ" ಎಂದನು.

ಪಿಂಗಳನ ಮಾತು ಕೇಳಿ ಜೀವದತ್ತ, ಲಕ್ಷದತ್ತರು ಮುಖ ಮುಖ ನೋಡಿಕೊಂಡರು. ಆಮೇಲೆ ಜೀವದತ್ತನು ಬಿಕ್ಕುತ್ತ ನಡುಗುವ ಸ್ವರದಲ್ಲಿ, "ಇಲ್ಲಪ್ಪಾ, ತಮ್ಮಾ ! ಪಿಂಗಳಾ ! ನೀನು ಮನೆಗೆ ಬಂದೆಯಾ ? ಒಳ್ಳೇದಾಯಿತು ಬಿಡೂ. ನಾವು ಮಹಾ ಪಾಪಿಗಳು. ಇವೊತ್ತಿಗೆ ನಮ್ಮ ಕಾಲ ತೀರಿತು. ನಾವು ಹೆತ್ತಮ್ಮನಿಗೆ ಎಷ್ಟೆಲ್ಲಾ ಅನ್ಯಾಯ ಮಾಡಿದೆವು ಅಂತ ಅಮ್ಮ ನಿನ್ನ ಹತ್ತಿರ ಹೇಳಿಯೇ ಇದ್ದಾಳು. ಇನ್ನು ಯಾವ ಮುಖ ಇಟ್ಟುಕೊಂಡು ಈ ಮನೆಯೊಳಗೆ ಕಾಲಿಟ್ಟೇವು ? ಇಷ್ಟು ಕಾಲ ನೀನು ಯಾವಾಗ ಬರುತ್ತೀಯೋ ಅಂತ ಕಾದುಕೊಂಡಿದ್ದೆವಪ್ಪಾ. ಇನ್ನು ನಮ್ಮ ದಾರಿ ಆ ಶುಕಸರೋವರವೇ ! ಅದರಲ್ಲಿ ಮುಳುಗಿ ಸತ್ತರೇನೇ ನಮ್ಮ ಪಾಪಕ್ಕೆ ಪ್ರಾಯಶ್ಚಿತ್ತ



ವಾದೀತು. ಅಮ್ಮನಿಗೆ ನಮ್ಮ ಸಾವಿರ ನಮಸ್ಕಾರ ಹೇಳಪ್ಪಾ. ನಮ್ಮ ತಪ್ಪುಗಳನ್ನು ನೀನೂ ಕ್ಷಮಿಸಿ ಬಿಡು. ಇನ್ನು ಹೊರಡುತ್ತೇವೆ! ಇನ್ನು ಯಾರಿಗೂ ನಮ್ಮ ಮುಖವೇ ಕಾಣಲಾರದು. ಅಪ್ಪಣೆ!". ಎನ್ನುತ್ತಾ, ಹೋ ಎಂದು ಅತ್ತುಕೊಂಡು ಹಿಂದಿರುಗಿ ನೋಡದೆಯೇ ಹೋಗತೊಡಗಿದರು.

ಪಿಂಗಳನು ಚಂಗನೆ ಹಾರಿ ಅವರಿಬ್ಬರಿಗೂ ಅಡ್ಡ ನಿಂತು, "ಅಯ್ಯಯ್ಯೋ! ಅಣ್ಣಗಳಿರಾ! ಹೋಗಬೇಡಿ! ನಿಲ್ಲಿರಿ! ಈಗ ಎಲ್ಲಿಗೆ ಹೊರಟಿರಿ?" ಎಂದನು.

"ಎಲ್ಲಿಗೋ? ಅಹ್ಹಹ್ಹಾ!" ಎಂದು ಜೀವದತ್ತ, ಲಕ್ಷದತ್ತರು ಹುಚ್ಚರ ಹಾಗೆ ನಕ್ಕು, "ತಮ್ಮಾ, ದಾರಿಬಿಡಪ್ಪಾ! ನಮ್ಮ ಪಾಪಗಳಿಗೆ ಪ್ರಾಯಶ್ಚಿತ್ತವಾಗಲೇ ಬೇಕು. ತಾಯಿಯನ್ನು ರಂಪದಲ್ಲಿ ರಾಚಿದ ಪಾಪಕ್ಕೆ ಗುರಿಯಾಗಿದ್ದೇವೆ. ಆ ಶುಕಸರೋವರವೇ ನಮಗೆ ಶರಣು ನಮ್ಮನ್ನು ತಡೆಯಬೇಡಪ್ಪಾ! ಅಮ್ಮನಿಗೂ ಹೇಳು" ಎಂದು ಅಣ್ಣಂದಿರಿಬ್ಬರೂ ಮುಂದೆ ನಡೆಯಲು ಕಾಲ್ತೆಗೆದರು.

ಅಷ್ಟರಲ್ಲಿ ತಾಯಿ ಕೂಡಾ ಬಾಗಿಲ ಹತ್ತಿರ ಬಂದು, ತನ್ನ ದೊಡ್ಡ ಮಗಂದಿರಿಬ್ಬರನ್ನೂ ನೋಡಿ, ಕನಿಕರದಿಂದ ದ್ರವಿಸಿದಳು. ಆ ಕ್ಷಣದಲ್ಲಿ ಅವರಿಬ್ಬರೂ ಈ ಮೊದಲು ತನಗೆ ಮಾಡಿದ ಅನ್ಯಾಯವನ್ನೆಲ್ಲಾ ಮರೆತಳು. ಎಲ್ಲಿಲ್ಲದ ಪುತ್ರ ಪ್ರೇಮದಿಂದ ಅವರ ಬಳಿಗೆ ಬಂದು, "ಅಪ್ಪಗಳಿರಾ, ಅಳಬೇಡಿರಪ್ಪ, ದೇವರ ದಯದಿಂದ ನಿಮ್ಮ ಚಿಕ್ಕ ತಮ್ಮ ತುಂಬಾ ಧನದೊಂದಿಗೆ ತಿರುಗಿ ಬಂದಿದ್ದಾನೆ. ನಡೆದದ್ದೆಲ್ಲಾ ಮರೆತು ಬಿಡಿರಿ. ಇನ್ನು ಮೇಲಾದರೂ ಸುಖವಾಗಿ ಸಂತೋಷವಾಗಿ ಕಾಲಕ್ಷೇಪ ಮಾಡೋಣ, ಬನ್ನಿ. ಒಬ್ಬರನ್ನೊಬ್ಬರು ನೋಡಿಕೊಂಡು ಯಾವ ಚಿಂತೆಯೂ ಇಲ್ಲದೆ ಒಟ್ಟಾಗಿರೋಣ" ಎಂದಳು.

"ನೀನು ಕ್ಷಮಿಸಿದರೂ ಮಾಡಿದ ಪಾಪ ಹಾಗೇ ಇರುತ್ತದಲ್ಲಾ! ನಾವು ಬುದ್ಧಿ ಕೆಟ್ಟು ಮಾಡಿದ ಪಾಪ, ಸಾಮಾನ್ಯವಾದುದೇ? ಅದಕ್ಕೆ ಪ್ರಾಯಶ್ಚಿತ್ತ ಹೇಗೆ ಅಮ್ಮಾ? ನಾವು ನಿನ್ನೊಂದಿಗಿರಲು ತಕ್ಕವರೇ ಅಲ್ಲ" ಎಂದರು ಏಕಕಂಠದಿಂದ.





"ಪಶ್ಚಾತ್ತಾಪ ಎಂಬುದು ಎಲ್ಲಾ ಪಾಪಗಳನ್ನೂ ಭಸ್ಮ ಮಾಡಿಬಿಡುತ್ತದೆ. ಇನ್ನು ಹಿಂದಿರುಗಿ ಮನೆಯೊಳಗೆ ಬನ್ನಿ. ಏನೋ ಹುಡುಗಾಟದ ಮೂಲಕ ತಿಳಿದೋ ತಿಳಿಯದೆಯೋ ನನಗೇನಾದರೂ ಅನ್ಯಾಯ ಮಾಡಿದ್ದರೆ, ನಿಮ್ಮನ್ನು ಹಡೆದ ತಾಯಿ ನಾನು ಮರೆಯಲಾರೆ ಅಂದುಕೊಂಡಿರಾ! ಮಂಗ ಮಕ್ಕಳಾ! ನಿಮ್ಮನ್ನು ಹಡೆದ ನಾನು ಕ್ಷಮಿಸಿಬಿಟ್ಟರೆ ದೇವರು ಕೂಡ ಏನೂ ಮಾಡಲಾರ" ಎಂದು ಮಗಂದಿರಿಬ್ಬರ ಕೈಗಳನ್ನೂ ಹಿಡಿದುಕೊಂಡಳು.

ಜೀವದತ್ತ, ಲಕ್ಷದತ್ತರು ಇಷ್ಟವಿಲ್ಲದವರ ಹಾಗೆ ಬಿಕ್ಕುತ್ತ ಮೂಲುಗುತ್ತ ಮನೆಯೊಳಗೆ ಬಂದರು. ತಾಯಿ ಅತಿಸಂಭ್ರಮದಿಂದ ಆಗಿಂದಾಗಲೇ ಅವರಿಬ್ಬರಿಗೂ ಸ್ನಾನಕ್ಕೆ ನೀರುತೋಡಿ, ಉಟ್ಟುಕೊಳ್ಳಲು ಪಿಂಗಳನು ತಂದ ಬೆಲೆಬಾಳುವ ಪಟ್ಟೆ ವಸ್ತ್ರಗಳನ್ನು ತೆಗೆದು ಕೊಟ್ಟಳು. ಅವರಿಬ್ಬರೂ ಆಶ್ಚರ್ಯದಿಂದ ಅವುಗಳನ್ನು ತೆಗೆದುಕೊಂಡು, ಸ್ನಾನಮಾಡಿ, ಆ ಬಟ್ಟೆಗಳನ್ನು ಧರಿಸಿಕೊಂಡು ತಾಯಿಯನ್ನೂ ಪಿಂಗಳನನ್ನೂ ಬಹಳ ಆಪ್ಯಾಯತೆಯಿಂದ ಆಲಿಂಗಿಸಿಕೊಂಡು "ಇನ್ನು ತಿನ್ನಲಿಕ್ಕೆ ಏನಾದರೂ ಇದ್ದರೆ ಕೊಡಿರಿ. ಸಂತೋಷವಾದ್ದರಿಂದ ಹಸಿವೆ ಭಗಭಗನೆ ಉರಿಯಲು ತೊಡಗಿತು. ಸಾಯುವ ಆಲೋಚನೆಯಲ್ಲಿದ್ದಷ್ಟು ಹೊತ್ತೂ ಅದು ಗೊತ್ತೇ ಆಗಲಿಲ್ಲ. ಮೂರು ದಿನಗಳಿಂದ ಏನೂ ತಿಂದಿಲ್ಲ. ತಿನ್ನುವ ಮನಸ್ಸೂ ಇಲ್ಲ. ಈಗ ನಿಮ್ಮಿಬ್ಬರ ಪುಣ್ಯದಿಂದ ನಾವೂ ಮನುಷ್ಯರ ಹಾಗೆ ಆದೆವು" ಎಂದರು.

ಪಿಂಗಳನು ಮಂತ್ರದ ಚೀಲವನ್ನು ತೆಗೆದುಕೊಂಡು ಅಡಿಗೆ ಮನೆಯೊಳಗೆ ಹೋಗಿ, ತಾಯಿಗೆ ಅದನ್ನು ಕೊಟ್ಟು ಅಣ್ಣಂದಿರ ಬಳಿಗೆ ಬಂದು ಕುಳಿತನು. ನಾಲ್ಕೈದು ನಿಮಿಷಗಳ ಮೇಲೆ ತಾಯಿ ಬಗೆಬಗೆಯ ಭೋಜನ ಪದಾರ್ಥಗಳನ್ನು ತಟ್ಟೆಗಳಲ್ಲಿ ಇಟ್ಟುಕೊಂಡು ಬಂದು ದೊಡ್ಡ ಮಗಂದಿರ ಮುಂದೆ ಓರಣವಾಗಿ ಅಣಿಗೊಳಿಸಿ ಇಟ್ಟಳು.

ಜೀವದತ್ತ, ಲಕ್ಷದತ್ತರು ಆವುರಾವುರನೆ ಎಲ್ಲ ಪದಾರ್ಥಗಳನ್ನೂ ಸ್ವಲ್ಪ ಹೊತ್ತು ತಿನ್ನುವುದರಲ್ಲಿ ಮಗ್ನರಾಗಿ, "ಅಮ್ಮಾ, ನಿನ್ನ ಕೈಯಿಂದ ಏನಾದರೂ ಒಂದು ಪದಾರ್ಥ ಮಾಡಿದ್ದರೇ ಸಾಕು. ರುಚಿಯಾಗಿರುತ್ತೆ. ಇಷ್ಟೆಲ್ಲಾ ಪದಾರ್ಥಗಳನ್ನು ಏಕೆ ಮಾಡಿದಿ? ನಾವೇನೂ ಅತಿಥಿಗಳಲ್ಲವಷ್ಟೆ? ಸುಮ್ಮಸುಮ್ಮನೆ ಹಣ ದಂಡ" ಎಂದರು.

ಅದಕ್ಕೆ ಪಿಂಗಳನು ನಗುತ್ತ, "ಅಣ್ಣಗಳಿರಾ, ನಾವು ಇನ್ನು ಪ್ರತಿದಿನವೂ ಇಂಥಾ ಊಟವನ್ನೇ ಮಾಡಬಹುದು. ಬೇಕಾದರೆ ಈ ಪಟ್ಟಣದಲ್ಲಿರುವ ಬಡಬಗ್ಗರಿಗೆ ಕೂಡಾ ಇಷ್ಟೊಂದು ಉತ್ತಮವಾದ ಊಟ ಹಾಕಲೂ ಬಹುದು. ಇದರಿಂದ ಅಮ್ಮನಿಗೆ ಸಂತೋಷವೇ ಹೊರತು ಕಷ್ಟವೇನೂ ಇಲ್ಲ. ಅದೆಲ್ಲಾ ಚಿಂತೆ ಬಿಟ್ಟು ನಿಧಾನವಾಗಿ ಹಾಕಿಸಿಕೊಂಡು ಊಟ ಮಾಡಿರಿ" ಎಂದನು.

ಪಿಂಗಳನ ಮಾತುಗಳನ್ನು ಕೇಳಿ ಜೀವದತ್ತನು ಲಕ್ಷದತ್ತನಿಗೆ ಸಂಜ್ಞೆ ತೋರಿಸಿದನು. ಅವನು ಕೂಡಾ ಏನೋ ಅರ್ಥವಾದ ಹಾಗೆ ತಲೆಯಾಡಿಸಿ ಸುಮ್ಮನೆ ಊಟಮಾಡಿದನು.

ಆ ದಿನ ರಾತ್ರಿ ಊಟಗಳೆಲ್ಲ ಮುಗಿದ ಮೇಲೆ ಜೀವದತ್ತ, ಲಕ್ಷದತ್ತರು ಸ್ವಲ್ಪ ಗಾಳಿಯಲ್ಲಿ ತಿರುಗಾಡಿ ಬರುತ್ತೇವೆಂದು ಹೇಳಿಕೊಂಡು ಒಳ್ಳೆಯ ದುಸ್ತಿನಲ್ಲಿ ಮನೆಯಿಂದ ಹೊರಟರು.

ಅವರಿಬ್ಬರಿಗೂ ಪಿಂಗಳನು ಹೇರಳ ಧನದೊಂದಿಗೆ ಬಂದ ವಿಷಯ ಗೊತ್ತಾಗಿತ್ತು. ಆ ಹಣವನ್ನು ತಾವು ವಶಪಡಿಸಿಕೊಳ್ಳುವುದು ಹೇಗೆ? ಇದೇ ಅವರ ಮುಂದೆ ಈಗ ತೋರಿದ ಪ್ರಶ್ನೆ. ತಮ್ಮ ತಾಯಿ ಆ ದಿನ ಬೆಳಿಗ್ಗೆಯಾಗಲೀ, ಸಾಯಂಕಾಲ ವಾಗಲೀ ಒಲೆ ಹಚ್ಚಿದಂತೆ ಕಾಣಲೇ ಇಲ್ಲ. ಜೀವ ದತ್ತನು ಅಡಿಗೆ ಮನೆಯೊಳಗೆ ಹೋಗಿ ಪರೀಕ್ಷೆ ಮಾಡಿದ್ದನು. ಅಡಿಗೆಯೇ ಮಾಡದೆ ಅಷ್ಟೆಲ್ಲ ಪದಾರ್ಥಗಳು ಎಲ್ಲಿಂದ ಬಂದುವೆಂದು ಅವನಿಗೆ ಅರ್ಥವಾಗಲಿಲ್ಲ. ಪಿಂಗಳನ ಪ್ರವರ್ತನೆಯಲ್ಲಿ ಇಬ್ಬರಿಗೂ ಏನೋ ಅನುಮಾನ.

"ಪಿಂಗಳನು ಹೇಗೋ ಬಹಳ ಹಣ ತಂದಿದ್ದಾನೆ. ಅದರಲ್ಲಿ ಸಂದೇಹವೇ ಇಲ್ಲ. ಅದನ್ನು ನಾವು ನಿಧಾನ ವಾಗಿ ವಶಪಡಿಸಿಕೊಳ್ಳಬಹುದು. ನಾವು ತುಂಬಾ ಪಶ್ಚಾತ್ತಾಪದಲ್ಲಿದ್ದೇವೆಂದು ಅಮ್ಮ ನಂಬುವ ಹಾಗೆ ಪಿಂಗಳನೂ ನಂಬಿದ್ದಾನೆ. ಅದು ಹಾಗಿರಲಿ. ನಾವೀಗ ಎರಡು ಹೊತ್ತು ಔತಣದ ಊಟ ಮಾಡಿದ್ದೇವೆ. ಅಡಿಗೆ ಕೋಣೆ ನೋಡಿದರೆ ಒಲೆ ಹಚ್ಚಿದ ಲಕ್ಷಣವೇ ಇಲ್ಲ. ಇದೊಂದು ವಿಚಿತ್ರ ಹೌದೋ ಅಲ್ಲವೋ?" ಎಂದನು ಜೀವದತ್ತ.

ಲಕ್ಷದತ್ತನು ಆಶ್ಚರ್ಯದಿಂದ ತಲೆಯಾಡಿಸಿ, "ಅಂದರೆ ಪಿಂಗಳನು ಯಾವುದೋ ಮಂತ್ರವೋ, ತಂತ್ರವೋ ಕಲಿತುಕೊಂಡು ಬಂದು ಇದೆಲ್ಲಾ



ಮಾಡುತ್ತಾನೆಂದು ಕಾಣುತ್ತೆ. ಆದರಿಂದಲೇ ಅವನು ಅಷ್ಟೊಂದು ಧೀರತನದಿಂದ ಪಟ್ಟಣದಲ್ಲಿರುವ ಬಡ ಬಗ್ಗರಿಗೆಲ್ಲಾ ಈ ಭೋಜನವೇ ಹಾಕಬಹುದು ಅನ್ನು ತ್ತಾನೆ. ಅವನನ್ನು ಕೇಳಿ ಪ್ರಯೋಜನವಿಲ್ಲ. ಸಮಯ ನೋಡಿ ಅಮ್ಮನನ್ನು ಕೇಳಿದರೆ ಈ ಗುಟ್ಟು ಗೊತ್ತಾಗದೆ ಹೋಗದು" ಎಂದನು.

ಈ ದುಷ್ಟ ಅಣ್ಣ ತಮ್ಮಂದಿರಿಬ್ಬರೂ ಮರುದಿನ ಪಿಂಗಳನು ಮನೆಯಲ್ಲಿಲ್ಲದ ಸಮಯ ನೋಡಿ, ತಾಯಿಯ ಹತ್ತಿರ ಸೇರಿ, ಅದೂ ಇದೂ ಮಾತಾಡುತ್ತ, ಊಟದ ವಿಷಯವನ್ನೆತ್ತಿ ಆ ವಿಚಿತ್ರವೇ ನೆಂದು ಕೇಳಿದರು. ಅವಳು ಬಹಳ ಹೊತ್ತಿನ ವರೆಗೂ ಪಿಂಗಳನು ತಂದ ಮಂತ್ರದ ಚೀಲವನ್ನು ಕುರಿತು ಹೇಳಲಿಲ್ಲ. ಆದರೆ ಮಗಂದಿರಿಬ್ಬರೂ ಅಂಗಲಾಚಿ ಕೇಳುವಾಗ, ಬೇರೆಯಾರಿಗೂ ಹೇಳಿಬಿಡ ಬೇಡಿರೆಂದು ಹೇಳುತ್ತ, ಮಂತ್ರದ ಚೀಲವನ್ನು ತಂದು ಅವರಿಬ್ಬರಿಗೂ ತೋರಿಸಿಬಿಟ್ಟಳು.

"ಆ ಮಂತ್ರ ಯಾವುದೆಂದು ಹೇಳಮ್ಮಾ. ಈ ಕ್ಷಣ ದಲ್ಲಿ ನನಗೆ ಜಿಲೇಬಿ ಬೇಕು. ನಾನೇ ಕೈ ಹಾಕಿ ತೆಗೆಯಬೇಕು" ಎಂದನು ಜೀವದತ್ತ.

ತಾಯಿ ಮಗನ ಮೇಲಿರುವ ಪ್ರೇಮದ ಮೌಢ್ಯ ದಲ್ಲಿ ತೇಲಿ, ಅವರು ಈ ಮೊದಲು ತನಗೆ ಮಾಡಿದ ಹಿಂಸೆಗಳನ್ನೆಲ್ಲಾ ಮರೆತು, ಅವರಿಗೆ ಆ ಮಂತ್ರ ಹೇಳಿ, ಅವರ ಕೈಯಿಂದಲೇ ಬೇಕಾದ ಪದಾರ್ಥಗಳನ್ನು ಹೊರಗೆ ತೆಗೆಸಿದಳು. ಆಗ ಜೀವದತ್ತ ಲಕ್ಷದತ್ತರ ಆನಂದವು ಹದ್ದುಮೀರಿ ಹೋಯಿತು.

ಆ ದಿನ ರಾತ್ರಿ ಆ ಕೆಟ್ಟ ಅಣ್ಣ ತಮ್ಮಂದಿರು ತಾಯಿಯ ಮೇಲೆಯೂ, ಪಿಂಗಳನ ಮೇಲೆಯೂ ತಮ್ಮ ಕುತಂತ್ರವನ್ನು ಪ್ರಾರಂಭಿಸಿದರು. ಮೊದಲು ಪಿಂಗಳನನ್ನು ಮನೆಯಲ್ಲಿಲ್ಲದ ಹಾಗೆ ಮಾಡಿಬಿಟ್ಟರೆ, ತಾಯಿ ತಮ್ಮನ್ನು ಏನೂ ಮಾಡಲಾರಳೆಂದು ಅವರಿಗೆ ಗೊತ್ತು. ಆದರೆ ಪಿಂಗಳನ ಪೀಡೆಯನ್ನು ದೂರ ಮಾಡುವ ಬಗೆ ಹೇಗೆ? ಇದು ಅವರ ಮುಂದಿರುವ ದೊಡ್ಡ ಪ್ರಶ್ನೆ.

"ನನಗೊಂದು ಉಪಾಯ ಕಾಣುತ್ತದೆ, ಮೊನ್ನೆ ನಾನು ದೊಡ್ಡ ಪೇಟೆಯಲ್ಲಿ ಬರುವಾಗ ಹಡಗಿನ ಸರಂಗನೊಬ್ಬನನ್ನು ನೋಡಿದೆ. ಅವನಿಗೆ ಸಮುದ್ರ ದಲ್ಲಿ ಹಡುಗು ನಡೆಸಲಿಕ್ಕೆ ಯುವಕರಾದ ನಾವಿಕರು ಬೇಕಂತೆ. ಅಗತ್ಯವಿದ್ದರೆ ಎಷ್ಟು ಹಣವನ್ನಾದರೂ ಕೊಟ್ಟು ಮನೆಯ ಹಿರಿಯರಿಂದ ಯುವಕರನ್ನು ಕೊಂಡುಕೊಳ್ಳುವ ಹಾಗೆ ಮಾತಾಡಿಕೊಂಡಿದ್ದ. ನಾವು ಅವನ ಹತ್ತಿರ ಮಾತಾಡಿ, ಪಿಂಗಳನನ್ನು ಉಪಾಯ ವಾಗಿ ಅವನಿಗೆ ಮಾರಿಬಿಡೋಣ. ನಾವು ನಮ್ಮ ಮನೆಗೆ ಹಿರಿಯರೇ ತಾನೇ?" ಎಂದನು ಜೀವದತ್ತ.

"ಹೌದು. ನಿಜ. ಒಳ್ಳೇ ಆಲೋಚನೆ. ಹಾಗೇ ಮಾಡೋಣ. ಆ ಸರಂಗನನ್ನು ನೋಡಿ ಮಾತಾಡೋಣ ನಡೆ." ಎಂದನು ಲಕ್ಷ ದತ್ತ.

ಅಣ್ಣ ತಮ್ಮಂದಿರಿಬ್ಬರೂ ಕೂಡಿ ಆ ಸರಂಗನು ಉಳಿದುಕೊಂಡ ಬಿಡಾರದ ಕಡೆಗೆ ಹೋದರು. ಅವನು ದೊಡ್ಡ ಮನುಷ್ಯರಂತೆ ಕಾಣುವ ಅಣ್ಣ ತಮ್ಮಂದಿರಿಗೆ ಸಕಲ ಮರ್ಯಾದೆಗಳನ್ನೂ ಮಾಡಿ, ಬಂದ ಕಾರ್ಯವೇನೆಂದು ಕೇಳಿದನು.

"ಅಯ್ಯಾ, ಸರಂಗಮಹಾಶಯರೇ! ನಮಗೆ ಪಿಂಗಳನೆಂಬ ಒಬ್ಬ ತಮ್ಮನಿದ್ದಾನೆ. ಅವನೊಬ್ಬ ಶುದ್ಧ ಮೊಂಡುಗಾರನಾಗಿ, ಸುಮ್ಮನಿರದೆ ಬೇಡದ ಸಾಹಸ ಮಾಡುತ್ತ ತಿರುಗುತ್ತ, ದುಂದುವ್ಯಯ ಮಾಡುತ್ತ ನಮ್ಮನ್ನೂ, ತಾಯಿಯನ್ನೂ ಹಿಂಸಿಸುತ್ತ ಓಡಿ ಹೋಗುತ್ತಾ ಇರುತ್ತಾನೆ. ಅವನನ್ನು ಹೇಗೆ ನಿಭಾಯಿಸುವುದೋ ನಮಗಂತೂ ಗೊತ್ತಾಗುವು ದಿಲ್ಲ." ಎಂದು ಜೀವದತ್ತನು ಅಲ್ಲಿಗೆ ಮಾತು ನಿಲ್ಲಿ ಸಿದನು:

—(ಇನ್ನೂ ಇದೆ)






## ೧೧

[ತಾಯಿಯ ಮೂಲಕವಾಗಿ ಪಿಂಗಳನಿಗೆ ಅಣ್ಣಂದಿರು ಅವಳನ್ನು ಹೇಗೆ ಹಿಂಸೆ ಪಡಿಸಿದರೆಂಬುದು ತಿಳಿಯಿತು. ಆದರೆ ಅಣ್ಣಂದಿರು ಪಶ್ಚಾತ್ತಾಪದಿಂದ ರೋದಿಸಿಕೊಂಡು ಬಂದುದನ್ನು ನೋಡಿ, ಪಿಂಗಳನ ಮನಸ್ಸು ದ್ರವಿಸಿ, ಸೋದರ ಪ್ರೇಮದಿಂದ ಅವರನ್ನು ಆದರಿಸಿದನು. ಅವರಿಬ್ಬರೂ ಪಿಂಗಳನು ತಂದ ಸೊತ್ತುಗಳಿಗಾಗಿ, ಪಿಂಗಳನನ್ನು ಒಬ್ಬ ಹಡಗಿನ ಸರಂಗನಿಗೆ ಗುಲಾಮನಾಗಿ ಮಾರಲು, ಆ ಸರಂಗನ ಬಳಿಗೆ ಹೋಗಿ ಮಾತಾಡಿದರು.]

**ಜೀ**ವದತ್ತನು ಸಣ್ಣತಮ್ಮನಾದ ಪಿಂಗಳನೊಬ್ಬ ಪ್ರಚಂಡ ಪುಂಡನೆಂಬಂತೆ ಹೇಳಿದ ವಿವರಗಳನ್ನೆಲ್ಲಾ ಹಡಗಿನ ಸರಂಗನು ಶ್ರದ್ಧೆಯಿಟ್ಟು ಗೋಣಾಡಿಸುತ್ತಾ ಕೇಳಿ, ಎರಡು ಕೈಗಳನ್ನೂ ಮುಂದೆ ಚಾಚಿ ವಿಕಟವಾಗಿ ನಕ್ಕನು. ಆ ನಗುವಿನ ಅಂತರಾರ್ಥವೇನೆಂದು ಜೀವದತ್ತ, ಲಕ್ಷದತ್ತರಿಗೆ ಅರ್ಥವಾಗದೆ, ಮುಖ ಮುಖ ನೋಡಿಕೊಂಡರು. ಅವರಿಬ್ಬರ ಮುಖಗಳಲ್ಲಿ ಕಳವಳದ ಕಪ್ಪು ಹರಡಿತು.

ನಕ್ಕು ತೀರಿಸಿದ ಮೇಲೆ ಹಡಗಿನ ಸರಂಗನು ಸ್ವಲ್ಪಹೊತ್ತು ಆಲೋಚನೆ ಮಾಡುತ್ತಾ ಸುಮ್ಮನಿದ್ದು, ಆಮೇಲೆ ಜೀವದತ್ತನ ಕಣ್ಣುಗಳನ್ನು ಚುಚ್ಚುವಂತೆ ನೋಡುತ್ತಾ, "ಭೇಷ್ ಭೇಷ್! ನಮಗೆ ಬೇಕಾದಂಥ ಮನುಷ್ಯನ ವರ್ಣನೆಯನ್ನೇ ಮಾಡಿರುವಿ. ಆದರೆ ನೀನು ಹೇಳುವುದೆಲ್ಲಾ ನಿಜವೇ ಏನು? ನಿಜವಾಗಿಯೂ ಪಿಂಗಳನೆಂಬ ನಿಮ್ಮ ಆ ತಮ್ಮನು ನಿಮ್ಮನ್ನೂ, ತಾಯಿಯನ್ನೂ ಅಷ್ಟರಮಟ್ಟಿಗೆ ಹಿಂಸಿಸುವನೇ? ನನ್ನ ಮುಂದೆ ಸುಳ್ಳು ಜೊಳ್ಳು ಕಾಡು ಹರಟೆಗಳು ಉಪಯೋಗವಿಲ್ಲ. ಮಾತಿನ ಪ್ರತಿ ಅಕ್ಷರವೂ ಸತ್ಯವಾಗಿರಬೇಕು" ಎಂದನು.



“ಅಯ್ಯಾ, ನಿಮ್ಮ ಪುಣ್ಯ! ಹಾಗೆ ಮಾತ್ರ ಮಾಡಬೇಡಿ. ಅವನು ತಿರುಗಿ ಮನೆಗೆ ಬಂದರೆ ಮತ್ತೆ ನಮ್ಮ ಗತಿ ಅಷ್ಟೇ!” ಎಂದು ಅದುರಿ ಬೀಳುತ್ತ ಜೀವದತ್ತನು ಹೇಳಿದನು. ಕೂಡಲೇ ಲಕ್ಷದತ್ತನು, “ಹುಟ್ಟಾ ದುಷ್ಟಬುದ್ಧಿಯವನು. ಅಂಥವನನ್ನು ನೀವು ಎರಡು ಮೂರು ವರ್ಷದಲ್ಲಿ ಹಿಂದಿರುಗಿ ಮನೆಗೆ ಕಳುಹಿಸಿಬಿಟ್ಟರೆ, ಮೊದಲಿನ ಬುದ್ಧಿ ಮರುಕಳಿಸಿ, ನಮ್ಮ ಮತ್ತು ತಾಯಿಯ ಜೀವ ತೆಗೆಯುತ್ತಾನೆ. ನಿಮ್ಮಂಥ ದೂರ ದೂರ ಇರುವವರೇ ಅವನ ಬುದ್ಧಿಗೆ ಸರಿಯಾದವರು. ನಮ್ಮ ಮೇಲೆ ಅವನಿಗಿರುವ ಹಗೆ ನಾಗರಹಾವಿನ ಹಗೆಯೇ!” ಎಂದನು.

“ಹಾಗಾದರೆ ಅವನನ್ನು ನಮಗೆ ಗುಲಾಮನಾಗಿ ಮಾರಲು ನೀವು ಮಾತ್ರವಲ್ಲದೆ, ನಿಮ್ಮ ತಾಯಿಯ ಒಪ್ಪಿಗೆಯೂ ಬೇಕು. ಆಕೆ ಒಪ್ಪುತ್ತಾಳೆಯೇ? ಆಮೇಲೆ ರಾಜನ ಬಳಿಗೆ ಹೋಗಿ ನಮ್ಮ ಮೇಲೆ ವ್ಯಾಜ್ಯ ತಂದರೆ ನಾವು ಪೇಚಾಡಬೇಕಾದೀತು. ನಿಮ್ಮ ತಾಯಿಗೂ ಅವನು ಬೇಡವೇ? ಆಲೋಚಿಸಿ ಹೇಳಿರಿ” ಎಂದನು ಸರಂಗ.

ಜೀವದತ್ತ ಲಕ್ಷದತ್ತರು ಸ್ವಲ್ಪದೂರ ಹೋಗಿ, ಏನೋ ರಹಸ್ಯ ಮಾತಾಡಿಕೊಂಡಂತೆ ನಟಿಸಿ, ಆಮೇಲೆ ಸರಂಗನ ಬಳಿಗೆ ಬಂದು ವಿನಯತುಂಬಿ ಸೂಸುವ ಹಾಗೆ ಭಾವನೆ ಮಾಡಿಕೊಂಡು ಹೀಗೆಂದರು:

“ಅಯ್ಯಾ, ಸರಂಗ ಸಾಹೇಬರೇ! ಎಲ್ಲಾ ಸಮಾಚಾರವನ್ನೂ ನಮ್ಮ ತಾಯಿಯೊಂದಿಗೆ ಮಾತಾಡಿಯೇ ಬಂದಿದ್ದೇವೆ. ಅವಳ ಉದ್ದೇಶ ಕೂಡಾ ಯಾವುದೋ ಒಂದು ಕಾರಣದಿಂದ ಅವನನ್ನು ಮನೆಯಿಂದ ಹೊರಗೆ ಹಾಕಬೇಕೆಂತಲೇ ಇದೆ. ಎಷ್ಟೇ ಹೊಟ್ಟೆಯ ಮಗನಾದರೂ, ಅವನ ಪುಂಡ ಕಾಟಗಳನ್ನು ಸಹಿಸುವ ಶಕ್ತಿ ಇನ್ನು

“ನಿಜ, ಸರಂಗ ಸಾಹೇಬರೇ! ನಿಜ! ನಮ್ಮ ಮಾತು ಪ್ರತಿ ಅಕ್ಷರವೂ ನಿಜ. ಸಾಸಿವೆಯಂಥ ಸುಳ್ಳೂ ಅದರಲ್ಲಿಲ್ಲ. ಇಷ್ಟು ಕಾಲದಿಂದ ಮಹಾ ದುಷ್ಟನಾದ ಆ ತಮ್ಮನ ಕಾಟವನ್ನು ತಾಳಿ ತಾಳಿ ಸಾಕಾಯಿತು. ಇನ್ನು ತಾಳುವಂತಿಲ್ಲ. ಅವನಿಂದ ನಮಗಾಗುವ ಕಷ್ಟ ಪರಮಾತ್ಮನಿಗೇ ಗೊತ್ತು” ಎಂದನು ಲಕ್ಷದತ್ತ.

ಹಡಗಿನ ಸರಂಗನು ಮತ್ತೊಮ್ಮೆ ಅವರ ಕಣ್ಣುಗಳನ್ನು ಚುಚ್ಚಿ ನೋಡಿ, “ಹಾಗಿದ್ದರೆ ನಿಮ್ಮ ತಮ್ಮನನ್ನು ಕೊಂಡುಕೊಳ್ಳಲು ನನಗೇನೂ ಅಭ್ಯಂತರವಿಲ್ಲ. ಅವನನ್ನು ನನ್ನ ಹಡಗಿನಲ್ಲಿ ಕಲಾಸಿಯಾಗಿ ಇಟ್ಟುಕೊಂಡು, ಅವನ ಗರ್ವ ಮುರಿಯುವಂತೆ ದುಡಿಸುತ್ತೇನೆ. ಎಲ್ಲರ ಹಾಗೆ ದಾರಿಗೆ ಬಂದ ಕೂಡಲೇ ಮತ್ತೆ ನಿಮ್ಮ ಮನೆಗೆ ಕಳುಹಿಸುತ್ತೇನೆ. ಯಾರನ್ನೂ ಗುಲಾಮರಾಗಿ ದುಡಿಸುವ ಕ್ರೂರ ನಾನಲ್ಲ. ಆಗಬಹುದಷ್ಟೆ?” ಎಂದನು.

ಅವಳಲ್ಲಿಲ್ಲ. ಹಾಗಂತ ಪಾಪ, ಅವಳಾಗಿ ತನ್ನ ಬಾಯಿಯಿಂದ ಅವನನ್ನು ಗುಲಾಮನಾಗಿ ತೆಗೆದು ಕೊಂಡು ಹೋಗಿರೆಂದು ಹೇಳಲಾರಳು. ಅದಕ್ಕೇ ನಾವಿಬ್ಬರೇ ಬಂದದ್ದು. ಅದರಿಂದ ನಿಮಗೆ ಯಾವ ತೊಂದರೆಯೂ ಬಾರದು. ನಮ್ಮ ಮಾತನ್ನು ನಂಬಿರಿ ಸಾಹೇಬರೇ!"

"ಹಾಗಾದರೆ ಸರಿ. ಅವನನ್ನು ಈ ದಿನ ಸಾಯಂಕಾಲ ಸೂರ್ಯನು ಮುಳುಗಿದ ಮೇಲೆ ಯಾವುದೋ ಕಾರಣ ಹೇಳಿ ಇಲ್ಲಿಗೆ ಕರೆದುಕೊಂಡು ಬಂದುಬಿಡಿ. ಆಮೇಲಿನ ಕೆಲಸ ನಾನು ನೋಡಿ ಕೊಳ್ಳುತ್ತೇನೆ. ತೆಗೆದುಕೊಳ್ಳಿರಿ, ಅವನಿಗೆ ನಾನು ಕೊಡಲಿರುವ ಬೆಲೆ" ಎಂದು ಹೇಳಿ ಸರಂಗನು ಹಣದ ಚೀಲವನ್ನು ಬಿಚ್ಚಿ ನೂರು ಮೊಹರಿ ಗಳನ್ನು ಜೀವದತ್ತನಿಗೆ ಕೊಡಲು ನೋಡಿದನು.



ಜೀವದತ್ತನು ಕೈಚಾಚುವುದನ್ನು ಬಿಟ್ಟು, "ಅಯ್ಯಾ, ಅವನನ್ನು ನಾವು ಸಮುದ್ರ ತೀರಕ್ಕೆ ಕರಕೊಂಡು ಬರುವುದು ಆಗುವ ಮಾತಲ್ಲ. ಅವನಲ್ಲಿ ನೂರು ನರಿಗಳಿಗಿರುವ ತಂತ್ರಶಕ್ತಿಯೂ, ಎಂಬತ್ತು ಕಾಡುಕೋಣಗಳ ಬಲವೂ ಇವೆ. ಆದ್ದರಿಂದ ನೀವೇ ಈ ದಿನ ರಾತ್ರಿ ಬಂದು ಹೇಗಾದರೂ ಉಪಾಯ ಮಾಡಿ ಅವನನ್ನು ನಿಮ್ಮ ಕೈಗೆ ಸಿಕ್ಕಿಸಿಕೊಳ್ಳಬೇಕು" ಎಂದನು.

ಜೀವದತ್ತ, ಲಕ್ಷದತ್ತರ ಭಯವನ್ನು ನೋಡಿ ಸರಂಗನು ದೊಡ್ಡ ದನಿಯಿಂದ ನಕ್ಕನು. "ಅವನ ನರಿತಂತ್ರಗಳೂ, ಎಂಬತ್ತು ಕಾಡುಕೋಣಗಳ ಶಕ್ತಿಯೂ ನನ್ನ ಹತ್ತಿರ ಉಪ್ಪಿನ ಹರಳಿಗೂ ಸರಿಬಾರದು. ಕಡೆಗೆ ರಾಕ್ಷಸನಾದರೂ, ನನ್ನ ಕಣ್ಣಿಗೆ ಬಿದ್ದರೆ ಸಾಕು, ಅವನ ಕಾಲಿಗೂ ಕೊರಳಿಗೂ ಕಬ್ಬಿಣದ ಸಂಕಲೆ ತಗಲಿಸಿ, ನನ್ನ ಹಡಗಿನಲ್ಲಿ ಕಲಾಸಿ ಕೆಲಸಮಾಡಿಸಿ ಬಿಡುತ್ತೇನೆ. ಅದಿರಲಿ, ಈ ದಿನ ರಾತ್ರಿ ಜತೆಗೆ ಇಬ್ಬರು ಕಲಾಸಿಗಳನ್ನು ಕರೆದು ಕೊಂಡು ನಿಮ್ಮ ಮನೆಗೆ ಬರುತ್ತೇನೆ. ನೀವಿಬ್ಬರೂ ಸರ್ವ ಸಿದ್ಧತೆಯಿಂದ ಇರಬೇಕು, ನೋಡುತ್ತೇನೆ ನಿಮ್ಮ ತಮ್ಮನನ್ನು" ಎಂದನು.

"ನಿಮಗೆ ನಮ್ಮ ಸಾವಿರ ನಮಸ್ಕಾರಗಳು ಅಯ್ಯಾ! ನಿಮ್ಮ ಈ ಸಹಾಯಕ್ಕೆ ಇಡೀ ಜನ್ಮ ಕೃತಜ್ಞರಾಗಿರುತ್ತೇವೆ" ಎಂದು ಜೀವದತ್ತ, ಲಕ್ಷ ದತ್ತರು ಹಡಗಿನ ಸರಂಗನು ಕೊಟ್ಟ ನೂರು ಮೊಹರಿಗಳನ್ನು ತೆಗೆದುಕೊಂಡು ಹಿಡಿಸಲಾಗದಷ್ಟು ಆನಂದದಿಂದ ಮನೆಯ ದಾರಿ ಹಿಡಿದರು.

ದಾರಿಯಲ್ಲಿ ಲಕ್ಷದತ್ತನು "ಅಲ್ಲಣ್ಣಾ, ಈಗ ನಾವು ಪಿಂಗಳನಿಗೆ ಅನುಮಾನ ಬಾರದ ಹಾಗೆ ಯಾವುದೋ ಒಂದು ಉಪಾಯ ಮಾಡಬೇಕಾಗಿದೆ. ಸರಂಗನು ಒಬ್ಬನೇ ಅಲ್ಲದೆ, ಮತ್ತಿಬ್ಬರು ಕಲಾಸಿ ಗಳನ್ನೂ ನಮ್ಮ ಮನೆಗೆ ಕರೆದುಕೊಂಡು ಬಂದು ದನ್ನು ನೋಡಿ ಪಿಂಗಳನಿಗೆ ಅನುಮಾನ ಬಂದರೆ ಏನು ಮಾಡುವುದು?" ಎಂದನು.

"ಛೀ ಬಿಡು. ಅಂಥಾ ಭಯವೇನಿಲ್ಲ. ಅದಕ್ಕೆ ತಕ್ಕಹಾಗಿನ ಉಪಾಯ ಮೊದಲೇ ಆಲೋಚಿಸಿದ್ದೇನೆ," ಎಂದು ಜೀವದತ್ತನು ನಿಂತು, ಒಂದುಸಾರಿ ಸುತ್ತಲೂ ನೋಡಿ, ಲಕ್ಷದತ್ತನ ಕಿವಿಯಲ್ಲಿ ಪಿಸಪಿಸನೆ ಏನೋ ಗುಟ್ಟಾಗಿ ಹೇಳಿದನು.

ಅದನ್ನು ಕೇಳಿ ಲಕ್ಷದತ್ತನು ದೊಡ್ಡ ದನಿಯಿಂದ ನಗುತ್ತ, ಹಾರುತ್ತ, "ಅಣ್ಣಾ, ನೀನು ಬುದ್ಧಿಯಲ್ಲಿ ಬೃಹಸ್ಪತಿಯನ್ನೇ ಮಿಂಚಿದವನು. ನನಗೆ ಗೊತ್ತು! ಕಡೆಗೆ ಅಣ್ಣಾ, ಪಿಂಗಳನು ತಂದ ಹಣವೆಲ್ಲಾ ನಮ್ಮದಾದಾಗ, ನನ್ನ ಭಾಗದಲ್ಲಿ ನನಗೇನೂ ಕಡಿಮೆ ಮಾಡಲಾರೆಯಷ್ಟೆ?" ಎಂದು ಕೇಳಿದನು.

"ಚೀ ಛೆ! ನಿನಗೇಕೆ ಅಂಥ ಸಂದೇಹ ಬಂತು? ಉಪಾಯ ನಾನು ಹೇಳಿದೆನೆಂದು, ಹೆಚ್ಚಿನಂಶ ಇಟ್ಟುಕೊಳ್ಳುವೆನೆಂದು ಮಾಡಿದಿಯಾ? ಅದರಲ್ಲಿ ನಾನು ಹೆಚ್ಚಿನವನಾದರೆ ಬಲದಲ್ಲಿ ನೀನೇ ಹೆಚ್ಚಿನವನಲ್ಲವೇನೋ? ಅಲ್ಲದೆ ಜತೆ ಸೋದರನಾದ ನಿನಗೆ ಮೋಸ ಮಾಡುವೆನೇ? ಭ್ರಾತೃವಂಚನೆ ನಮ್ಮ ವಂಶದಲ್ಲೇ ಇಲ್ಲ!" ಎಂದನು ಜೀವದತ್ತ. ಹೀಗೆ ಅಣ್ಣ ತಮ್ಮಂದಿರು ನಗುತ್ತ ಹುಚ್ಚುಚ್ಚಾಗಿ ಹಾಡುತ್ತ ಮನೆಯ ಹತ್ತಿರ ಬಂದರು. ಕೂಡಲೇ ಅವರ ಭಾವಗಳು ಮಾರ್ಪಟ್ಟುವು. ಬಾಗಿಲಲ್ಲಿ ಪಿಂಗಳನನ್ನು ನೋಡಿದ ಕೂಡಲೇ ಮುಖಗಳಲ್ಲಿ ಎಲ್ಲಿಲ್ಲದ ಚಿಂತೆಯನ್ನು ತಂದುಕೊಂಡು, ಬಾಡಿ ಕಳೆಗೆಟ್ಟವರ ಹಾಗೆ ಆದರು.

ಪಿಂಗಳನು ಅವರನ್ನು ನೋಡಿ, "ಇದೇನು ಅಣ್ಣಗಳಿರಾ! ಏನೋ ಬಹಳ ದುಃಖದಲ್ಲಿರುವ ಹಾಗಿದೆ? ಏನಾಯಿತು?" ಎಂದು ಕೇಳಿದನು.

ಜೀವದತ್ತನು ಬಿಕ್ಕುವ ಕೊರಳಿನಿಂದ "ಮತ್ತೇನೂ ಇಲ್ಲ ತಮ್ಮಾ, ಮಾನವರಿಗೆ ಅವಮಾನಕ್ಕಿಂತ ಹೆಚ್ಚಿನ ಚಿಂತೆ ಇಲ್ಲವಷ್ಟೆ? ಈ ದಿನ ದಾರಿಯಲ್ಲಿ ಬರುವಾಗ ನಮ್ಮ ಹಳೇ ಸ್ನೇಹಿತನೊಬ್ಬ ಸಿಕ್ಕಿದ. ಅವನು ಈಗ ಹಡಗಿನಲ್ಲಿ ಸರಂಗನಾಗಿದ್ದಾನೆ. ವ್ಯಾಪಾರ ಮಾಡಿಕೊಂಡು ಈ ಪಟ್ಟಣದಲ್ಲಿ ಏನೋ ವ್ಯಾಪಾರದ ಮೇಲೆ ಬಂದಿದ್ದಾ



ನನ್ನು. ಮೊದಲು ಅಥವನು ನಮ್ಮಿಬ್ಬರಿಗೂ ಅನೇಕ ಬಾರಿ ಆತಿಥ್ಯವಿತ್ತು ಗೌರವಿಸಿದ್ದಾನೆ. ಈವರೆಗೂ ಅವನನ್ನು ನಾವು ಹಾಗೆ ಗೌರವಿಸಲೇ ಇಲ್ಲ. ನಮಗೇನಿದೆ ? ಹುಟ್ಟು ದರಿದ್ರರು ! " ಎಂದು ದಳದಳ ಕಣ್ಣೀರಿಳಿಸಿದನು. ಲಕ್ಷದತ್ತನ ಕಣ್ಣುಗಳೂ ಕರಗಿ ಸುರಿದುವು.

"ಅಣ್ಣಾ, ನಿಮ್ಮ ಸ್ನೇಹಿತನು ನನ್ನ ಸ್ನೇಹಿತನೂ ಅಲ್ಲವೇನು ? ನಾವು ಈಗ ದರಿದ್ರರೇನೂ ಅಲ್ಲ. ಬೇಕಾದರೆ ಅವಂತಿ ನಗರದಲ್ಲಿರುವ ಪ್ರತಿಯೊಬ್ಬರಿಗೂ ನಾವು ದಿನಾ ಸಂತರ್ಪಣೆ ಮಾಡಲು ಸಾಧ್ಯವಿದೆ. ನಿಮ್ಮ ಸ್ನೇಹಿತನಾದ ಹಡಗಿನ ಸರಂಗನನ್ನು ಅನುಚರರೊಂದಿಗೆ ಸಹಾ ಈ ದಿನ ರಾತ್ರಿ ನಮ್ಮಲ್ಲಿ ಔತಣಕೊಟ್ಟು ಉಪಚರಿಸೋಣ. ಆಹ್ವಾನಿಸಿ ಬಂದುಬಿಡಿರಿ. ನಮ್ಮ ಮನೆಯ ವಠಾರದೊಳಗೇ ಅವರೆಲ್ಲ ಮೆಚ್ಚಿ ಬೆರಗಾಗುವ ಹಾಗೆ, ಎಲ್ಲಾ ಏರ್ಪಾಡೂ ಮಾಡೋಣ " ಎಂದನು ಪಿಂಗಳ.

"ನಿಜಕ್ಕೂ ಹೇಳುವೆಯಾ ತಮ್ಮಾ ? " ಎಂದು ಜೀವದತ್ತ ಲಕ್ಷದತ್ತರಿಬ್ಬರೂ ಅತ್ಯಂತ ಸಂತೋಷ ಸಂಭ್ರಮಗಳನ್ನು ನಟಿಸುತ್ತ ಕೇಳಿದರು.

"ಹೌದು, ಅಣ್ಣಂದಿರಾ ! ತಪ್ಪದೆ ನಿಮ್ಮ ಸ್ನೇಹಿತನನ್ನು ಕರೆದುಕೊಂಡು ಬನ್ನಿ. ಅತ್ಯುತ್ತಮವಾದ ಔತಣದ ಏರ್ಪಾಡು ಮಾಡೋಣ" ಎಂದನು ಪಿಂಗಳ.

"ಸರಿ. ಹಾಗಾದರೆ ಈಗಲೇ ಹೋಗಿ ಅವನೊಂದಿಗೆ ಹೇಳಿ ಬರುತ್ತೇವೆ." ಎಂದು ಜೀವದತ್ತ, ಲಕ್ಷದತ್ತರು ಮನೆಯಿಂದ ಹೊರಗೆ ಹೋದರು.

ಅವರಿಬ್ಬರೂ ಹೊತ್ತು ಮುಳುಗುವವರೆಗೂ ಜೂಜಿನ ಮನೆಯಲ್ಲಿಯೂ, ಪಾನಶಾಲೆಗಳಲ್ಲಿಯೂ ಉತ್ಸಾಹದಿಂದ ಕಾಲಹರಣ ಮಾಡಿ, ಕತ್ತಲೆಯಾದ ಮೇಲೆ ಸರಂಗನ ಬಿಡದಿಗೆ ಹೋದರು. ಅವರ ಕರೆಯನ್ನು ಕೇಳಿ ಸರಂಗನು ಬಹಳ ಸಂತೋಷದಿಂದ, ಬಲಶಾಲಿಗಳಾದ ಇಬ್ಬರು ಕಲಾಸಿಗಳನ್ನು ಜತೆಯಲ್ಲಿ ಕರೆದುಕೊಂಡು, ಅಣ್ಣ ತಮ್ಮಂದಿರ ಹಿಂದೆ ಅವರ ಮನೆಗೆ ಹೊರಟನು.






ಆ ಹಡಗಿನ ಸರಂಗನಿಗೂ, ಅವನ ಅನುಚರರಿಗೂ ಪಿಂಗಳನು ಹೃದಯಪೂರ್ವಕವಾಗಿ ಸ್ವಾಗತ ಹೇಳಿದನು. ಅವರೆಲ್ಲರೂ ಒಂದು ಕೋಣೆಯಲ್ಲಿ ಸುಖಾಸೀನರಾದ ಮೇಲೆ, ಪಿಂಗಳನೂ ಅವನ ತಾಯಿಯೂ ಒಳಗೋಣೆಗೆ ಹೋಗಿ ಮಹಿಮೆಯ ಚೀಲದೊಳಗಿನಿಂದ ಬೇಕು ಬೇಕಾದ ಪದಾರ್ಥಗಳನ್ನೂ, ಪಾನೀಯಗಳನ್ನೂ ತೆಗೆತೆಗೆದು ಅಣಿಗೊಳಿಸಿಟ್ಟು, ಅವರೆಲ್ಲರಿಗೂ ಬಡಿಸಿದರು. ಸರಂಗನಿಗೆ ಚೀಲದ ಮಹತ್ವವೇನೊಂದೂ ತಿಳಿಯದು. ಜೀವದತ್ತ, ಲಕ್ಷದತ್ತರೇ ತನಗೆ ಇಂತಹ ಮರ್ಯಾದೆ ತೋರಿಸುತ್ತಾರೆಂದೇ ನಂಬಿದನು.

ಭೋಜನವಾದ ಮೇಲೆ ರಾತ್ರಿ ಬಹಳ ಹೊತ್ತು ಹೋಗುವವರೆಗೂ ಎಲ್ಲರೂ ಕುಶಾಲಾಗಿ ಹರಟೆ ಹೊಡೆಯುತ್ತ ಕಾಲಹರಣ ಮಾಡಿಕೊಂಡಿದ್ದರು, ಪಿಂಗಳನು ನಿದ್ದೆಯ ಮತ್ತಿಗೆ ಬೀಳದೆ ಏನೇನೋ ಹರಟಿಕೊಂಡಿದ್ದನು. ಛಕ್ಕನೆ ಅವನ ಮೇಲೆ ಬಿದ್ದು ಹಿಡಿದೊಯ್ಯಬೇಕೆಂದು ಸರಂಗನ ಯೋಚನೆಯಾಗಿತ್ತು. ಅದಕ್ಕಾಗಿ ತಕ್ಕ ಸಮಯ ಕಾಯುತ್ತಿದ್ದನು. ಆದರೆ ಪಿಂಗಳನು ಮೈಮರೆತು ಬೀಳುವ ಲಕ್ಷಣವು ಕಾಣಲೇ ಇಲ್ಲ. ಅವನು ಉತ್ಸಾಹದಿಂದ ಏನೇನೋ ಹೇಳುತ್ತಲೇ ಇದ್ದನು. ಸರಂಗನ ತಾಳ್ಮೆ ಎಲ್ಲೆಯನ್ನು ಮೀರಿತು.

ಇನ್ನು ಕಾಲಹರಣ ಮಾಡುವುದು ಒಳ್ಳೆಯದಲ್ಲವೆಂದುಕೊಂಡು ಸರಂಗನು, ತನ್ನ ಅನುಚರರಿಗೂ, ಜೀವದತ್ತ, ಲಕ್ಷದತ್ತರಿಗೂ ಸಂಜ್ಞೆ ಮಾಡಿದನು. ಕೂಡಲೇ ಅವರೆಲ್ಲ ಒಂದೇಸಾರಿ ಅವನ ಮೇಲೆ ಬಿದ್ದರು. ಅವನ ಕಾಲು ಕೈಗಳನ್ನು ಕದಲಿಸಲಾಗದಂತೆ ಬಿಗಿದು ಕಟ್ಟಿದರು. ಜೀವದತ್ತ, ಲಕ್ಷದತ್ತರು ಅವನು ಕೂಗದಂತೆ ಬಟ್ಟೆಯ ಪಿಂಡಿಯನ್ನು ಅವನ ಬಾಯಿಗೆ ತುರುಕಿದರು.

ಇದನ್ನೆಲ್ಲ ಒಂದಿಷ್ಟೂ ಊಹಿಸದಿದ್ದ ಪಿಂಗಳನು ಮೊದಲು ಆಶ್ಚರ್ಯಪಟ್ಟು, ಆಮೇಲೆ ತನ್ನನ್ನು ಬಂಧಿಸುವವರಿಂದ ಬಿಡಿಸಿಕೊಳ್ಳಲು ಸ್ವಲ್ಪ ಹೆಣಗಾಡಿದನು. ಆದರೆ ತಾನು ಒಬ್ಬನೇ, ತನ್ನನ್ನು ಬಂಧಿಸಲು ನೋಡುವವರು ಐವರು !

ಕೂಡಲೇ ಅವನಿಗೆ ತನ್ನ ಸೇವಕನಾದ ಭಲ್ಲೂಕಕೇತು ನೆನಪಿಗೆ ಬಂದನು. ಎಂತಹ ಕಷ್ಟದಲ್ಲಿ ಸಿಕ್ಕಿಬಿದ್ದಾಗಾದರೂ ಸರಿಯೆ, ಒಂದಾನೊಂದು ಮಂತ್ರವನ್ನು ಉಚ್ಚರಿಸಿಬಿಟ್ಟರೆ, ಮರುಕ್ಷಣದಲ್ಲಿ ತಾನು ಸಹಾಯಕ್ಕೆ ಬರುವೆನೆಂದು ಹೇಳಿದ್ದಾನೆ ! ಅವನು ಹೇಳಿಕೊಟ್ಟ ಮಂತ್ರ ಪಿಂಗಳನ ನೆನಪಿಗೆ ಬಾರದೆ ಹೋಯಿತು.

ಎಷ್ಟೇ ತಲೆಬುರುಡೆ ಕೆದಕಿಕೊಂಡರೂ ಅದು ನೆನಪಾಗಲಿಲ್ಲ. ಅವನು ಈಗ ಪೂರ್ತಿ ಅಸಹಾಯನಾಗಿ ಅಣ್ಣಂದಿರ ತಂತ್ರಕ್ಕೆ ಒಳಗಾಗಿ ಹಡಗಿನ ಸರಂಗನಿಗೆ ಗುಲಾಮನಾಗಿ ಸಿಕ್ಕಿಕೊಂಡು ಬಿಟ್ಟಿದ್ದನು. ಪಕ್ಕದ ಕೋಣೆಯಲ್ಲಿ ನಿದ್ರಿಸಿಕೊಂಡಿದ್ದ ತಾಯಿಗೆ

ಇವು ಯಾವುವೂ ಗೊತ್ತೇ ಆಗಲಿಲ್ಲ. ಪಿಂಗಳನ ಕಾಲು ಕೈಗಳನ್ನು ಕಟ್ಟಿ ಹಾಕಿದ ಮೇಲೆ, ಕಲಾಸಿಗಳಿಬ್ಬರೂ ಅವನನ್ನು ಮರದ ದಿಮ್ಮಿಯ ಹಾಗೆ ಎತ್ತಿ ಹೆಗಲಿನ ಮೇಲೆ ಹಾಕಿಕೊಂಡು, ತಮ್ಮ ಯಜಮಾನನಾದ ಸರಂಗನ ಹಿಂದೆಯೇ ಹೊರಗೆ ನಡೆದು ಹೋದರು.

ಜೀವದತ್ತ ಲಕ್ಷದತ್ತರು ಕೂಡಾ ಅವರ ಹಿಂದೆಯೇ ಸಮುದ್ರ ತೀರದವರೆಗೂ ಹೋಗಿ, ಹಡಗಿನ ಸರಂಗನೊಂದಿಗೆ, "ಅಯ್ಯಾ! ಜಾಗ್ರತೆ! ಇವನನ್ನು ಬಿಟ್ಟುಗಿಟ್ಟೀರಿ! ಏನು ಮಾಡಿದರೂ ಬಿಡಬೇಡಿ! ಅವನು ವಿಷಸರ್ಪವೆಂದು ಈ ಮೊದಲೇ ಹೇಳಿದ್ದೇವಷ್ಟೆ?" ಎಂದರು.




"ವಿಷಸರ್ಪದ ಬಾಯಿಯನ್ನೇ ಬಿಗಿದಿದ್ದೇವೆ. ಇನ್ನು ಅದರ ಹಲ್ಲುಗಳನ್ನು ಹೇಗೆ ತೆಗೆಯಬೇಕೆಂಬುದೆಲ್ಲ ನನಗೆ ಗೊತ್ತಿದೆ. ನನ್ನ ಹಡಗಿನಲ್ಲಿ ಒಂದುಸಾರಿ ಹುಟ್ಟುಜಲ್ಲೆ ಹಿಡಿದನೆಂದರೆ, ಅದಕ್ಕೆ ಕಬ್ಬಿಣದ ಸಂಕಲೆಯಿಂದ ಅವನನ್ನು ಬಿಗಿದೆನೆಂದೇ ತಿಳಿಯಿರಿ. ಆಮೇಲೆ ಪರಮೇಶ್ವರನಾದರೂ ಅವನನ್ನು ಅಲ್ಲಿಂದ ಕದಲಿಸಲಾರನು" ಎಂದನು ಸರಂಗ.

ಜೀವದತ್ತ, ಲಕ್ಷದತ್ತರು ಸರಂಗನಿಗೆ ಒಂದಕ್ಕೆ ಎರಡು ಮೂರು ಸಾರಿ ಕೃತಜ್ಞತೆ ಹೇಳಿಕೊಂಡು ಮನೆಗೆ ಹಿಂದಿರುಗಿ ಏನೂ ತಿಳಿಯದವರಂತೆ ಮಲಗಿದರು. ಆಗ ಇನ್ನೂ ಸ್ವಲ್ಪ ರಾತ್ರಿ ಇದ್ದಿತು. ಸ್ವಲ್ಪ ಹೊತ್ತು ನಿದ್ದೆ ಮಾಡಿದವರಂತೆ ನಟಿಸಿ, ಬೆಳಗಾಗುತ್ತಲೇ ತಾಯಿಯ ಬಳಿಗೆ ಹೋಗಿ ಆಕೆಯನ್ನು ಎಬ್ಬಿಸಿ, "ಅಮ್ಮಾ, ಪಿಂಗಳ ಎಲ್ಲಿದ್ದಾನೆ?" ಎಂದು ಕೇಳಿದರು ಸ್ವಲ್ಪ ಗಾಬರಿಯ ದನಿಯಲ್ಲಿ.

ತಾಯಿ ಅವರನ್ನು ಸರಳ ದೃಷ್ಟಿಯಿಂದ ನೋಡಿ, "ಏಕೆ, ಹಾಗೇಕೆ ಗಾಬರಿಯಾಗಿ ಕೇಳುತ್ತೀರಿ? ಇನ್ನೂ ಅವನ ಕೋಣೆಯಲ್ಲಿ ನಿದ್ದೆ ಮಾಡಿಕೊಂಡಿದ್ದಾನು. ಏಳುತ್ತಾನೆ ಸ್ವಲ್ಪ ಹೊತ್ತಿನಲ್ಲಿ" ಎಂದಳು.

"ಅವನ ಕೋಣೆಯಲ್ಲಿ ಇಲ್ಲ. ಮನೆಯಲ್ಲೆಲ್ಲಿಯೂ ಕಾಣುವುದಿಲ್ಲ. ನೀನೇನಾದರೂ ಕೆಲಸ ಹೇಳಿ ಕಳಿಸಿದಿಯೇನೋ ಅಂತ ಕೇಳಿದೆವು" ಎಂದನು ಜೀವದತ್ತ.

ಆ ಮಾತುಕೇಳಿ ತಾಯಿಗೆ ಒಂದು ಬಗೆಯ ಭಯವು ಹಿಡಿಯಿತು. ಅವಳು ಗಡಿಬಿಡಿಯಿಂದ ಮಂಚದಿಂದಿಳಿದು ಅವನನ್ನು ಕರೆಯುತ್ತಾ ಮನೆಯೊಳಗೆಲ್ಲಾ ಓಡಾಡಿದಳು. ಅವಳ ಭಯಗಾಬರಿಗಳನ್ನು ನೋಡಿ ಜೀವದತ್ತನು, "ಅಮ್ಮಾ, ಅಷ್ಟೇನೂ ಹೆದರಬೇಡ. ನನಗೊಂದು ಅನುಮಾನವಾಗುತ್ತಾ ಇದೆ. ರಾತ್ರಿ ನಮ್ಮಲ್ಲಿಗೆ ಬಂದ ಅತಿಥಿಗಳೊಂದಿಗೆ ಮಾತಾಡುವಾಗ ಪಿಂಗಳನು ಹಡಗಿನ ಪ್ರಯಾಣವೆಂದರೆ ತನಗೆ ಬಹಳ ಖುಷಿ ಎಂದು ಹೇಳಿದ್ದುಂಟು. ಬಂದವನು ಹಡಗಿನ ಸರಂಗ ತಾನೇ? ಅವನು ಪಿಂಗಳನನ್ನು ಕರಕೊಂಡು ಹೋದನೋ ಏನೋ?" ಎಂದನು.

"ಹೌದಮ್ಮ. ಹಾಗೇ ಹೋಗಿರಬೇಕು. ಯಾವುದೋ ಒಂದು ದ್ವೀಪದಲ್ಲಿ ದೊಡ್ಡದೊಂದು ಪಾಳು ಬಿದ್ದ ಕೋಟೆಯಿದೆ ಎಂದು ಆ ಸರಂಗ ಹೇಳಿದ್ದಾನೆ. ಅದರ ಬುನಾದಿಯಲ್ಲಿ ದೊಡ್ಡ ದೊಡ್ಡ ಕೊಪ್ಪರಿಗೆಗಳಿವೆಯಂತೆ. ಅಂಥ ನಿಧಿಗಳನ್ನು ಹೊರಗೆ ಎತ್ತಬೇಕಾದರೆ ಅದರ ತಂತ್ರ ಮಂತ್ರಗಳೆಲ್ಲ ತನಗೆ ಗೊತ್ತು ಅಂತ ಪಿಂಗಳ ಹೇಳುತ್ತಿದ್ದ. ಅದಕ್ಕೇ ಹೋದನೇನೋ! ನಿನ್ನ ಹತ್ತಿರ ಹೇಳಿದರೆ ನೀನು ಹೋಗಬೇಡವೆನ್ನುತ್ತೀ ಅಂತ ಹೇಳಿರಲಿಕ್ಕಿಲ್ಲ" ಎಂದನು ಲಕ್ಷದತ್ತ.

ಮಾಯೆ ಮೋಸಗಳೊಂದೂ ಅರಿಯದ ತಾಯಿಗೆ ಅದರಲ್ಲೇನೋ ಸತ್ಯವಿರುವಂತೆ ತೋರಿತು. ಅವಳು ನಿರಾಶೆಯಿಂದ ಕೈಗಳನ್ನು ಜೋಡಿಸಿ, "ಹೌದು, ಅಪ್ಪಗಳಿರಾ. ಹಾಗೇ ಇದ್ದೀತು. ಪಿಂಗಳನು ಯಾವಾಗಲೂ ಅದೃಷ್ಟವಂತನೇ! ಅವನ ನ್ಯಾಯ ಬುದ್ಧಿಯೂ, ಒಳ್ಳೆಯ ನಡತೆಯೂ ಅವನನ್ನು ಎಲ್ಲಾ ಆಪತ್ತಿನಿಂದಲೂ ಕಾಪಾಡದಿರವು. ನನ್ನ ಕಂದ ಬೇಗದಲ್ಲೇ ನನ್ನ ಬಳಿಗೆ ಬರುತ್ತಾನೆ!" ಎಂದು ದೇವರ ಪ್ರಾರ್ಥನೆ ಮಾಡಿದಳು.

ತಾಯಿಯ ಪ್ರವರ್ತನೆಗಳು ದುರ್ಬುದ್ಧಿಯ ಅಣ್ಣತಮ್ಮಂದಿರಿಗೆ ಕೋಪವನ್ನುಂಟು ಮಾಡಿತು. ಅವರು ತಾಯಿಯನ್ನು ನೋಡಿ ವಿಕಟವಾಗಿ ನಕ್ಕು "ಓಹೋಹೋ! ಅವನೊಬ್ಬ ಬುದ್ಧಿವಂತನಾದ ಮಗ ನಿನಗೆ! ನಾವೆಲ್ಲಾ ಬುದ್ಧಿಗೇಡಿಗಳು! ದುಷ್ಟರು ಹೌದಾ? ಮೊದಲಿನಿಂದಲೂ ನೀನು ಅವನ ಮೇಲೆಯೇ ಪಕ್ಷಪಾತ ತೋರಿಸುತ್ತ ಇದ್ದೀಯೇ! ಇನ್ನೂ ನಾವು ಈ ಮನೆಯಲ್ಲಿ ಒಂದು ಕ್ಷಣವೂ ಇರಲಾರೆವು. ನೀನಾಯಿತು, ನಿನ್ನ ಆ ಕೊಂಡಾಟದ ಮಗನಾಯಿತು. ಅಪ್ಪ ಬಿಟ್ಟು ಹೋದ ಸೊತ್ತು ಎಲ್ಲಿದೆಯೋ ಹೇಳು. ಕೊಡು ನಮಗೆ!" ಎಂದು ಮನೆಯೊಳಗೆ ಹುಡುಕತೊಡಗಿದರು.

ತಾಯಿ ಅವರನ್ನು ತಡೆಯುತ್ತ, "ನಿಮ್ಮ ಅಪ್ಪ ಸಂಪಾದಿಸಿದ ಸೊತ್ತು ಪೂರಾ ನೀವಿಬ್ಬರೂ ಯಾವಾಗಲೋ ಲಗಾಡಿ ತೆಗೆದುಹಾಕಿದಿರಿ. ಈಗ ಇಲ್ಲಿ ಇರುವುದೆಲ್ಲವೂ ಪಿಂಗಳನು ಕಷ್ಟಪಟ್ಟು ಸಂಪಾದಿಸಿದ್ದೇ" ಎಂದಳು.

ಆ ಮಾತು ಕೇಳಿ ಅಣ್ಣತಮ್ಮಂದಿರಿಬ್ಬರೂ ಅತ್ಯುಗ್ರರಾಗಿ, ತಾಯಿಯನ್ನು ಹೀನಾಯವಾಗಿ ಬಾಯಿಗೆ ಬಂದಂತೆ ಬಯ್ಯುತ್ತ, ಮಂತ್ರವೇತ್ತನಾದ ಪದ್ಮಪಾದನಿಂದ ಪಿಂಗಳನು ತಂದಿದ್ದ ಧನವನ್ನೂ, ಮಹಿಮೆಯ ಚೀಲವನ್ನೂ ಹುಡುಕಿ ಹೊರಗೆಳೆದುಕೊಂಡರು. "ಹೀಗೆ ಮಾಡಬೇಡಿರಪ್ಪಾ!" ಎಂದು ಕೂಗಿದಳು ತಾಯಿ. (ಇನ್ನೂ ಇದೆ)






## ೧೨

[ಅಣ್ಣಂದಿರು ಹೇಳಿಕೊಂಡಂತೆ ಪಿಂಗಳನು ಹಡಗಿನ ಸರಂಗನಿಗೆ ತನ್ನ ಮನೆಯಲ್ಲಿ ತೃಪ್ತಿಯಾಗುವಂತೆ ಔತಣ ಮಾಡಿಸಿದನು. ಮೊದಲೇ ಮಾತಾಡಿಕೊಂಡಂತೆ ಸರಂಗನು ತನ್ನ ಅನುಚರರ ಸಹಾಯದಿಂದ, ಪಿಂಗಳನನ್ನು ಬಂಧಿಸಿ ತನ್ನ ಹಡಗಿಗೆ ಒಯ್ದು ಹಾಕಿದನು. ಅಣ್ಣಂದಿರಿಬ್ಬರೂ ಮನೆಗೆ ಹಿಂದಿರುಗಿ ತಾಯಿಯನ್ನು ಹೊಡೆದು ಬೈದು ಬಲವಂತದಿಂದ ಪಿಂಗಳನು ತಂದ ಧನವನ್ನೂ, ಮಹತ್ವದ ಚೀಲವನ್ನೂ ವಶಪಡಿಸಿಕೊಂಡರು.]

ಜೀವದತ್ತನೂ, ಲಕ್ಷದತ್ತನೂ ಕೂಡಿ, ಸಂತೋಷಾತುರಗಳಿಂದ, ಪಿಂಗಳನು ಮನೆಯಲ್ಲಿಟ್ಟ ಧನದ ಚೀಲವನ್ನು, ಬೇಗಬೇಗನೆ ಬಿಚ್ಚಿದರು. ಅದರೊಳಗಿದ್ದ ಬಂಗಾರವನ್ನೂ, ಬೆಲೆಯಿಲ್ಲದ ಮಣಿ ಮಾಣಿಕ್ಯಗಳನ್ನೂ, ಮುತ್ತುಗಳನ್ನೂ ನೋಡಿ ಬೆರಗಾಗಿ ಮರಗಟ್ಟಿ ಹೋದರು.

ಸ್ವಲ್ಪಹೊತ್ತಿಗೆ ಯಥಾಸ್ಥಿತಿಗೆ ಬಂದರು. ಪಿಂಗಳನು ಏನೋ ಸ್ವಲ್ಪ ಧನ ಸಂಪಾದಿಸಿಕೊಂಡು ಬಂದಿರಬೇಕೆಂದು ಅವರು ಅಂದುಕೊಂಡಿದ್ದರೆ, ಇಷ್ಟು ದೊಡ್ಡ ಮೊತ್ತವನ್ನು ತಂದು ಹಾಕಿದ್ದಾನಲ್ಲ! ಇದು ಸ್ವಪ್ನದಲ್ಲಿಯೂ ಅಂದುಕೊಳ್ಳದ ನಿಧಿ! ಅದೃಷ್ಟ ದೇವತೆಯೇ ತಮ್ಮ ಮುಂದೆ ಪ್ರತ್ಯಕ್ಷಳಾಗಿದ್ದಾಳೆ! ಇನ್ನು ತಮಗೆ ಈಡುಜೋಡಾದವರು ಪ್ರಪಂಚದಲ್ಲಿ ಯಾರೂ ಇರಲಿಕ್ಕಿಲ್ಲ.

"ಆಹಾ! ಈ ಧನದಿಂದ ನಮ್ಮ ದರಿದ್ರವಷ್ಟೇ ಅಲ್ಲ, ಹಿಂದೆ ಮುಂದೆ ಏಳು ತಲೆಮಾರಿನ ದರಿದ್ರವೂ ತೀರಿಹೋಗುತ್ತದೆ!" ಎಂದು ಜೀವದತ್ತನು ಅವುಗಳನ್ನು ಆಲಿಂಗಿಸಿಕೊಂಡನು.

"ಹೌದಣ್ಣ, ಹೌದು. ನಾವು ಇಷ್ಟು ದೊಡ್ಡ ಧನಿಕರಾದೆನೆಂದು ತಿಳಿದುಬಿಟ್ಟರೆ ಈ ಅವಂತೀ




ನಗರದ ರಾಜನೇ ತಮ್ಮ ಮಗಳಂದಿರನ್ನು ನಮಗೆ ಕೊಡುವೆನೆಂದು ಮಂತ್ರಿಗಳೊಂದಿಗೆ ಓಡಿ ಬಂದಾನು! ರಾಜನ ಅಳಿಯಂದಿರಾಗುವುದೆಂದರೆ ಸಾಮಾನ್ಯವೆ!" ಎಂದನು ಲಕ್ಷದತ್ತನು ಉತ್ಸಾಹದಿಂದ.

ಮಗಂದಿರಿಬ್ಬರೂ ಮೈ ತಿಳಿಯದೆ ಈ ವಿಧವಾಗಿ ಮಾತಾಡಿಕೊಳ್ಳುವುದು ಅಲ್ಪ ಸ್ವಲ್ಪ ತಾಯಿಯ ಕಿವಿಗೆ ಬಿದ್ದಿತು.

ಅದರಿಂದ ಅವಳಲ್ಲಿ ಮತ್ತೆ ಪುತ್ರವಾತ್ಸಲ್ಯ ಒಸರ ತೊಡಗಿ, ಅವರು ಸ್ವಲ್ಪ ಮೊದಲು ತನ್ನನ್ನು ಹೊಡೆದು ಬಡಿದು ಹಿಂಸಿಸಿದುದನ್ನೆಲ್ಲಾ ಮರೆತು, "ಹೌದೇನ್ರೋ ಕಂದಗಳಿರಾ ! ಮದುವೆಯಾಗ್ತೀರಾ ! ಇನ್ನು ಮೇಲಾದರೂ ಒಂದು ಕೆಲಸ ಮಾಡಿ. ಮೊದಲಿನ ಹಾಳು ಬುದ್ಧಿ ಬಿಟ್ಟು ಹಣವನ್ನು ಕೆಟ್ಟ ಕೆಟ್ಟ ಚಾಳಿಗಳಿಗೆ ಖರ್ಚು ಮಾಡದೆ ಹೆಂಡಂದಿರನ್ನು ಚೆನ್ನಾಗಿ ನೋಡಿಕೊಂಡು ಮನೆಯವರಾಗಿ ಬದುಕಿರಪ್ಪಾ. ನನಗೆ ಬೇಕಾದ್ದು ಅದೇ. ನಾನು ನಿಮ್ಮ ನೆರಳಲ್ಲಿದ್ದು ಮೊಮ್ಮಕ್ಕಳೊಂದಿಗೆ ತಣ್ಣಗೆ ಕಾಲ ಕಳೆದೇನು ಮಕ್ಕಳೇ" ಎಂದಳು ರಾಗವಾಗಿ.

ತಾಯಿ ಹಾಗೆ ಹೇಳಿದುದನ್ನು ಕೇಳಿ ಆ ಸೋದರರಿಬ್ಬರೂ, ಹಾವುಗಳ ಹಾಗೆ ಭುಸುಗುಟ್ಟಿ, "ನಾವು ಏನು ಮಾಡಿಕೊಂಡರೆ ನಿನಗೇನು ಮುದಿಗೂಬೆ ! ಮದುವೇನೇ ಮಾಡಿಕೊಳ್ತೇವೆ, ಇಲ್ಲಾ ಬೈರಾಗಿಗಳಾಗಿ ಹೋಗ್ತೇವೆ, ಅದೆಲ್ಲಾ ನಿನಗೇಕೆ ? ನಿನಗೆ ನಮ್ಮ ಮೇಲೆ ಒಂದಿಷ್ಟೂ ಪುತ್ರ ಪ್ರೇಮ ಇಲ್ಲ. ಎಲ್ಲಾ ಬರೀ ವೇಷ ! ನಮಗೆ ಗೊತ್ತಾಗುವುದಿಲ್ಲವೆಂದುಕೊಂಡಿದ್ದೀಯಾ ? ನಿನಗೆ ಸರ್ವಸ್ವವೂ ಆ ಪಿಂಗಳ ಒಬ್ಬನೇ. ಸುಳ್ಳು ಪೊಳ್ಳು ಮಾತುಗಳಿಂದ ನಮ್ಮನ್ನು ಮೋಸಪಡಿಸಿ ಈ ನಮ್ಮ ತಂದೆಯ ಆಸ್ತಿಯಲ್ಲಿ ಪಾಲು ಪಡೆಯಬೇಕೆಂದು ನೋಡುವಿ. ನಾಳೆ ಸಾಯಲಿಕ್ಕೆ ಬಿದ್ದಿರುವವಳಿಗೆ ಇಷ್ಟೆಲ್ಲಾ ಏಕೆ ? ದುರಾಶೆಯ ದುಷ್ಟ ಮುದಿಗೂಬೆ!" ಎಂದರು.

"ಅಯ್ಯಯ್ಯೋ ! ಅದೆಲ್ಲಾ ನಿಮ್ಮ ಅಪ್ಪ ಗಳಿಸಿದ್ದು ಅಲ್ಲವೇ ಅಲ್ಲ. ಎಲ್ಲವೂ ಪಿಂಗಳನ ಕಷ್ಟಾರ್ಜಿತ. ಈಗ ಅದನ್ನು ಹೇಗೂ ನೀವು ಹಂಚಿಕೊಳ್ಳುತ್ತೀರಿ. ಮುದುಕಿಯಾದ ನನಗೆ ನಿಮ್ಮನ್ನು ತಡೆಯಲು ಸಾಧ್ಯವಿಲ್ಲ ನಿಜ. ನಾನು ಕೇಳುವುದೆಲ್ಲಾ ಆ ಮಹತ್ವದ ಚೀಲ ಮಾತ್ರ ನನಗೆ ಕೊಟ್ಟುಬಿಡೀ ಅಂತ ! ಅದು ನನ್ನ ಹತ್ತಿರ ಇದ್ದರೆ, ನಿಮಗೆ ಏನು ಬೇಕಾದರೂ ಬೇಕಾದಾಗ ನನ್ನನ್ನು ಕೇಳಿರಿ. ಅದರೊಳಗಿಂದ ನಾನೇ ತೆಗೆದು ನಿಮಗೆ ಕೊಡುತ್ತೇನೆ. ನಾನೂ ಸಾಯುವವರೆಗೆ ಬದುಕಿಕೊಂಡಿರುತ್ತೇನೆ. ಅಷ್ಟಾದರೂ ಮಾಡಿರಪ್ಪಾ ! ಅದಿದ್ದರೆ ನಾನೂ ನೀವೂ ಬೇಕಾದ ಔತಣ ಮಾಡಿಕೊಳ್ಳಬಹುದು. ಇಲ್ಲದಿದ್ದರೆ ನಾನು ಮನೆಮನೆ ತಿರುಗಿ ಭಿಕ್ಷೆ ಎತ್ತಬೇಕು. ಅದಕ್ಕೂ ಶಕ್ತಿ ಬೇಕಲ್ಲಾ !" ಎಂದಳು ತಾಯಿ.

"ನೀನು ಮೂರು ಮಾತಿಗೂ ನಮ್ಮ ತಾಯಿಯಾಗಲಾರೆ. ಹಾಗಿರುವಾಗ ನೀನು ಭಿಕ್ಷೆ ಬೇಡಿದ



ರೇನು, ಬೀದಿಗೆ ಬಿದ್ದರೇನು ? ನೀನೇ ನಮ್ಮನ್ನು ಹೆತ್ತದ್ದು ಅಂತ ನಾವೇನು ಕಂಡಿದ್ದೇವೆಯೇ?" ಎಂದನು ಜೀವದತ್ತ ತಿರಸ್ಕಾರದಿಂದ.

"ಹೌದಣ್ಣ, ನಿನ್ನ ಮಾತು ನಿಜ. ನಮ್ಮ ಅಪ್ಪನ ಆಸ್ತಿ ಪೂರಾ ಅಡಗಿಸಿಟ್ಟು, ಎಲ್ಲವನ್ನೂ ಚಿಕ್ಕ ಮಗ ನಿನಗೇ ಕೊಡಲು ನೋಡುವವಳು ನಮ್ಮ ತಾಯಿ ಹೇಗಾಗುತ್ತಾಳೆ? ಎಲ್ಲಿಂದ ಬಂದವಳೋ ಏನೋ!" ಎಂದನು ಲಕ್ಷದತ್ತ.

ಇನ್ನು ಈ ಮಕ್ಕಳೊಡನೆ ವಾದಮಾಡಿ ಲಾಭ ವಿಲ್ಲವೆಂದು ತಾಯಿ ಪೂರ್ತಿ ನಿರಾಶಳಾಗಿ ಗೋಡೆಗೆ ಒರಗಿ ಸುಮ್ಮನೆ ಕುಸಿದು ಕುಳಿತಳು.

ಜೀವದತ್ತ ಲಕ್ಷದತ್ತರು ಕೂಡಿ ಓಂಗಳನು ತಂದ ಧನವನ್ನೆಲ್ಲಾ ಎರಡು ಭಾಗ ಮಾಡಿಕೊಂಡರು. ಆ ಕೆಲಸ ಮುಗಿದ ಮೇಲೆ ಮಹತ್ವದ ಚೀಲವನ್ನು ಕುರಿತು ಅವರೊಳಗೆ ವಾದ ಪ್ರತಿವಾದ ಶುರು ವಾಯಿತು. ಮೊದಲು ನಾನಿಟ್ಟುಕೊಳ್ಳುತ್ತೇನೆ, ತಾನಿಟ್ಟುಕೊಳ್ಳುತ್ತೇನೆ ಎಂದು ಪ್ರಾರಂಭ ವಾಯಿತು.

ತಾಯಿಯ ಬಾಯಿಯಿಂದಲೇ ಆ ಚೀಲದ ಮಹತ್ವ ಗೊತ್ತಾಗಿತ್ತು. ಅಂತಲೇ ಅಣ್ಣ ತಮ್ಮ ಇಬ್ಬರೂ ಅದು ನನಗೆ ತನಗೆ ಎಂದು ವಾದ ಮಾಡಲು ಉಪಕ್ರಮಿಸಿದರು. ಅದು ಕ್ರಮವಾಗಿ ಜೋರು ಜೋರಾಗುತ್ತ ಒಬ್ಬರ ಕುತ್ತಿಗೆ ಒಬ್ಬರು ಕಡಿಯುವ ಮಟ್ಟಕ್ಕೆ ಬಂದಿತು.

ಆಗ ತಾಯಿ ಅವರಿಬ್ಬರ ಹತ್ತಿರ ಬಂದು ಅಂಗಲಾಚುತ್ತ, "ನೀವು ಹೀಗೆ ಜಗಳಾಡಿಕೊಂಡು ಒಬ್ಬರೊಬ್ಬರಿಗೆ ಹಾನಿ ಮಾಡಬೇಡಿರಪ್ಪಾ. ನೀವು ನನ್ನನ್ನು ಎಷ್ಟೇ ಹೀನಾಯವಾಗಿ ನೋಡಿದರೂ ನೀವು ನನ್ನ ಮಕ್ಕಳೆಂಬುದನ್ನು ನಾನು ಹೇಗೆ ಮರೆತೇನು? ಇಬ್ಬರೂ ಶಾಂತರಾಗಿ ಆ ಚೀಲ ನನ್ನ ಹತ್ತಿರ ಬಿಟ್ಟುಬಿಡಿ. ಆಗ ನಿಮ್ಮ ಜಗಳಕ್ಕೆ ಕಾರಣವೇ ಇರುವುದಿಲ್ಲ. ನಾನು ನಿಮಗಿಬ್ಬರಿಗೂ ಇದರ ಫಲ ಕೊಡುತ್ತಾ ಇರುತ್ತೇನೆ." ಎಂದಳು.

"ನಿಲ್ಲಿಸು ನಿನ್ನ ರಾಗ!" ಎಂದು ಜೀವದತ್ತನು ತಾಯಿಗೆ ಗದರಿಸಿ, "ಈ ಚೀಲದಲ್ಲಿ ನನ್ನ ಪಾಲು ನಾನು ತೆಗೆದುಕೊಳ್ಳುವುದೇ ಸರಿ" ಎಂದು ಓಡಿ ಹೋಗಿ ಮೆಟ್ಟುಗತ್ತಿಯನ್ನು ತಂದು ಚೀಲವನ್ನು ಅಡ್ಡಕ್ಕೆ ಕೊಯ್ಯಲು ನೋಡಿದನು.

ಆಗ ತಾಯಿ ಅವನಿಗೆ ಅಡ್ಡ ಬಂದು, "ಅಯ್ಯಯ್ಯೋ! ಜೀವದತ್ತಾ! ಹಾಗೆ ಮಾತ್ರ ಮಾಡಬೇಡ. ಒಂದುಸಾರಿ ಆ ಚೀಲಕ್ಕೆ ಗಾಯ ಮಾಡಿ ಬಿಟ್ಟರೆ ಅದರ ಮಹತ್ವವೆಲ್ಲಾ ಹೋಗಿ ಬಿಡುತ್ತದೆ. ಮತ್ತೆ ಅದು ಇದ್ದರೂ ಒಂದೇ ಇಲ್ಲದಿದ್ದರೂ ಒಂದೇ. ಅದನ್ನು ಯಾರೋ ಒಬ್ಬರು ಮಾತ್ರವೇ ಇಟ್ಟುಕೊಂಡರೆ ಸುಖವಾಗಿ ಬದುಕ ಬಹುದು. ಹರಿದು ಎರಡು ಮಾಡಿದರೆ ಅದೃಷ್ಟ ಹೋದ ಹಾಗೆಯೇ!" ಎಂದಳು.



"ಹಾಗಾದರೆ ಆ ಚೀಲ ನನಗೇ ಬೇಕು!" ಎಂದು ಲಕ್ಷದತ್ತನು, ಅದನ್ನು ಎರಡು ಕೈಗಳಿಂದಲೂ ಗಟ್ಟಿಯಾಗಿ ಮುಮುಕಿ ಹಿಡಿದನು. "ಛೀ, ಭಂಡ ! ನಾನು ಈ ಮನೆಗೆ ದೊಡ್ಡವ.ಇಂತಹ ಮಹತ್ವದ ವಸ್ತುಗಳೆಲ್ಲ ಜ್ಯೇಷ್ಠ ಪುತ್ರನಿಗೆ ಸೇರಬೇಕೆಂದು ಶಾಸ್ತ್ರಗಳೂ ಪುರಾಣಗಳೂ ಘೋಷಿಸುತ್ತವೆ ಗೊತ್ತೇನೋ ? ಇನ್ನು ಉಸಿರೆತ್ತಬೇಡ!" ಎಂದನು ಜೀವದತ್ತ.

"ನಿನ್ನ ಶಾಸ್ತ್ರ ಪುರಾಣ ಮೂಲೆಗೆ ಹಾಕು-ಒಳ್ಳೇ ಮಾತಿನಲ್ಲಿ ಸುಮ್ಮನಿದ್ದೀ ಬಚಾವ್, ಇಲ್ಲದಿದ್ದರೆ..." ಎಂದು ಕೈ ಎತ್ತಿ ಅಣ್ಣನಿಗೆ ಗುದ್ದಲು ನೋಡಿದ ಲಕ್ಷದತ್ತ. ಇಬ್ಬರೂ ಒಬ್ಬರನ್ನೊಬ್ಬರು ದೂಡಾಡಿಕೊಳ್ಳ ತೊಡಗಿದರು.

ಹೀಗೆ ಮನೆಯೊಳಗೆ ಅಣ್ಣತಮ್ಮಂದಿರು ರಾತ್ರಿಯಲ್ಲಿ ಜಗಳ ಮಾಡಿಕೊಂಡಿರುವಾಗ, ಬೀದಿಗಳಲ್ಲಿ ಗಸ್ತೀ ತಿರುಗುತ್ತಿದ್ದ ಕೋತ್ವಾಲ ಭಟನೊಬ್ಬ ಅಲ್ಲಿ ನಿಂತು, ಕಿವಿಗೊಟ್ಟು ಕೇಳಿದನು. ಅವನಿಗೆ ಧನದ ಸಂಗತಿಯೂ, ಮಹತ್ವದ ಚೀಲದ ವಿಷಯವೂ ಗೊತ್ತಾಯಿತು. ಎಲ್ಲಾ ಕೇಳಿ ಇದು ಬಹು ದೊಡ್ಡ ವಿಷಯವೆಂದುಕೊಂಡು, ಬೆಳಗಾಗುವಷ್ಟರಲ್ಲಿ ಅವನು ಮಹಾ ರಾಜನ ಬಳಿಗೆ ಹೋಗಿ, ತಾನು ಕೇಳಿದ ಹೊಸ ಬಗೆಯ ಸಂಗತಿಯನ್ನೆಲ್ಲಾ ನಿವೇದಿಸಿಕೊಂಡನು.

ಮೊದಲೇ ಅವಂತೀ ನಗರದ ರಾಜನು ಪರಮ ಲೋಭಿಯಾಗಿದ್ದನು. ಅಂಥವನು ಈ ರಹಸ್ಯವನ್ನು ಕೇಳಿದ ಕೂಡಲೇ, ಅವನಲ್ಲಿ ಕೆಟ್ಟ ದುರಾಶೆಯ ತುರಿಕೆ ಪ್ರಾರಂಭವಾಯಿತು. ಕೂಡಲೇ ಅವನು ದಂಡನಾಯಕನನ್ನು ಕರೆಯಿಸಿ, ಆ ಅಣ್ಣತಮ್ಮಂದಿರನ್ನೂ, ಆ ಮನೆಯೊಳಗಿರುವ ಎಲ್ಲಾ ವಸ್ತುಗಳನ್ನೂ ಒಂದು ಕೂಡಾ ಬಿಡದೆ ಹುಡುಕಿ ಹಿಡಿದು ತರಬೇಕೆಂದು ಆಜ್ಞೆ ಮಾಡಿದನು.

ದಂಡನಾಯಕನು ಭಟರನ್ನು ಕರೆದುಕೊಂಡು ಬಂದು ಜೀವದತ್ತನನ್ನೂ ಲಕ್ಷದತ್ತನನ್ನೂ ಸೆರೆ ಹಿಡಿದನು. ತರುವಾಯ ಮನೆಯೊಳಗೆಲ್ಲಾ ಜಾಡಿಸಿ ಗಾಳಿಸಿ, ಧನವನ್ನೂ, ಪಾತ್ರ ಪರಡಿಗಳನ್ನೂ, ಮಹತ್ವದ ಚೀಲವನ್ನೂ ವಶಪಡಿಸಿ ಬಂಡಿಗಳಲ್ಲಿ ಹಾಕಿಸಿ ರಾಜಾಸ್ಥಾನಕ್ಕೆ ತಂದು ಹಾಕಿದನು. ಹೇರಳ ಧನವು ಸಿಕ್ಕಿದುದನ್ನು ನೋಡಿ ರಾಜನ ಕಣ್ಣುಗಳು ಗಿರಿಗಿರಿ ತಿರುಗಿದುವು. ತಾನು ನೋಡುವುದೆಲ್ಲಾ ಕನಸೇನೋ ಅಂದುಕೊಂಡು ಕಣ್ಣುಗಳನ್ನು ಸಾಧ್ಯವಾದಷ್ಟು ತೆರೆದು ನೋಡಿದನು.

ಜೀವದತ್ತ ಲಕ್ಷದತ್ತರೊಡನೆ ವಿಚಾರಿಸಿದಾಗ ಅವರು ನಡೆದ ಸಂಗತಿ ಹೇಳಲು ನಿರಾಕರಿಸಿದರು. ರಾಜನು ಭಟರಿಂದ ನಾಲ್ಕಾರು ಕೊರಡೆಗಳ ಬಿಸಿ ಏರಿಸಿದ ಕೂಡಲೇ, ಇಬ್ಬರೂ ಅಳುತ್ತಾ, ಮೊದಲಿನಿಂದಲೇ ನಡೆದ ಕಥೆಯನ್ನೆಲ್ಲಾ ರಾಜನ ಮುಂದೆ ನಿವೇದನೆ ಮಾಡಿದರು.

"ಓಹೋ ! ಹಾಗಾದರೆ ಈ ಸೊತ್ತು ಯಾವತ್ತೂ ನಿಮ್ಮದು ಅಲ್ಲವೆಂದು ಆಯಿತು !" ಎಂದು ರಾಜನು



ಸಂತೋಷದಿಂದ ನಕ್ಕು, "ರಾಜ್ಯದಲ್ಲಿ ಹಕ್ಕುದಾರರಾರೂ ಇಲ್ಲದಿರುವ ಸ್ಥಿರಚರ ಸೊತ್ತುಗಳೆಲ್ಲಾ ನ್ಯಾಯಶಾಸ್ತ್ರ ರೀತಿಯಂತೆ ರಾಜನಿಗೇ ಸೇರುತ್ತದೆ. ನೀವು ನಿಮ್ಮ ತಮ್ಮನೆಂದು ಹೇಳುವ ಹುಡುಗನನ್ನು ಗುಲಾಮನಾಗಿ ಮಾರಿಯೂ ಆಯಿತು. ಆದುದರಿಂದ ಅವನಿಗೆ ಇನ್ನು ಈ ಸೊತ್ತುಗಳಲ್ಲಿಯೂ, ಪೌರ ಹಕ್ಕಿನಲ್ಲಿಯೂ ಯಾವುದೊಂದು ಹಕ್ಕೂ ಇಲ್ಲ. ಇನ್ನು ನಿಮ್ಮಿಬ್ಬರ ಸಂಗತಿ. ನೀವು ನಿಮ್ಮದಲ್ಲದ ಆಸ್ತಿಯನ್ನು ರಹಸ್ಯವಾಗಿ ಹಂಚಿಕೊಳ್ಳುವುದರಲ್ಲಿ ತಗಾದೆ ನಡೆಸಿಕೊಂಡಿದ್ದೀರಿ. ಆದಕ್ಕಾಗಿ ನಿಮಗೆ ಇಪ್ಪತ್ತು ವರುಷ ಕಾರಾಗಾರ ಶಿಕ್ಷೆ ವಿಧಿಸುತ್ತೇನೆ" ಎಂದನು.

"ಮಹಾಪ್ರಭುಗಳೇ! ನಮ್ಮನ್ನು ದಯಮಾಡಿ ಬಿಟ್ಟುಬಿಡಿರಿ! ಆ ಧನವಾಗಲೀ, ಮಹತ್ವದ ಜೀಲವಾಗಲೀ ನಮಗೆ ಬೇಡ. ಸ್ವೇಚ್ಛೆಯಾಗಿ ಬದುಕಿಕೊಂಡಿರಲು ಅಪ್ಪಣೆ ಕೊಡಿರಿ. ಕಾಡಿಗೆ ಹೋಗಿ ಯಾದರೂ ಬದುಕಿಕೊಂಡಿರುತ್ತೇವೆ." ಎಂದು ಜೀವದತ್ತ, ಲಕ್ಷದತ್ತರು ಬೇಡಿಕೊಂಡರು.

ಆದರೆ ಅವರನ್ನು ಸ್ವೇಚ್ಛೆಯಾಗಿ ಬಿಡಲು ರಾಜನಿಗೆ ಇಷ್ಟವಿರಲಿಲ್ಲ. ಅಷ್ಟೆಲ್ಲಾ ಮಾಡಿದವರು ಸ್ವತಂತ್ರರಾಗಿದ್ದರೆ ಇನ್ನೆಷ್ಟೆಲ್ಲ ಮಾಡುವರೋ, ಯಾವ ಭೂತ ಮಂತ್ರಗಾರ ಸ್ನೇಹಿತನಿಂದ ತನಗೇನು ಘಾತ ಮಾಡಿಸುವರೋ ಎಂದು ಅಂತರಂಗದಲ್ಲಿ ಶಂಕಿಸಿದನು. ಅಥವಾ ಜನರ ನಡುವೆ ಇವರು ರಾಜನು ತಮ್ಮ ಸೊತ್ತನ್ನೆಲ್ಲಾ ಅಪಹರಿಸಿದನೆಂದು ಗೋಳಿಟ್ಟರೂ ಕಷ್ಟವೇ. ಆಗ ಪ್ರಜೆಗಳಲ್ಲಿ ಕೆಲವರಿಗಾದರೂ ರಾಜನ ಮೇಲೆ ದುರಭಿಪ್ರಾಯ ಉಂಟಾಗುವ ಸಂಭವವಿದೆ. ಅದು ಕ್ರಮೇಣ ಬಂಡಾಯಕ್ಕೂ ತಿರುಗೀತು!

"ಎಲೈ ದುಷ್ಟ ಸಹೋದರರೇ! ನಿಮ್ಮಷ್ಟಕೆ ನೀವೇ ಮಾಡಿದ ತಪ್ಪುಗಳನ್ನು ಒಪ್ಪಿಕೊಂಡದ್ದಷ್ಟೇ ಅಲ್ಲದೆ, ಹಡೆದ ತಾಯಿಯನ್ನು ಹಿಂಸಿಸಿರುವುದನ್ನೂ ಹೇಳಿಕೊಂಡಿದ್ದೀರಿ. ಆದ್ದರಿಂದ ನಿಮಗೆ ಕಾರಾಗಾರದ ಶಿಕ್ಷೆ ತಪ್ಪಲಾರದು. ಇನ್ನು ನಿಮ್ಮ ತಾಯಿಗೆ ಜೀವಿತಾಂತದವರೆಗೂ ಬದುಕಲು ತಿಂಗಳಿಗೆ ಹತ್ತು ಮೊಹರಿಗಳನ್ನು ಅಶನಾರ್ಥವಾಗಿ ಕೊಡಿಸುತ್ತೇನೆ. ಆಕೆಗೆ ಅದು ಯಥೇಷ್ಟವಾಯಿತು!" ಎಂದು ತೀರ್ಪು ಹೇಳಿ ರಾಜನು ಉದ್ಯಾನದ ಕಡೆಗೆ ಹೊರಟು ಹೋದನು.

ರಾಜಭಟರು ಜೀವದತ್ತ, ಲಕ್ಷದತ್ತರ ಕಾಲುಗಳಿಗೆ ಸಂಕಲೆ ಹಾಕಿ, ಅದಕ್ಕೆ ದೊಡ್ಡ ಕಬ್ಬಿಣದ ಗುಂಡುಗಳನ್ನು ತಗಲಿಸಿ, ಎಳೆದುಕೊಂಡು ಹೋಗಿ, ಕಗ್ಗಾನು ಗತ್ತಲೆಯ ಜಾಗದಲ್ಲಿದ್ದ ಒಂದು ಕೋಣೆಯೊಳಗೆ ದೂಡಿ, ಬಾಗಿಲು ಹಾಕಿ ತಾಳಭದ್ರ ಮಾಡಿ ಹೋದರು.

ಅಣ್ಣ ತಮ್ಮಂದಿರಿಬ್ಬರೂ ತಮಗೆ ಬಂದ ದುರ್ಗತಿಗಾಗಿ ಮಲಮಲ ಮರುಗಿದರು, ಆ ನಿಮಿಷದಲ್ಲಿ ಅವರಿಗೆ ತಮ್ಮನಿಗೂ, ತಾಯಿಗೂ ಭಾರಿ ದ್ರೋಹ

ಮಾಡಿದೆವೆಂದು ಪಶ್ಚಾತ್ತಾಪವಾಯಿತು. ಆದರೆ ಎಲ್ಲಾ ಮೀರಿಹೋದ ಮೇಲೆ ಈಗ ಏನೂ ಮಾಡಲಾಗದ ಸ್ಥಿತಿಗೆ ಬಿದ್ದಾಗಿತ್ತು. ಕತ್ತಲೆಯೂ. ದುರ್ಗಂಧವೂ, ಒದ್ದೆಯಾದ ನೆಲವೂ, ನೀರಿಳಿಯುವ ಗೋಡೆಗಳೂ....ಯಾವುದೋ ನರಕಕೂಪವಾಗಿತ್ತು ಅದು. ಬಹಳ ಹೊತ್ತು ಅಳುತ್ತಾ ಇದ್ದು ಬವಳಿ ಬಂದು ನಿದ್ದೆಗೆ ಬಿದ್ದರು.

ಅಣ್ಣಂದಿರಿಬ್ಬರೂ ಕೂಡಿ ಮಾಡಿದ ದ್ರೋಹದ ಫಲಿತವಾಗಿ ಪಿಂಗಳನು ಹಡಗಿನ ಸರಂಗನಿಗೆ ಗುಲಾಮನಾಗಿ ಸಿಕ್ಕಿಬಿದ್ದನಲ್ಲವೆ ? ಆ ಸರಂಗ ಶೂರನು ಪಿಂಗಳನನ್ನು ತನ್ನ ಹಡಗಿನ ಉಳಿದ ಗುಲಾಮರ ಜತೆಯಲ್ಲಿ ಚುಕ್ಕಾಣಿ ತಿರುಗಿಸುವ ಸ್ಥಳದಲ್ಲಿದ್ದ ಕಬ್ಬಿಣದ ದಿಮ್ಮಿಗಂಬಕ್ಕೆ ಸಂಕಲೆಗಳಿಂದ ಬಂಧಿಸಿ ಇರಿಸಿದನು. ಬೆಳಗಾದ ಕೂಡಲೇ ಹಡಗು ಲಂಗರೆತ್ತಿ ಹೊರಟಿತು. ಸರಂಗನ ಆಜ್ಞೆಯಾದ ಕೂಡಲೇ ಗುಲಾಮರು ಹುಟ್ಟು ಗೋಲುಗಳನ್ನು ಕದಲಿಸಿ ತೊಳಸುತ್ತ ಹಡಗನ್ನು ಸಮುದ್ರದಲ್ಲಿ ಸಾಗಿಸತೊಡಗಿದರು.

ಈ ಸರಂಗನು ಮೇಲುನೋಟಕ್ಕೆ ದೊಡ್ಡ ಮನುಷ್ಯನ ಹಾಗೆ ಕಂಡರೂ ನಿಜಕ್ಕೂ ಅವನೊಬ್ಬ ದೊಡ್ಡ ಸಮುದ್ರ ಚೋರ. ರೇವಿನಿಂದ ಮತ್ತೊಂದು ರೇವಿಗೆ ಪ್ರಯಾಣ ಮಾಡುವ ಹಡಗಿನಂತೆ ಸಾಗುತ್ತ, ಯಾವ ರೇವಿನಲ್ಲಿ ಎಂತಹ ಸರಕುಗಳನ್ನು ಹಡಗುಗಳಿಗೆ ಏರಿಸಲಾಗುವುದೆಂದು ಕಂಡುಹಿಡಿದು, ಆ ಹಡಗನ್ನು ಮಹಾ ಸಮುದ್ರದಲ್ಲಿ ಅಟಕಾಯಿಸಿ ಪೂರ್ತಿ ದೋಚಿಕೊಳ್ಳುವನು. ಹಾಗೆ ದೋಚಿಕೊಂಡ ಹಡಗಿನಲ್ಲಿದ್ದವರನ್ನೆಲ್ಲಾ ಬಹು ಕ್ರೂರವಾಗಿ ಸಮುದ್ರದ ಪಾಲು ಮಾಡಿಬಿಡುವನು.

ಒಂದು ವೇಳೆ ಯಾರನ್ನಾದರೂ ಜೀವದೊಂದಿಗೆ ಉಳಿಯಲು ಬಿಟ್ಟರೆ, ಅವರು ತನ್ನ ನಿಜ ಸ್ವರೂಪವನ್ನು ಹತ್ತುಮಂದಿಗೆ ಹೇಳಿಬಿಡುವರೆಂದು ಅವನಿಗೆ ಭಯ. ಅಂತಲೇ ರಾಕ್ಷಸರು ಅವನ ಮುಂದೆ ನಾಚಬೇಕು.

ಗುಲಾಮರೊಂದಿಗೆ ಚುಕ್ಕಾಣಿ ದಿಮ್ಮಿಗಂಬಕ್ಕೆ ಕಟ್ಟಲ್ಪಟ್ಟಿದ್ದ ಪಿಂಗಳನು ಮರೆತುಹೋದ ಭಲ್ಲೂಕ



ಕೇತು ಮಂತ್ರವನ್ನು ಎಷ್ಟು ತಲೆ ಕೆರೆದುಕೊಂಡರೂ ನೆನಪಿಗೆ ತರಲಾಗಲಿಲ್ಲ. ಅದು ಮರೆತು ಹೋದುದಕ್ಕೆ ಬಹಳವಾಗಿ ಪೇಚಾಡಿಕೊಂಡನು. ಅಣ್ಣಂದಿರು ತನ್ನ ಸೊತ್ತನ್ನು ವಶಪಡಿಸಿಕೊಳ್ಳಲಿಕ್ಕಾಗಿ ಇಷ್ಟು ದೊಡ್ಡ ಕುಟಿಲ ತಂತ್ರದಿಂದ ತನ್ನನ್ನು ಹಡಗಿನ ಸರಂಗನಿಗೆ ಗುಲಾಮನಾಗುವಂತೆ ಮಾರಿದುದನ್ನು ನೆನೆದು ಪಿಂಗಳನು ಮಹಾ ಕೋಪದಿಂದ ಕುದಿಯ ತೊಡಗಿದನು. ಈಗ ಅವರಿಗೆ ತನ್ನ ತಡೆ ತೊಲಗಿ ಹೋದುದರಿಂದ, ತಾಯಿಯನ್ನು ನಾನಾ ಹಿಂಸೆಗೆ ಗುರಿಪಡಿಸುವರೆಂದೂ, ತಾನು ಸಂಪಾದಿಸಿಟ್ಟ ಧನ ವನ್ನೆಲ್ಲಾ ಬೇಡದ ಖರ್ಚುಗಳಿಗೆ ವಿನಿಯೋಗಿಸಿ ಹಾಳು ಮಾಡುವರೆಂದೂ ಅವನಿಗೆ ತಿಳಿದು ಒಳಗೊಳಗೇ ತಳಮಳಿಸಿದನು.

ಈ ಗುಲಾಮತನದಿಂದ ತಾನು ಹೊರಬೀಳು ವುದು ಹೇಗೆ? ಇದೇ ಆಲೋಚನೆಯಾಯಿತು ಪಿಂಗಳನಿಗೆ, ಹೀಗಿರುವಾಗ, ಅವನು ಸ್ವಲ್ಪವೂ ಊಹಿ ಸಿರದಂತೆ, ದೈವಸಂಕಲ್ಪವೋ ಎಂಬ ಹಾಗೆ ಒಂದಾ ನೊಂದು ದಿನ ಸಮುದ್ರದ ಮೇಲೆ ಭಾರಿ ತುಫಾನು ಪ್ರಾರಂಭವಾಯಿತು. ಸಮುದ್ರದಲ್ಲಿ ಗುಡ್ಡದಷ್ಟೆತ್ತ ರಕ್ಕೆ ಎದ್ದ ಅಲೆಗಳಿಂದ, ಬಿರುಗಾಳಿಯ ಹೊಡೆತ ಗಳಿಂದ ಹಡಗು ಸುಳಿಗಾಳಿಗೆ ಸಿಕ್ಕಿದ ತರಗೆಲೆ ಯಾಯಿತು. ಸರಂಗನು ಅಪಾಯವನ್ನು ಗುರುತಿಸಿ ತನ್ನ ಅನುಚರರಿಗೂ, ಗುಲಾಮರಿಗೂ ಎಚ್ಚರಿಕೆಯ ಕೂಗು ಹಾಕುತ್ತ ಓಡಾಡತೊಡಗಿದನು. ಒಡಬಡನೆ ಆಜ್ಞೆಗಳನ್ನು ಮಾಡತೊಡಗಿದನು.

ಅದೇ ಸಮಯಕ್ಕೆ ಅವನ ಪಾಲಿಗೆ ಮೃತ್ಯು ಕಳುಹಿಸಿತೋ ಎಂಬ ಹಾಗೆ, ದೂರದಲ್ಲಿ ಮತ್ತೊಂದು ಹಡಗು ತುಫಾನಿಗೆ ಸಿಕ್ಕಿ ಸಮುದ್ರದ ಅಲೆಗಳ ಮೇಲೆ ಅತ್ತಿತ್ತ ಹೊರಳಾಡುವ ದೃಶ್ಯ ಕಂಡಿತು.

ಸರಂಗನು ತನ್ನ ಹತ್ತಿರವಿದ್ದ ದುರ್ಬೀನಿಯ ಮೂಲಕ ಆ ಹಡಗನ್ನು ಪರೀಕ್ಷಿಸಿ ನೋಡಿದನು. ಅದು ಬಹು ದೊಡ್ಡ ಹಡಗು. ಖಂಡಾಂತರ ವ್ಯಾಪಾರಗಳಿಗಾಗಿ ದೊಡ್ಡ ದೊಡ್ಡ ವರ್ತಕರು ಉಪಯೋಗಿಸುವ ಗುಂಪಿಗೆ ಸೇರಿದುದು. ಅಂತಹ



ಹಡಗಿನಲ್ಲಿ ಬೆಲೆ ಇಲ್ಲದಷ್ಟು ವ್ಯಾಪಾರದ ಸರಕುಗಳು ಇರುತ್ತವೆಂದು ಸರಂಗನಿಗೆ ಗೊತ್ತಿತ್ತು.

ಸಮುದ್ರ ಮಧ್ಯದಲ್ಲಿ ಎರಡು ಹಡಗುಗಳು ತುಫಾನಿಗೆ ಸಿಕ್ಕಿ ಅಪಾಯದಲ್ಲಿವೆ. ಇಂತಹ ಸಮಯದಲ್ಲಿ ತಾನು ಸ್ವಲ್ಪ ಸಾಹಸ ಮಾಡಿಬಿಟ್ಟರೆ, ಆ ಹಡಗಿನಲ್ಲಿರುವ ಅಮೂಲ್ಯವಾದ ವ್ಯಾಪಾರದ ವಸ್ತುಗಳೆಲ್ಲಾ ತನ್ನದಾಗಿಬಿಡುತ್ತವೆಂದು ಆ ಕಳ್ಳ ಸರಂಗನಿಗೆ ತೋರಿತು. ತನ್ನ ಅನುಚರರು ಕೂಡಾ ಇಂತಹ ಇಕ್ಕಟ್ಟಿನ ಕೆಲಸದಲ್ಲಿ ಸಾಹಸ ಉಳ್ಳವರೇ, ಚೆನ್ನಾಗಿ ನುರಿತವರೇ, ಆ ಹಡಗಿನಲ್ಲಿರುವವರು ಕೂಡಾ ನಾವಿಕ ಪರಿಜ್ಞಾನವುಳ್ಳವರೇ ಹೊರತು ಸಮುದ್ರ ಯುದ್ಧಕ್ಕೆ ಅಭ್ಯಾಸ ಇದ್ದವರಾಗಿ ಇರಲಿಕ್ಕಿಲ್ಲ.

ಸರಂಗನು ಈ ವಿದವಾಗಿ ಆಲೋಚನೆಮಾಡಿ, ತನ್ನ ಅನುಚರರಿಗೆ ಎಚ್ಚರಿಕೆ ಕೊಟ್ಟನು. ಅಂತಹ ತುಫಾನಿನಲ್ಲಿಯೂ ಅವನ ಅನುಚರರು, ಕತ್ತಿಗಳನ್ನೂ. ಬಿಲ್ಲಂಬುಗಳನ್ನೂ ಧರಿಸಿ ಆ ವರ್ತಕ ಹಡಗನ್ನು ವಶಪಡಿಸಿಕೊಳ್ಳಲು ಸನ್ನದ್ಧರಾದರು.

ಕಾಲುಗಳನ್ನು ಬಂಧಿಸಲ್ಪಟ್ಟ ಪಿಂಗಳನು ಉಳಿದ ಗುಲಾಮರೊಂದಿಗೆ ತಾನೂ ಸೇರಿ ಹುಟ್ಟುಗೋಲನ್ನು ಆಡಿಸಬೇಕಾಗಿ ಬಂದಿತ್ತು. ಕ್ರಮವಾಗಿ ಹಡಗು ಆ ವರ್ತಕ ಹಡಗನ್ನು ಸಮೀಪಿಸಿತು. ಸರಂಗನು ತನ್ನ ಮುಖ್ಯ ಅನುಚರರೊಂದಿಗೆ ದುರ್ಬೀನಿನಲ್ಲಿ ನೋಡುತ್ತ ಕುಳಿತಿದ್ದನು. ಇದ್ದಕ್ಕಿದ್ದ ಹಾಗೆ ಅವನು ಭಯಕಂಪಿತನಾಗಿ ಕೆಟ್ಟ ಸ್ವರದಿಂದ ಕಿರಿಚುತ್ತಾ ಕೂಗಿದನು:

"ಎಲ್ಲರೂ ಬಾಣ ಬಿಡಿರೋ! ಬಾಣಬಿಡೀ! ಬಿಲ್ಲಂಬು ಬಿಡುತ್ತಾ ಹಡಗನ್ನು ಹಿಂದೆ ತಿರುಗಿಸಿರೋ! ಬೇಗ ಹಿಂದೆ ಓಡಬೇಕು. ಅದು ವರ್ತಕರ ಹಡಗಿನ ಹಾಗಿಲ್ಲಾ! ಅವರು ಉರಿಯುವ ಬಟ್ಟೆಯನ್ನು ಬಾಣಕ್ಕೆ ಸುತ್ತಿ, ನಮ್ಮ ಹಡಗಿನ ಮೇಲೆ ಬಿಡಲಿದ್ದಾರೆ. ಓಡಿಸಿರಿ ಹಿಂದೇ!"

ಸರಂಗನ ಕೂಗು ನಿಲ್ಲುವುದಕ್ಕೆ ಮೊದಲೇ ಆ ಕಡೆಯ ಹಡಗಿನಿಂದ ಉರಿಯುತ್ತಿರುವ ಬಾಣಗಳು ಆಕಾಶ ಬಾಣದಂತೆ ಹಾರಿ ಬಂದು ಪಿಂಗಳನಿರುವ ಹಡಗಿನ ಮೇಲೆ ಬೀಳತೊಡಗಿದವು.

ಅದನ್ನು ನೋಡಿದ ಕೂಡಲೇ ಎಲ್ಲರಿಗೂ ದೊಡ್ಡ ಅಕಸ್ಮಾತ್ ಭೀತಿಯುಂಟಾಯಿತು.

ಅವುಗಳಲ್ಲಿ ಕಲವು ತೆರೆಗಂಬಕ್ಕೆ ಒರಗಿ ನಿಂತಿದ್ದ ಸರಂಗನ ಅನುಚರರ ಮೇಲೆ ಬಿದ್ದು, ಅವರ ದುಸ್ತುಗಳಿಗೆ ಬೆಂಕಿ ಹಿಡಿಯಿತು.

ಕೂಡಲೇ ಸರಂಗನು ಹುಚ್ಚನ ಹಾಗೆ ಕಿರಿಚುತ್ತ, "ಗುಲಾಮರನ್ನೆಲ್ಲಾ ಬಿಟ್ಟುಬಿಡಿರೋ! ಈಗ ನಾವೆಲ್ಲಾ ಒಂದೇ! ಅವರು ಕತ್ತಿಗಳನ್ನು ಹಿಡಿದು ಹಡಗನ್ನು ರಕ್ಷಿಸುವ ಸಮಯ ಬಂತು!" ಎಂದು ಕೂಗಿ ಕೂಗಿ ಹೇಳಿದನು. —(ಇನ್ನೂ ಇದೆ)






## ೧೩

[ಪಿಂಗಳನ ಅಣ್ಣಂದಿರು ಮನೆಯಲ್ಲಿದ್ದ ಹಣವನ್ನು ಹಂಚಿಕೊಂಡು ಮಹತ್ವವಿರುವ ಚೀಲವು ನನಗೆ ತನಗೆಂದು ಹೊಡೆದಾಡಿಕೊಳ್ಳತೊಡಗಿದರು. ಅವರಿಬ್ಬರನ್ನೂ ರಾಜನು ಸೆರೆಮನೆಗೆ ತಳ್ಳಿಸಿದನು. ಈ ಸಂದರ್ಭದಲ್ಲಿ ಪಿಂಗಳನು ಸಿಕ್ಕಿಕೊಂಡಿರುವ ಹಡಗಿಗೂ ಇನ್ನೊಂದು ಹಡಗಿಗೂ ಯುದ್ಧ ಪ್ರಾರಂಭವಾಯಿತು. ಸರಂಗನು ಗುಲಾಮರನ್ನೆಲ್ಲಾ ಯುದ್ಧಕ್ಕೆ ಬಿಡುಗಡೆ ಮಾಡಿ ಸಿದ್ಧರಾಗುವಂತೆ ಹೇಳಿ ಆಯುಧಗಳನ್ನು ಕೊಟ್ಟನು.]

**ಬಾ**ಣಗಳೂ ಬೆಂಕಿಯ ಉಂಡೆಗಳೂ ಹಡಗಿಗೆ ಬೀಳುತ್ತಿರಲು, ಸರಂಗನು ಅವಸರವಸರವಾಗಿ ಆಜ್ಞೆಗಳನ್ನು ಕೂಗುತ್ತ, ಎಲ್ಲಾ ಗುಲಾಮರಿಗೂ ಆಯುಧ ಕೊಡಿಸಿದನು. ಎಲ್ಲಾ ಗುಲಾಮರ ಕೈಯಲ್ಲಿಯೂ ಕತ್ತಿಯೂ ಬಿಲ್ಲು ಬಾಣಗಳೂ ಇದ್ದುವು. ಈಗ ಸರಂಗನಿಗೆ ಆ ಗುಲಾಮರೇ ದಿಕ್ಕಾಗಿ ಕಾಣುವುದರಿಂದ, ಅವರ ಮೇಲೆ ಎಂದೂ ತೋರಿಸದ ಪ್ರೀತಿಯನ್ನೂ ಆಪ್ಯಾಯತೆಯನ್ನೂ ತೋರಿಸುತ್ತ, "ಈ ಕ್ಷಣದಿಂದ ನೀವಾರೂ ಗುಲಾಮರಲ್ಲ, ವೀರ ಯೋಧರು ! ನಮ್ಮ ಹಡಗು ಬಹು ದೊಡ್ಡ ಅಪಾಯಕ್ಕೆ ಸಿಕ್ಕಿದೆ. ನಮ್ಮ ಹಡಗನ್ನು ವಶಪಡಿಸಲು ನೋಡುವ ಆ ಶತ್ರುವಿಗೆ ನಾವು ಸಿಕ್ಕಿಕೊಂಡರೆ ಆಮೇಲೆ ಬದುಕಿರುವಷ್ಟು ಕಾಲ ನಾವು ಅವರ ಗುಲಾಮರಾಗಿರಬೇಕು. ನಾವು ಜಯಿಸಿಬಿಟ್ಟರೆ ಎಲ್ಲರೂ ಸ್ವೇಚ್ಛೆಯಾಗಿ ಜೀವಿಸಬಹುದು. ಆದ್ದರಿಂದ ನಮ್ಮೆಲ್ಲರ ಪ್ರಾಣರಕ್ಷಣೆಗೂ, ಸ್ವಾತಂತ್ರ್ಯಕ್ಕೂ ಜೀವದ ಹಂಗು ತೊರೆದು ಹೋರಾಡಬೇಕು. ನಮಗೆ ಜಯವಾಗಿಬಿಟ್ಟರೆ ನಿಮಗೆಲ್ಲರಿಗೂ ತಲಾ ನೂರು ವರಹ ಬಹುಮಾನ ಕೊಡುತ್ತೇನೆ. ಹೂಂ, ಬಾಣ ಹೊಡೆಯಿರಿ ಆ ಹಡಗಿನ ಮೇಲೆ!" ಎಂದನು.



ಸರಂಗನ ಆಜ್ಞೆಗಳು ಅವನ ಕಿವಿಗೂ ಬಿದ್ದಿದ್ದುವು. ಅವನು ಬಹು ಬೇಗನೆ ಒಂದು ನಿರ್ಣಯಕ್ಕೆ ಬಂದನು. ತಾವಿರುವ ಹಡಗು ನೀರಿನಲ್ಲಿ ಮುಳುಗಿ ಹೋಗದಂತೆ ನೋಡಬೇಕಾದುದು ಮೊದಲನೇ ಕೆಲಸವೇನೋ ನಿಜವೇ. ಆದರೆ ಅತಿ ಕ್ರೂರನಾದ ಸರಂಗನು ಮಾತ್ರ ಜೀವದಿಂದಿರಬಾರದು. ಆದ್ದರಿಂದ ಮೊದಲನೇ ಕೆಲಸ ಅವನನ್ನು ಕೊನೆಗೊಳಿಸುವುದೇ. ತರುವಾಯ ಸಂದರ್ಭಕ್ಕೆ ತಕ್ಕ ಹಾಗೆ ಶತ್ರುವಿನೊಂದಿಗೆ ರಾಜೀ ಮಾಡಿಕೊಂಡು ತಮ್ಮ ದಾರಿ ಹಿಡಿದು ಹೋಗಲಾಗುವುದೋ ನೋಡಬೇಕು. ತಪ್ಪಿದರೆ ಯುದ್ಧವಿದ್ದೇ ಇದೆ.

ಪಿಂಗಳನು ಹೀಗೆ ನಿರ್ಧರಿಸಿ ತನ್ನ ಜತೆಗಾರರೊಂದಿಗೆ ತನ್ನ ಆಲೋಚನೆಯನ್ನು ಬೇಗಬೇಗನೇ ತಿಳಿಸಿದನು. ಈ ಸರಂಗನು ಸಾಯುವವರೆಗೆ ಶತ್ರುಗಳನ್ನು ಮರೆತು ಮೊದಲು ಸರಂಗನನ್ನು ಕೊಲ್ಲಲು ಎಲ್ಲರನ್ನೂ ಪ್ರೋತ್ಸಾಹಿಸಿದನು. ಎಲ್ಲಾ ಗುಲಾಮರೂ ಇದಕ್ಕೆ ಒಪ್ಪಿದರು. ಯುವಕನೂ, ಬುದ್ಧಿಶಾಲಿಯೂ, ಧೈರ್ಯ ಸಾಹಸಗಳುಳ್ಳವನೂ ಆದ ಪಿಂಗಳನು ಕ್ಷಣ ಮಾತ್ರದಲ್ಲಿ ಅಲ್ಲಿಯ ಗುಲಾಮರಿಗೆ ನಾಯಕನಾದನು. ಒಬ್ಬರಿಂದ ಒಬ್ಬರಿಗೆ ಈ ಸುದ್ದಿ ಬಲು ಬೇಗನೆ ಹರಡಿ, ಎಲ್ಲರಿಗೂ ಹೊಸ ಹುರುಪು ಬಂತು.

ಕೂಡಲೇ ಪಿಂಗಳನು ಸಮುದ್ರವು ಮಾರ್ಮೊಳಗುವ ಹಾಗೆ ಒಂದು ಗರ್ಜನೆ ಹಾಕಿ, "ಏ ನರಮಾರಿ ಸರಂಗಾ! ಯಾರು ನಂಬುತ್ತಾರೆ ನಿನ್ನ ಮಾತು? ಇಂದಿಗೆ ಮುಗಿಯಿತು ನಿನ್ನ ಕಥೇ! ಕೊಲ್ಲಿರಿ ಅವನನ್ನು! ಕಡಿದು ಬೀಸಿರಿ ಸಮುದ್ರಕ್ಕೇ!" ಎಂದು ಕೂಗುತ್ತಾ ಮುಂದಕ್ಕೆ ಹಾರಿದನು. ಜತೆಗಾರರೂ ಅವನನ್ನು ಅನುಸರಿಸಿದರು.

ಹೀಗೆ ಒಮ್ಮೆಗೇ ಗುಲಾಮರೆಲ್ಲರೂ ಸಿಂಹಗಳ ಹಾಗೆ ತಮ್ಮನ್ನು ಚಿತ್ರಹಿಂಸೆಗೆ ಗುರಿ ಮಾಡಿದ ಸರಂಗನ ಮೇಲೂ, ಅವನ ಅನುಚರರ ಮೇಲೂ

ಸರಂಗನ ಮಾತಿನಲ್ಲಿ ಗುಲಾಮರಾರಿಗೂ ನಂಬುಗೆಯಾಗಲಿಲ್ಲ. ಅವನು ತಮ್ಮನ್ನೆಲ್ಲ ಎಷ್ಟು ಕ್ರೂರವಾಗಿ ಹಿಂಸಿಸಿದ್ದಾನೆಂಬುದನ್ನು ಅವರಲ್ಲಿ ಪ್ರತಿಯೊಬ್ಬನೂ ನೆನೆದುಕೊಂಡೇ ಇದ್ದನು. ಆದರೂ ಈ ಉಭಯ ಸಂಕಟದ ತರುಣದಲ್ಲಿ ತಾವೇನು ಮಾಡಬೇಕು? ಶತ್ರುಗಳ ಹಡಗಿನಿಂದ ಬಾಣಗಳು ಹಾರಿ ಬರುತ್ತಲೇ ಇದ್ದುವು. ಅಗ್ನಿಗೋಳಗಳು ಬೀಳುತ್ತಲೇ ಇದ್ದುವು. ಸರಂಗನ ಕಡೆಯವರಿಗೆ ಹಡಗಿಗೆ ಬೆಂಕಿ ಹಿಡಿಯದಂತೆ ಆರಿಸುವುದೇ ಕೆಲಸವಾಗಿತ್ತು. ಹಡಗು ಬೆಂಕಿ ಹಿಡಿದು ಭಗ್ನವಾಗಿ ಮುಳುಗಿ ಹೋದರೆ ಅದರೊಂದಿಗೆ ತಮಗೂ ಸರ್ವನಾಶವೇ ಗತಿ, ಎಂದು ಎಲ್ಲರಿಗೂ ಗೊತ್ತಿತ್ತು. ಅದಕ್ಕಾಗಿಯಾದರೂ ಹೋರಾಡಲೇ ಬೇಕಾಗಿತ್ತು!

ಗುಲಾಮರ ಮನಸ್ಸಿನಲ್ಲಿ ಉಂಟಾದ ಈ ಅನುಮಾನಗಳೂ, ಸರಂಗನ ಮೇಲಿನ ರೋಷವೂ ಪಿಂಗಳನ ಮನಸ್ಸಿನಲ್ಲಿ ಕೂಡಾ ಕೆರಳಿ ಉರಿಯತೊಡಗಿತ್ತು.



ಕತ್ತಿಗಳನ್ನು ಬೀಸಿ ಹಾರಿಸಿಕೊಂಡು ಮುಗಿ ಬೀಳುವು ದನ್ನು ನೋಡಿ, ಪರಿಸ್ಥಿತಿ ಹೀಗೆ ಬಿಗಡಾಯಿಸುವು ದೆಂದು ಊಹಿಸಿರದಿದ್ದ ಸರಂಗನು ಕತ್ತರಿಯ ನಡುವೆ ಸಿಕ್ಕಿಕೊಂಡಂತಾದನು. ತನ್ನೆದಿರು ನಡೆಯುವುದನ್ನು ನಂಬುವುದೇ ಕಷ್ಟವೆನಿಸಿ ಏನೂ ತೋರದಾಯಿತು ಅವನಿಗೆ.

ಒಂದು ಕಡೆಯಿಂದ ಶತ್ರುಗಳಿಂದ ಅಗ್ನಿ ಬಾಣ ಹಾರಿ ಹಾರಿ ಬರುತ್ತಾ ಇದೆ. ಇಲ್ಲಿ ಹೀಗೆ ತನ್ನ ಹಡಗಿನ ಗುಲಾಮರ ತಂಡ ತನ್ನ ಮೇಲೆ ಕತ್ತಿ ಬೀಸುತ್ತಿದ್ದಾರೆ !

ಆಲೋಚಿಸಲಿಕ್ಕೂ ವ್ಯವಧಿ ಇಲ್ಲದಂತೆ ಘಟನೆ ಗಳು ಮುಂದೆ ಬರುತ್ತಿದ್ದುವು. ತನ್ನ ಪಕ್ಷದವರಿ ಗಿಂತಲೂ ಗುಲಾಮರ ಸಂಖ್ಯೆ ಹೆಚ್ಚಾಗಿದ್ದಿತು. ತಪ್ಪಿಸಿಕೊಳ್ಳುವುದು ಹೇಗೆ ?

ತನ್ನ ಅನುಚರರು ಕೆರಳಿದ ಗುಲಾಮರ ಕತ್ತಿಗೆ ಆಹುತಿಯಾಗುವುದನ್ನು ನೋಡಿ ಸರಂಗನು ಹುಚ್ಚ ನಂತಾದನು. ಅವನು ತನ್ನ ಅನುಚರರಿಗೆ ಆಜ್ಞೆ ಗಳನ್ನು ಮಾಡುವುದರೊಳಗೇ ಗುಲಾಮರ ಕತ್ತಿಗಳು ಅವರನ್ನು ತುಂಡು ತುಂಡು ಮಾಡಲು ತೊಡಗಿ ಯಾಗಿತ್ತು. ಸರಂಗನು ಹಿಂದೆ ಹಿಂದೆ ಹಾರಿ ತಪ್ಪಿಸಿ ಕೊಳ್ಳುತ್ತ, "ದ್ರೋಹಿಗಳು ! ಮೋಸ ! ಮೊದಲು ಈ ಗುಲಾಮರನ್ನೆಲ್ಲಾ ಕಡಿಯಿರಿ ! ಒಬ್ಬನನ್ನೂ ಬಿಡಬೇಡಿ !" ಎಂದು ಕರ್ಕಶವಾಗಿ ಅರಚುತ್ತ ಕತ್ತಿ ಹಿರಿದು ಅವರ ಮೇಲೆ ಬಿದ್ದನು. ಬಲಿಷ್ಠನಾದ ಆ ಸರಂಗನ ಕೈಚಳಕದ ಕತ್ತಿ ಏಟಿಗೆ ಐದಾರು ಮಂದಿ ಗುಲಾಮರು ಆಹುತಿಯಾದರು. ಅವನೊಬ್ಬ ಯಮದೂತನಂತೆ ಅವರಿಗೆ ಕಂಡನು. ಅವನನ್ನು ನೋಡಿ ಕೆಲವು ಗುಲಾಮರು ಹೆದರಿ ತಪ್ಪಿಸಿ ಓಡಲಿಕ್ಕೂ ತೊಡಗಿದರು. ಹಡಗಿನೊಳಗೆ ಎಲ್ಲಿಗೆಂದು ಓಡುವುದು ? ಕೆಲವರು ಅಲ್ಲಲ್ಲಿ ಅಡಗಿ ಕುಳಿತರು. ಪಿಂಗಳನು ಅದನ್ನು ನೋಡಿ ಅಪಾಯವನ್ನು ಗುರುತಿಸಿ ಕತ್ತಿಯನ್ನು ಮೇಲೆತ್ತಿ, ಸರಂಗನ ಮೇಲೆ ಹಾರುತ್ತ, "ಹೆದರಬೇಡ್ರೋ ! ಇದೋ ಸರಂಗನನ್ನು ನಾನೊಬ್ಬನೇ ಕೊಲ್ಲುತ್ತೇನೆ ! ನೋಡ್ರೋ ! ನೀವು ಹೆದರಿ ತಪ್ಪಿಸಿಕೊಂಡು ಓಡಿದರೆ ಸಮುದ್ರಕ್ಕೇ ಬೀಳುವಿರಿ. ಹೇಗಿದ್ದರೂ ನಮಗೆ ಸಾವು ಕಟ್ಟಿಟ್ಟದ್ದೇ. ಜೀವದಾಸೆಬಿಟ್ಟೇ ಇವರನ್ನೆಲ್ಲ ಕೊಲ್ಲೋಣ ! ನಾವೇನೂ ಕೈಲಾಗದವರಲ್ಲವೆಂದು ತೋರಿಸೋಣ !" ಎಂದು ಅವರಿಗೆ ಧೈರ್ಯ ಬರುವಂತೆ ಕೂಗಿ ಎಚ್ಚರಿಕೆ ಕೊಟ್ಟನು.

ಆದರಿಂದ ಓಡಿ ಹೋಗುವ ಗುಲಾಮರಿಗೆ ಧೈರ್ಯವೂ ಹಟವೂ ಮತ್ತೆ ಬಂದುವು. ಅಷ್ಟರೊಳಗೆ ಪಿಂಗಳನು ಕೆರಳಿದ ಸಿಂಹದ ಹಾಗೆ ಗರ್ಜಿಸುತ್ತ ಸರಂಗನನ್ನು ಇದಿರಿಸಿದನು. ಪಿಂಗಳನ ಮೊದಲನೇ ಕತ್ತಿಯ ಬೀಸಿಕೆ ಸರಂಗನ ಎದೆಯನ್ನು ಗೀರಿಕೊಂಡು ಹೋಯಿತು, ಸರಂಗನು "ಹಾ ಭೈರವೀ !" ಎಂದು ಬೊಬ್ಬಿಟ್ಟನು. ಅವನು ಎದೆಯನ್ನು ಒತ್ತಿಕೊಂಡು

ಪಿಂಗಳನನ್ನು ಸುಡುವಂತೆ ನೋಡುತ್ತಾ ಕತ್ತಿ ಝಳಪಿಸುತ್ತಿದ್ದನು. ಅವನೂ ಜೀವದ ಹಂಗು ಬಿಟ್ಟವನಾದನು. ಇಬ್ಬರೂ ತಪ್ಪಿಸಿಕೊಳ್ಳುವುದರಿಂದ ಹೊಡೆತಗಳು ಎಲ್ಲೆಲ್ಲೋ ತಗಲುತ್ತಿದ್ದುವು.

ಸರಂಗನ ದೇಹಶಕ್ತಿಯನ್ನೂ, ಕತ್ತಿ ಯುದ್ಧದ ಜಾಣತನವನ್ನೂ ನೋಡಿ ಅವನನ್ನು ಕೊಲ್ಲುವುದು ಕಷ್ಟವೆಂದು ಪಿಂಗಳನಿಗೆ ಅನಿಸಿತು. ಅದನ್ನು ತೋರಗೊಡದೆ ಅವನು ಯುದ್ಧ ಮಾಡುವಾಗ, ಸರಂಗನು ತಪ್ಪಿಸಿಕೊಳ್ಳುವ ಭರದಲ್ಲಿ ಒಂದು ಹಗ್ಗವು ಕಾಲಿಗೆ ಸಿಕ್ಕಿಕೊಂಡುದರಿಂದ ಮುಗ್ಗರಿಸಿ ಬೋರಲು ಬಿದ್ದನು. ಈ ಅವಕಾಶವನ್ನು ಬಿಡದೆ ಪಿಂಗಳನು ಭೀಕರವಾಗಿ ಕೂಗಿ ಸರಂಗನ ಬೆನ್ನಿಗೆ ಕತ್ತಿಯನ್ನು ಚುಚ್ಚುವಷ್ಟರಲ್ಲಿ, ಈ ಅಪಾಯನ್ನು ಊಹಿಸಿದ್ದ ಸರಂಗನು ಪಕ್ಕಕ್ಕೆ ಹೊರಳಿಬಿಟ್ಟನು. ಪಿಂಗಳನ ಕತ್ತಿ ಹಡಗಿನ ಹಲಗೆಗೆ ಚುಚ್ಚಿ ಸೀಳಿತು.

ಅದೇ ಸಮಯದಲ್ಲಿ ಸರಂಗನು ಹಾರಿ ಎದ್ದು ನಿಂತೂಬಿಟ್ಟನು. ಸರಂಗನು ವಿಕಟಾಟ್ಟಹಾಸ ಮಾಡುತ್ತ ಎದ್ದು ಪಾದವನ್ನು ಅಪ್ಪಳಿಸುತ್ತ, "ಓಹೋ ! ನೀನೇ ಈ ಗುಲಾಮರಿಗೆಲ್ಲಾ ನಾಯಕನೋ ? ಈ ಕತ್ತಿಯಿಂದ ನಿನ್ನನ್ನು ಚೂರು ಚೂರು ಮಾಡಿ ಸಮುದ್ರದ ಮೀನುಗಳಿಗೆ ಔತಣ ಹಾಕುತ್ತೇನೆ. ಆಮೇಲೆ ನಿನ್ನ ಜತೆಗಾರರು !" ಎನ್ನುವಾಗ, ಪಿಂಗಳನು ಅವನ ಮುಂದಿರದೆ ಆಚೆಗೆ ಹಾರಿಕೊಂಡಿದ್ದನು.

ಅಲ್ಲಿ ಪಿಂಗಳನು ಏನು ಮಾಡುತ್ತಿರುವನೆಂಬುದನ್ನು ಸರಂಗನು ಗಮನಿಸಲಿಲ್ಲ. ತನ್ನ ಕತ್ತಿ ಕೈತಪ್ಪಿ ಹೋದ ಕೂಡಲೇ ಪಿಂಗಳನು ಮುಂದಿನ ಅಪಾಯವನ್ನು ತಿಳಿದು, ಬೇರೊಂದು ಕತ್ತಿಗಾಗಿ ಹುಡುಕುತ್ತಿದ್ದನು. ಆದರೆ ಎಲ್ಲಿಯೂ ಕತ್ತಿ ಸಿಗಲಿಲ್ಲ. ಇತರ ಗುಲಾಮರು ಸರಂಗನ ಕಡೆಯವರೊಂದಿಗೆ ಹೋರಾಡಿಕೊಂಡಿದ್ದುದರಿಂದ ಈ ಕಡೆಗೆ ಗಮನಿಸುವಂತಿರಲಿಲ್ಲ.

ಪಿಂಗಳನು ಮಿಂಚಿನ ವೇಗದಲ್ಲಿ ಪಕ್ಕದಲ್ಲಿ ಸಿಕ್ಕಿದ ಒಂದು ಹಗ್ಗವನ್ನು ತೆಗೆದುಕೊಂಡು, ಅದರ ಕೊನೆಗೆ ಉರುಳು ಹಾಕಿ, ಸರಂಗನ ಮುಂದೆ ಹಾರಿದನು.



ಮೈ ತಿಳಿಯದಂತಹ ಆವೇಶದಲ್ಲಿದ್ದ ಸರಂಗನು ಕತ್ತಿ ನೆಗಹಿ ಅವನ ಮೇಲೆ ಹಾರುವುದಕ್ಕೂ, ಪಿಂಗಳನು ಉರುಳಿನ ಹಗ್ಗವನ್ನು ಬೀಸಿ ಅವನ ಕೊರಳಿನ ಮೇಲೆ ಹಾರಿಸುವುದಕ್ಕೂ ತಾಳೆಬಿತ್ತು. ಸರಂಗನ ಕುತ್ತಿಗೆಗೆ, ಬಿದ್ದ ಹಗ್ಗವನ್ನು ಎಳೆಯುತ್ತಾ, ಪಿಂಗಳನು "ಓಹೋಯ್ ಕ್ರೂರ ಸರಂಗ ಸಿಕ್ಕಿಬಿದ್ದ !" ಎಂದು ಕೂಗುತ್ತ, ಹಿಂದೆ ಓಡತೊಡಗಿದನು.

ಕುತ್ತಿಗೆಗೆ ಬಿದ್ದ ಉರುಳಿನೊಂದಿಗೆ ಎಳೆಯಲ್ಪಡುವ ಸರಂಗನು ದೊಡ್ಡದನಿಯಿಂದ ಗಾಂಡ್ರಿಸುತ್ತ, ದಢಾಲ್ಲನೆ ಮರಬಿದ್ದ ಹಾಗೆ ಬಿದ್ದನು, ಬಿದ್ದವನು ಕೊರಳು ಬಿಗಿಯುವ ಹಗ್ಗವನ್ನು ಕೈಯಲ್ಲಿದ್ದ ಕತ್ತಿಯಿಂದ ಕಡಿಯಲು ಹೆಣಗುತ್ತಿರಲು, ಅದನ್ನು ಗಮನಿಸಿದ ಪಿಂಗಳನು ಹಿಂದಿರುಗಿ ಬಂದು ತನ್ನ ಕಡೆಯವರನ್ನು ಕೂಗಿದನು.

ಕೂಡಲೇ ಇಬ್ಬರು ಗುಲಾಮರು ಓಡುತ್ತ ಬಂದು ಬಿದ್ದಿರುವ ಸರಂಗನನ್ನು ನೋಡಿ ಕೆಟ್ಟ ರೊಚ್ಚಿನಿಂದ ಅವನ ಮೇಲೆ ಬಿದ್ದು ಕತ್ತಿಗಳಿಂದ ಅವನ ಶರೀರವನ್ನೆಲ್ಲಾ ರಂಧ್ರಮಯ ಮಾಡಿದರು. ಅವನು ಸತ್ತರೂ ಅವರ ರೋಷ ತೀರಲಿಲ್ಲ.

ಹೀಗೆ ಸರಂಗನ ಅಂತ್ಯವಾಗುವವರೆಗೂ ಸುತ್ತಲೂ ಏನು ನಡೆಯುವುದೆಂದು ನೋಡುವ ಸ್ವಿಮಿತ ಪಿಂಗಳನಿಗೆ ಬಂದಿರಲಿಲ್ಲ. ಈಗ ಅವನು ಗುಲಾಮನೊಬ್ಬನ ಕತ್ತಿಯನ್ನು ತೆಗೆದುಕೊಂಡು ಹಡಗಿನಲ್ಲಿ ನಡೆಯುವ ಹೋರಾಟದ ಕಡೆಗೆ ಓಡಿದನು. ಅಲ್ಲಿ ಇನ್ನೂ ಬದುಕಿ ಉಳಿದಿದ್ದ ಸರಂಗನ ಬೆರಳೆಣಿಕೆಯಷ್ಟೇ ಇದ್ದ ಅನುಚರರು, ಗುಲಾಮರ ಕೈಯಲ್ಲಿ ಸಾಯುವುದೋ, ಗಾಯಗೊಂಡು ಸಿಕ್ಕಿಬೀಳುವುದೋ ನಡೆದು ಮುಗಿಯಿತು. ಗುಲಾಮರನ್ನು ಹೊಡೆಯುವವರಾರೂ ಇನ್ನು ಹಡಗಿನೊಳಗೆ ಇಲ್ಲದಂತಾಯಿತು.

ಇಷ್ಟರಲ್ಲಿ ಶತ್ರುಗಳ ಹಡಗಿನಲ್ಲಿರುವ ಸೈನಿಕರು ಕೋಲಾಹಲದಿಂದ ಕಿರಿಚುತ್ತ ಪಿಂಗಳನಿರುವ ಹಡಗನ್ನು ಸಮೀಪಿಸುತ್ತಿದ್ದರು. ಆಗಲೂ ಅವರು ಬಾಣಪ್ರಯೋಗ ಮಾಡುವುದನ್ನು ಮಾತ್ರ ಬಿಡಲಿಲ್ಲ.





ತಮ್ಮ ಇದಿರಾಳಿ ಹಡಗಿನಲ್ಲಿ ಏನೋ ಕಲಹ ಪ್ರಾರಂಭವಾದುದನ್ನು ಅವರು ತಿಳಿದಿರಬೇಕು. ಆದುದರಿಂದ ಈಗ ಅವರು ಅಗ್ನಿಗೋಳವನ್ನು ಪ್ರಯೋಗಿಸುತ್ತಿದ್ದಿಲ್ಲ. ಹಡಗನ್ನು ಸರಕುಗಳೊಂದಿಗೆ ವಶಪಡಿಸಿಕೊಳ್ಳುವುದೇ ಅವರ ಉದ್ದೇಶವಾಗಿರಬೇಕೆಂದು ಅದರಿಂದ ಸ್ಪಷ್ಟವಾಯಿತು.

ಈಗ ಪಿಂಗಳನಿಗೆ ದೊಡ್ಡ ಯೋಚನೆ ಹಿಡಿಯಿತು. ಆ ಶತ್ರು ಹಡಗಿನವರೊಂದಿಗೆ ಹೋರಾಡಿ ಜಯಿಸಲು ತನ್ನೊಂದಿಗೆ ಇರುವ ಸ್ವಲ್ಪ ಮಂದಿಯೊಂದಿಗೆ ಸಾಧ್ಯವಾಗುವುದಲ್ಲವೆಂದು ಅವನಿಗೆ ತೋರಿತು. ಸುಮ್ಮನಿದ್ದು ಅವರಿಗೆ ಬಾಗಿಹೋದರೆ ಅವರು ಮತ್ತೆ ತಮ್ಮನ್ನೆಲ್ಲ ಬಂಧಿಸಿ ತಮ್ಮಿಂದ ಗುಲಾಮ ವೃತ್ತಿ ಮಾಡಿಸಬಹುದು. ಮತ್ತೆ ತಮ್ಮ ಗತಿ ಮೊದಲಿನ ಹಾಗೇ ಆಗುತ್ತದೆ. ನಿಜಕ್ಕೂ ಆ ಹಡಗಿನಲ್ಲಿರುವವರು ಎಷ್ಟು ಮಂದಿಯೋ? ಎಂಥವರೋ? ಅವರ ನಿಜವಾದ ಬಲವು ಎಷ್ಟೋ?

ಪಿಂಗಳನು ಸರಂಗನಿಂದ ಎಳೆದುಕೊಂಡಿದ್ದ ದುರ್ಬೀನಿನಿಂದ ಶತ್ರುವಿನ ಹಡಗನ್ನು ನೋಡಿದನು. ಆ ಹಡಗಿನ ತುಂಬಾ ನಾವಿಕರಿದ್ದರು. ಅಂಥವರೊಂದಿಗೆ ಹೋರಾಡಿ ಪ್ರಯೋಜನವಿಲ್ಲವೆಂಬ ನಿಶ್ಚಯಕ್ಕೆ ಪಿಂಗಳನು ಬಂದನು. ಮೊದಲು ತನ್ನ ಹಡಗಿನಲ್ಲಿದ್ದ ಬಿಳಿಯ ಪತಾಕೆಯನ್ನು ಎತ್ತಿ, ತಮ್ಮ ಪರಿಸ್ಥಿತಿಯನ್ನು ಆ ಹಡಗಿನಲ್ಲಿದ್ದವರಿಗೆ ತಿಳಿಸಿ, ರಾಜಿಯ ದಾರಿಹಿಡಿದು ಜಾರಿಕೊಂಡು ಹೋಗುವುದೇ ಒಳ್ಳೆಯದೆಂದು ಅವನಿಗೆ ತೋರಿತು. ಅವರು ಅದಕ್ಕೆ ಒಪ್ಪುವುದೂ ಬಿಡುವುದೂ ಮುಂದಿನ ಮಾತು. ಆಮೇಲೆ ದೈವೇಚ್ಛೆ!

ತಮ್ಮ ಹಡಗಿಗೆ ಶತ್ರು ನಾವಿಕರು ಇನ್ನೂ ಸ್ವಲ್ಪ ದೂರದಲ್ಲೇ ಇದ್ದರು. ತಡಮಾಡಿದಷ್ಟೂ ಸಮೀಪಿಸಿ ಬಿಡುವರು. ಅಷ್ಟರೊಳಗೆ ಏನೋ ಒಂದು ಆಗಲೇ ಬೇಕಿತ್ತು. ಪಿಂಗಳನ ಆಜ್ಞೆಯಂತೆ ಗುಲಾಮರು ಹಡಗಿನ ಕೂವೆ ಮರದ ತುದಿಗೆ ಬಿಳೀ ಪತಾಕೆ ಏರಿಸಿದರು. ಅದನ್ನು ನೋಡಿದ ಕೂಡಲೇ ಶತ್ರುವಿನ ಹಡಗಿನಿಂದ ನಡುನಡುವೆ ಜಯಜಯ ಶಬ್ದಗಳು ಕೇಳತೊಡಗಿದುವು.

ಪಿಂಗಳನು ದೂರಶ್ರವಣದ ತುತ್ತೂರಿಯಂತಹ ಕಹಳೆಯನ್ನು ಬಾಯಿಗಿಟ್ಟು ಶತ್ರು ಹಡಗಿನವರೊಂದಿಗೆ ತಮ್ಮ ಹಡಗಿನಲ್ಲಿ ನಡೆದ ಸಂಗತಿಯನ್ನು ಹೇಳಿ, "ನಿಮ್ಮ ಹಡಗನ್ನು ಜಯಿಸಿ ವಶಪಡಿಸಿಕೊಳ್ಳುವ ಇಚ್ಛೆ ನಮಗಾರಿಗೂ ಇಲ್ಲ. ಕೇವಲ ಗುಲಾಮರಾದ ನಾವೆಲ್ಲರೂ ಕ್ರೂರನಾದ ನಮ್ಮ ಯಜಮಾನನನ್ನೂ, ಅವನ ಕಡೆಯವರನ್ನೂ ಹತ ಮಾಡಿದ್ದೇವೆ. ನಾವೀಗ ನಿಮ್ಮೊಡನೆ ಕೇಳುವುದೆಲ್ಲಾ, ನಮ್ಮ ಹಡಗನ್ನು ಯಾವುದೋ ಒಂದು ರೇವಿಗೆ ನಡೆಸಿ, ಅಲ್ಲಿಂದ ಯಾರು ಯಾವ ದೇಶದವರೋ ಅಲ್ಲಿಗೆ ಹೋಗುವಂತಾದರೆ ಸಾಕು. ಆದ್ದರಿಂದ ನೀವು ದೊಡ್ಡ ಮನಸ್ಸು ಮಾಡಿ, ರಾಜೀಯಾಗಿ,



ನಮ್ಮ ತಂಟೆಗೆ ಬಾರದೆ ನಮ್ಮ ಪಾಡಿಗೆ ಹೋಗಲು ಬಿಡಬೇಕು. ನೀವು ಕೂಡಾ ಸಮುದ್ರದಲ್ಲಿ ನಿಮ್ಮ ದಾರಿ ಹಿಡಿದು ಹೋಗಿಬಿಡಬೇಕೆಂದು ಪ್ರಾರ್ಥಿಸುತ್ತೇನೆ. ಇದು ನಮಗಿಬ್ಬರಿಗೂ ಒಳ್ಳೆಯದು" ಎಂದು ಕೂಗಿ ಹೇಳಿದನು.

ಅವನ ಮಾತು ಕೇಳಿದ ಮೇಲೆ ಶತ್ರು ಹಡಗಿನಲ್ಲಿ ಮತ್ತೆ ಕಲಕಲವೆದ್ದಿತು. ಸ್ವಲ್ಪಹೊತ್ತಿನ ಮೇಲೆ ಆ ಗದ್ದಲವು ಅಡಗಿತು. ಆಮೇಲೆ ಅಲ್ಲಿಂದ ಭೀಕರವಾದೊಂದು ಕಂಠಸ್ವರವು ಹೀಗೆ ಕೂಗಿ ಹೇಳಿತು :

"ಗುಲಾಮರಾದ ನಿಮಗೆ ಸ್ವೇಚ್ಛೆಯಾಗಿ ಸಮುದ್ರದ ಮೇಲೆ ಹಡಗು ನಡೆಸುವ ಹಕ್ಕು ಇಲ್ಲವೇ ಇಲ್ಲ. ಅದರ ಮೇಲೆ ನಿಮ್ಮ ಯಜಮಾನನನ್ನೂ, ಅವನ ಕಡೆಯವರನ್ನೂ ಕೊಂದುಹಾಕಿ ಕ್ಷಮಿಸಲಾಗದ ದೊಡ್ಡ ಅಪರಾಧ ಮಾಡಿದ್ದೀರಿ ! ಅದಕ್ಕೆ ತಕ್ಕ ಶಿಕ್ಷೆ ನಿಮಗೆ ಆಗಲೇಬೇಕು. ಇಲ್ಲದೆ ಹೋದರೆ ನಿಮ್ಮಿಂದ ಪಾಠ ಕಲಿತು ನನ್ನ ಹಡಗಿನ ಗುಲಾಮರು ಕೂಡಾ ಇನ್ನೊಂದು ದಿನ ದಂಗೆ ಎದ್ದು ನಮ್ಮನ್ನು ಹತಮಾಡಬಹುದು. ಒಳ್ಳೆಯ ಮಾತಿನಲ್ಲಿ ಹಡಗಿಗೆ ಲಂಗರಿಳಿಸಿ ಇರುವ ಸರಕುಗಳೊಂದಿಗೆ ಕಿಂಕಂ ಎನ್ನದೆ ನಮಗೆ ವಶರಾಗಿರಿ ! ಜಾಗ್ರತೆ !"

ಈ ಮಾತನ್ನು ಕೇಳಿ ಪಿಂಗಳನು ನಿರ್ವಿಣ್ಣನಾದನು. ಅದು ವರ್ತಕ ಹಡಗಿನ ಮುಸುಗಿನಲ್ಲಿರುವ ಸಮುದ್ರ ಚೋರರ ಹಡಗೆಂದು ಅವನು ಊಹಿಸಿಕೊಂಡನು, ಅಂತಹ ಕ್ರೂರರಿಗೆ ತಾನೂ ತನ್ನ ಅನುಚರರೂ ವಶಪಡುವುದೆಂದರೆ, ಮತ್ತೆ ತಾವೆಲ್ಲಾ ಗುಲಾಮರಾಗಿ ಮಾರಿಕೊಳ್ಳಲ್ಪಟ್ಟವರ ಹಾಗೆಯೇ ಸರಿ. ಅದು ಪಿಂಗಳನಿಗೆ ಮಾತ್ರವಲ್ಲ, ಅವನ ಸಹಚರರಿಗೂ ಇಷ್ಟವಿರಲಿಲ್ಲ.

ಪಿಂಗಳನು ಒಂದೆರಡು ಮಾತುಗಳಲ್ಲೇ ಪರಿಸ್ಥಿತಿಯನ್ನು ಕುರಿತು ಅನುಚರರಿಗೆ ಹೇಳಿದನು. ಅವರಲ್ಲಿ ಪ್ರತಿಯೊಬ್ಬನೂ ಹೋರಾಡಲಿಕ್ಕೇ ಸಿದ್ಧನಾಗಿರುವುದನ್ನು ಪ್ರಕಟಪಡಿಸಿದರು. ಪಿಂಗಳನ ಧೈರ್ಯ ಸಾಹಸ ದೃಢಚಿತ್ತಗಳು ಅವರೆಲ್ಲರಲ್ಲಿಯೂ ಪ್ರತಿಫಲಿಸಿಬಿಟ್ಟಿದ್ದುವು. ಒಬ್ಬ ಕ್ರೂರ ನರರಾಕ್ಷಸನ ಕೈಯಿಂದ ತಪ್ಪಿ ಮತ್ತೊಬ್ಬ ಕ್ರೂರ ರಾಕ್ಷಸನ ಕೈಗೆ ಬೀಳುವುದಕ್ಕಿಂತ ಹೋರಾಡಿ ಸಮುದ್ರಕ್ಕೆ ಬಿದ್ದು ಸಾಯುವುದೇ ಉತ್ತಮವೆಂದು ಎಲ್ಲರೂ ಒಕ್ಕೊರಳಿನಿಂದ ಹೇಳಿದರು.

ಕೂಡಲೇ ಬಿಳೀ ಪತಾಕೆಯನ್ನು ಕೆಳಗಿಳಿಸಲಾಯಿತು. ಮತ್ತೆ ಗುಲಾಮರೆಲ್ಲ ಪಿಂಗಳನ ಮುಂದಾಳ್ತನದಲ್ಲಿ ಜಯಜಯಾರಾವ ಮಾಡಿದರು. ಸಂಖ್ಯಾಬಲದಲ್ಲಿ ಅಧಿಕರಾಗಿದ್ದ ಶತ್ರು ಸೈನಿಕರು ಒಂದು ಸಾರಿ ತಮ್ಮ ಹಡಗಿಗೆ ಏರಿಬಿಟ್ಟರೆಂದರೆ ಆಮೇಲೆ ತಮ್ಮಿಂದ ಏನು ಮಾಡಲೂ ಸಾಧ್ಯವಾಗದು. ಆದುದರಿಂದ ಸಾಧ್ಯವಾದಷ್ಟು ಬೇಗದಲ್ಲಿ ಶತ್ರು ಹಡಗಿಗೆ ದೂರವಾಗಿ ಹೋಗಿ, ಬಾಣಗಳಿಂದ

ಯುದ್ಧ ಮಾಡುತ್ತ ಅವರು ಸಮೀಪ ಬಾರದಂತೆ ನೋಡಿಕೊಳ್ಳಬೇಕು. ಅಂಥಾ ಸಂದರ್ಭ ಬಂದುಬಿಟ್ಟರೆ, ತನ್ನ ಹಡಗನ್ನು ಶತ್ರುವಿನ ಹಡಗಿಗೆ ಗುದ್ದಿಸಿ ಅವರನ್ನೂ ತಮ್ಮನ್ನೂ ಸರ್ವನಾಶಪಡಿಸಿಕೊಳ್ಳುವ ನಿರ್ಧಾರದವರೆಗೂ ಪಿಂಗಳನು ಬಂದಿದ್ದನು.

ಯುದ್ಧವು ಮತ್ತೆ ಪ್ರಾರಂಭವಾಯಿತು. ಪಿಂಗಳನ ಅನುಚರರು ಎಡೆಬಿಡದೆ ಶತ್ರುಗಳ ಹಡಗಿನ ಕಡೆಗೆ ಬಾಣಗಳನ್ನು ಹಾರಿಸುತ್ತಾ ಇದ್ದರು. ಪಿಂಗಳನೂ ಬಾಣ ಬಿಡುತ್ತಾ, ಹಡಗನ್ನು ಹಿಂದಕ್ಕೆ ಓಡಿಸುವಂತೆ ಹೇಳುತ್ತಿದ್ದನು. ಹೀಗೆ ಹೋರಾಡುತ್ತಾ ಸಾಧ್ಯವಾದಷ್ಟು ದೂರ ದೂರ ಹೋಗಿಬಿಡಬೇಕಾಗಿತ್ತು. ಅಷ್ಟೇ ವೇಗದಿಂದ ಶತ್ರು ಹಡಗೂ ಬರುತ್ತಿರುವುದನ್ನು ನೋಡಿದ ಮೇಲೆ ತಪ್ಪಿಸಿಕೊಳ್ಳುವ ಮಾತು ಅಸಾಧ್ಯವೆನಿಸತೊಡಗಿತು. ತಮಗಿಂತ ಎರಡು ಪಾಲು ಹೆಚ್ಚಿನ ವೇಗದಿಂದ ಶತ್ರುಗಳ ಹಡಗು ಓಡಿಸಿಕೊಂಡು ಬರುತ್ತಿದೆ! ಇನ್ನು ದೇವರೇ ಗತಿ!

ಪಿಂಗಳನು ತಟಕ್ಕನೆ ಕೊನೆಯ ನಿರ್ಧಾರಕ್ಕೇ ಬಂದನು. ವಿಜಯವೋ ವೀರ ಮರಣವೋ! ಅದಕ್ಕಿಂತ ಬೇರೆ ದಾರಿ ಯಾವುದೂ ಇಲ್ಲ. ತನ್ನ ಹಡಗನ್ನು ಅತಿ ವೇಗವಾಗಿ ತಿರುಗಿಸಿ ಓಡಿಸಿ, ಶತ್ರುವಿನ ಹಡಗಿಗೆ ಢೀ ಗುದ್ದಿರೆಂದು ತನ್ನ ಕಡೆಯವರಿಗೆ ಅರಚಿ ಹೇಳಿದನು ಪಿಂಗಳ!

ಕೂಡಲೇ ಎಲ್ಲಾ ಗುಲಾಮರೂ ಹಲ್ಲುಕಚ್ಚಿ ಚಲಿಸಿ ಹಡಗನ್ನು ತಿರುಗಿಸಿ ಓಡಿಸತೊಡಗಿದರು. ಅದನ್ನು ನೋಡಿ ಶತ್ರುಗಳು ಮೊದಲು ಆಶ್ಚರ್ಯಪಟ್ಟರು. ಆಮೇಲೆ ಪಿಂಗಳನ ಉದ್ದೇಶವೇನೆಂಬುದು ಅವರಿಗೆ ಅರ್ಥವಾಯಿತು. ಹೆದರಿ ಕಂಗಾಲಾಗಿ ಕಂಪಿಸುತ್ತ ಹಾಹಾಕಾರ ಮಾಡತೊಡಗಿದರು.

ತಮ್ಮ ಹಡಗನ್ನು ಹಿಂದೆ ತಿರುಗಿಸಿ ಅಪಾಯದಿಂದ ಪಾರಾಗಬೇಕೆಂದು ಶತ್ರುಗಳು ಮಾಡಿದ ಪ್ರಯತ್ನಗಳು ಫಲಕಾರಿಯಾಗಲಿಲ್ಲ. ಪಿಂಗಳನು ಕತ್ತಿ ಝಳಪಿಸುತ್ತ ತನ್ನ ಅನುಚರರಿಗೆ ವೇಗವಾಗಿ ಓಡಿಸವಂತೆ ಕೂಗಿ ಕೂಗಿ ಹುರುಪುಗೊಳಿಸುವ ಆಜ್ಞೆ ಮಾಡುತ್ತಲೇ ಇದ್ದನು.

ನೋಡ ನೋಡುತ್ತಿದ್ದಂತೆ ಹಡಗು ಮಹಾ ವೇಗದಿಂದ ಮುಂದೆ ಮುಂದೆ ಹಾರಿ ಶತ್ರುವಿನ ಹಡಗನ್ನು ಗುದ್ದಿತು. ಮರುಕ್ಷಣದಲ್ಲಿ ಸಾವಿರಾರು ಕೊರಳುಗಳ ಆರ್ತನಾದವು ಸಮುದ್ರ ಜಲದ ಮೇಲೆ ತೇಲಾಡಿತು!

ಎರಡು ಹಡಗುಗಳೂ ಒಂದನ್ನೊಂದು ಢೀ ಹೊಡೆದುದರಿಂದ ಆಗ ಉಂಟಾದ ಹಾರಿಕೆಯ ಸ್ಪಂದನ ವೇಗಕ್ಕೆ ಪಿಂಗಳನು ತಾನಿದ್ದ ಸ್ಥಳದಿಂದ ಸಿಡಿದು ಆಕಾಶಕ್ಕೆ ಎಗರಿ ಯಾರೋ ಎತ್ತಿ ಬಿಸುಟ ಹಾಗೆ ಯಾವ ದಿಕ್ಕಿಗೋ ದೂರ ಹೋಗಿ ಸಮುದ್ರ ಜಲದಲ್ಲಿ ಬಿದ್ದನು. —(ಇನ್ನೂ ಇದೆ)






## ೧೪

[ಕ್ರೂರನಾದ ಹಡಗಿನ ಸರಂಗನಿಂದ ಯಾವಾಗಲೂ ಪೀಡನೆಗೊಳಗಾಗಿದ್ದ ಗುಲಾಮರು, ಪಿಂಗಳನ ನಾಯಕತ್ವವನ್ನು ಒಪ್ಪಿದರು. ಗುಲಾಮರಿಂದ ಸರಂಗನ ವಧೆಯಾಯಿತು. ಅದೇ ಸಮಯದಲ್ಲಿ ಶತ್ರು ಹಡಗು ಅವರ ಹಡಗನ್ನು ಸಮೀಪಿಸಿತು. ಬೇರೆ ಉಪಾಯವಿಲ್ಲದೆ ಪಿಂಗಳನು ಶತ್ರು ಹಡಗಿಗೆ ತನ್ನ ಹಡಗು ಅಪ್ಪಳಿಸುವಂತೆ ಮಾಡಿದನು. ಎರಡು ಹಡಗುಗಳೂ ಒಡೆದು ಎಲ್ಲರೂ ಸಮುದ್ರಕ್ಕೆ ಬಿದ್ದರು, ಪಿಂಗಳನೂ ಸಮುದ್ರಕ್ಕೆ ಎಸೆಯಲ್ಪಟ್ಟನು.]

ಅಲುಗಾಡುವ ಬೆಟ್ಟಗಳಂತೆ ಎದ್ದೆದ್ದು ಮಗುಚಿ ಬೀಳುವ ತುಫಾನಿನ ಸಮುದ್ರದಲ್ಲಿ ಬಿದ್ದ ಪಿಂಗಳನು ತೆರೆಯೊಂದಿಗೆ ನೀರಿನಲ್ಲಿ ಮುಳುಗಿ ಹೋಗಿ, ಮತ್ತೆಲ್ಲೋ ಬಹುದೂರದಲ್ಲಿ ಮೇಲೆದ್ದನು. ಎರಡು ಹಡಗುಗಳೂ ಒಂದನ್ನೊಂದು ಅಪ್ಪಳಿಸಿಕೊಂಡುದರಿಂದ ಚೂರುಚೂರಾದ ಹಡಗಿನ ಮರದ ತುಂಡುಗಳೂ, ತೆರೆಚಾಪೆಗಳೂ, ಚೆಲ್ಲಾಚೆದರಾಗಿ ಮೂಲೆಗೊಂದೊಂದರಂತೆ ಸಮುದ್ರದ ತೆರೆಗಳೊಂದಿಗೆ ಎತ್ತೆತ್ತಲೋ ಹೋದುವು. ಮುಳುಗುವ ನಾವಿಕರ ಹಾಹಾಕಾರಗಳು ತುಫಾನಿನ ಹೋರ್ದನಿಯೊಂದಿಗೆ ಲೀನವಾಗಿ ಹೋಗುತ್ತಿದ್ದುವು. ಅಲ್ಲಿ ಎರಡು ಹಡಗುಗಳಿದ್ದುವೆಂದೇ ಗೊತ್ತಾಗದಂತಾಯಿತು. ಸಾಯುವ ಹೊತ್ತಿನಲ್ಲಿ ಶತ್ರು ಮಿತ್ರ ಭೇದವೆಲ್ಲಾ ಅಳಿಸಿ ಹೋಗಿ ಒಬ್ಬರನ್ನೊಬ್ಬರು ಅಪ್ಪಿಕೊಂಡು ಮುಳುಗಿದವರೆಷ್ಟೋ! ಗುಡ್ಡದಷ್ಟೆತ್ತರಕ್ಕೆ ಏರಿ ಏರಿ ಬೀಳುತ್ತಿದ್ದ ಅಲೆಗಳಲ್ಲಿ ಸಿಕ್ಕಿಕೊಂಡ ಪಿಂಗಳನು ಬಿಕ್ಕಲುಮುಕ್ಕಲಾಗಿ ಚಡಪಡಿಸುತ್ತಿದ್ದನು. ತಾನು ಜೀವದಿಂದುಳಿದು ಭೂಪ್ರದೇಶವನ್ನು ಸೇರಲು ದೋಣಿಗೀಣಿ ಯಾವುದೂ ಇನ್ನಿಲ್ಲ. ಕೇವಲ ತೋಳುಗಳ ಬಲವನ್ನೇ ನಂಬಿಕೊಂಡು ಸ್ವಲ್ಪಹೊತ್ತು ಈಜಬಹುದು. ಆದರೆ



ಯಾವ ದಿಕ್ಕಿಗೆ ಹೋಗಬೇಕು ? ಭೂಮಿ ಯಾವ ದಿಕ್ಕಿನಲ್ಲಿದೆ ? ಅದಾವುದೂ ತಿಳಿಯುವಂತಿಲ್ಲ. ಅಸಲು ತನಗೆ ಸಮುದ್ರ ಪ್ರಯಾಣವೇ ಹೊಸದು. ತನ್ನ ಜತೆಯಲ್ಲಿದ್ದ ಅಷ್ಟೂ ಮಂದಿ ಏನಾದರು ? ಈ ಗತಿ ತನಗೆ ಒಬ್ಬನಿಗೆ ಮಾತ್ರ ಬಂದುದಲ್ಲವಷ್ಟೇ ? ತನ್ನ ಶತ್ರುಗಳಿಗೂ ಮಿತ್ರರಿಗೂ ಸಹ ಇದೇ ಗತಿಯಾಗಿದೆ. ಈ ಸಮಯದಲ್ಲಿ ಮಾನವರೆಲ್ಲಾ ಒಂದೇ ! ಬದುಕುವ ಆಶೆ ಇದ್ದರೆ ಮಾತ್ರ ಶತ್ರುಭಾವ ಮಿತ್ರಭಾವ ಎಲ್ಲವೂ. ಈಗ ಅವರೆಲ್ಲಿಯೋ ತಾನೆಲ್ಲಿಯೋ !

ಸಾಯುವವರೆಗೂ ಬದುಕುವ ಪ್ರಯತ್ನ ನಡೆದೇ ತೀರುತ್ತದೆ. ತಾನೀಗ ಯಾವ ದಿಕ್ಕಿಗೆ ಈಜುವುದೋ ಹೇಗೆ ತಿಳಿದೀತು ? ನೀರ ಮೇಲೆ ಬಂದಾಗಲೆಲ್ಲ ಪಿಂಗಳನು ಕಣ್ಣಿಗೆ ಕಂಡಷ್ಟು ದೂರದವರೆಗೆ ನೋಡಿದರೂ ಸಮುದ್ರದ ಹೊರತು ಮತ್ತೇನೂ ಕಾಣಿಸಲಿಲ್ಲ. ಎತ್ತಲೂ ಕದಲಬಾರದೆಂದುಕೊಂಡರೂ ತುಫಾನಿನ ಅಲೆಗಳು ಅವನನ್ನು ಎಲ್ಲೆಲ್ಲೋ ಸಾಗಿಸುತ್ತಲೇ ಇದ್ದುವು. ಅಷ್ಟುಮಂದಿ ತನ್ನೊಂದಿಗಿದ್ದವರಲ್ಲಿ ಈಗ ಒಬ್ಬನಾದರೂ ತನ್ನ ಕೈಗೆ ಸಿಗಲಿಲ್ಲವೇಕೆ ? ಅವರನ್ನೆಲ್ಲ ಒಮ್ಮೊಗೇ ಸಮುದ್ರವು ನುಂಗಿತೆ ?

ಸುಮಾರು ಕಾಲುಗಂಟೆಯ ಹೊತ್ತಿನವರೆಗೂ ಪಿಂಗಳನು ಸಮುದ್ರದಲ್ಲಿ ಮುಳುಗುತ್ತ ತೇಲುತ್ತ ಅತ್ಯಂತ ಯಾತನೆಪಟ್ಟನು. ಇನ್ನು ತನ್ನ ಸಾವು ಬಹಳ ಹತ್ತಿರದಲ್ಲಿದೆ ಎಂಬ ನಿಶ್ಚಯಕ್ಕೂ ಬಂದನು. ಅವನ ತಾಯಿಯ ನೆನಪು ಬಂದಿತು. ಅವಳೆಲ್ಲಿರುವಳೋ, ಏನು ಮಾಡುವಳೋ ? ಅದೇ ಸಮಯದಲ್ಲಿ ಅವನ ಕೈಗೊಂದು ವಸ್ತು ತಟ್ಟಿತು. ಅದನ್ನು ಬಾಚಿ ಎರಡು ಕೈಗಳಿಂದಲೂ ಹಿಡಿದುಕೊಂಡನು.

ಪಿಂಗಳನ ತಾಯಿ ಆಗಾಗ ಹೇಳುವಂತೆ ಅದೃಷ್ಟ ದೇವತೆ ಅವನನ್ನು ಆಗಾಗ ನೋಡುತ್ತಲೇ ಇರುತ್ತಾಳೆಂದು ತೋರುತ್ತದೆ. ಈಗ ಅವನ ಕೈಗಳಿಗೆ ದೊರಕಿದ ವಸ್ತು ಒಂದು ಹಲಗೆಯ ತುಂಡು. ಒಡೆದ ಹಡಗಿನ ತುಂಡುಗಳಲ್ಲಿ ಅದೊಂದು. ಪಿಂಗಳನು ಮನಸ್ಸಿನಲ್ಲೇ ದೇವರಿಗೆ ಸಾವಿರ ನಮಸ್ಕಾರ ಮಾಡುತ್ತ, ಆ ಹಲಗೆಯನ್ನು ಎರಡು ಕೈಗಳಿಂದಲೂ ಎಳೆದು ಅದರ ಮೇಲೆ ಬೋರಲು ಬಿದ್ದನು. ದಣಿದು ಕಳಚಿ ಬೀಳುವಂತಾದ ತೋಳುಗಳಿಗೆ ಸ್ವಲ್ಪ ವಿಶ್ರಾಂತಿ ಸಿಕ್ಕಿದಂತಾಯಿತು. ಹೀಗೇ ಈಜಿಕೊಂಡು ಹೋದರೆ ಸಮುದ್ರದ ಅಲೆಗಳು ಯಾವುದೋ ತೀರಕ್ಕೆ ಸೇರಿಸಬಹುದೆಂದು ಒಂದು ನಂಬಿಗೆ ಬಂತು ಅವನಿಗೆ. ಮೈ ಕದಲಿಸಲಿಕ್ಕೂ ಆಗದಷ್ಟು ಹಸಿವೆಯ ಸಂಕಟ. ಚಳಿಯ ಬಾಧೆ, ಕೊರೆತ. ಎಲ್ಲದಕ್ಕೂ ಆ ಮರದ ತುಂಡೇ ಸರ್ವಸ್ವವೆಂಬಂತೆ ಅದನ್ನು ಬಿಗಿಯಾಗಿ ಅಪ್ಪಿಕೊಂಡನು.

ಮರದ ಹಲಗೆಯ ಮೇಲೆ ತೆರೆಗಳ ಇಷ್ಟದಂತೆ ತೇಲುತ್ತ ಮುಳುಗುತ್ತ ಹೋಗುತ್ತಿರಲು, ಪಿಂಗಳನು ಹಲಗೆಯ ಪಟ್ಟನ್ನು ಮಾತ್ರ ಬಿಡಲಿಲ್ಲ. ಕಣ್ಣುಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡಿದ್ದನು. ತನ್ನ

ಸುತ್ತಲೂ ಏನು ನಡೆಯುತ್ತಿದೆಯೆಂಬುದು ಅವನಿಗೆ ತಿಳಿಯದಂತೆ ತಂದ್ರಾವಸ್ಥೆಗೆ ಜಾರಿದನು. ಕಣ್ಣು ಬಿಡಿಸಿ ನೋಡಿದರೆ, ತನ್ನ ಗತಿ ಎಂತಹುದೆಂದು ತಿಳಿದುಕೊಂಡು ಹೆದರಿ ಇರುವ ಬಲವೂ ಹೋಗಿ ಬಿಡುವುದೆಂಬ ಭಯ.



ಹಾಗೆ ಕೆಲವು ಗಂಟೆಗಳೇ ಕಳೆದುವು. ತುಫಾನಿನ ಅಬ್ಬರ ಶಾಂತವಾಯಿತು. ಎಲ್ಲಿಯೋ ಸಮುದ್ರದಾಚೆಗೆ ಸೂರ್ಯನೂ ಅಸ್ತಮಿಸಿದ್ದಾಯಿತು. ತನ್ನ ಸುತ್ತಲೂ ಕತ್ತಲೆ ಕವಿದ ಸಂಗತಿ ಕೂಡಾ ಪಿಂಗಳನಿಗೆ ಗೊತ್ತಾಗಲಿಲ್ಲ.

ಕಿವಿಯೊಳಗೆ ಎಂತಹುದೋ ಹೋರ್ದನಿ. ಸಮುದ್ರವೇ ತನ್ನ ಕಿವಿಗಳೊಳಗೆ ಹೊಕ್ಕಿರುವುದೆಂದೂ, ತಾನು ಸಮುದ್ರದ ತಳಕ್ಕೆ ಇಳಿಯುತ್ತಿರುವೆನೆಂದೂ ತೋರುತ್ತಿತ್ತು. ಕಣ್ಣುಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡಿದ್ದನು. ಬಾಯಾರಿಕೆಯಿಂದ ನಾಲಗೆ ಒಣಗುವಂತೆ ತೋರಿತು. ಅವನಿಗೆ ತಿಳಿಯದಂತೆಯೇ ಗಂಟಲಲ್ಲಿ ಸಮುದ್ರದ ಉಪ್ಪು ನೀರು ಇಳಿಯಿತು. ಅದರಿಂದ ಹೊಟ್ಟೆ ವಿಕಾರ ಮಾಡಿಕೊಂಡು ಬದಿಗೆ ತಿರುಗಿದನು. ಆದರೂ ಹಲಗೆಯನ್ನು ಬಿಡಲಿಲ್ಲ. ಹೊಟ್ಟೆಯಲ್ಲಿ ಹಸಿವೆಯ ಉರಿ. ಹಾಗೆಯೇ ಬವಳಿ ಬಂದಿತು. ಯಾವ ಶಬ್ದವೂ ಕೇಳದಂತಾಯಿತು. ಗಾಢ ನಿದ್ರೆ.

ಪಿಂಗಳನು ಕಣ್ಣುಗಳನ್ನು ಬಿಡಿಸಿ ನೋಡಿದಾಗ ಮಬ್ಬುಗಳೇನಿಲ್ಲದ ಪ್ರಶಾಂತವಾದ ನೀಲಾಕಾಶವು ಕಾಣಿಸಿತು. ಶರೀರದ ಸೊಂಟದ ಮೇಲು ಭಾಗವನ್ನು ಒಲೆಯೊಳಗಿಟ್ಟು ಸುಡುವ ಹಾಗೆ, ಕೆಂಡದ ಮೇಲೆ ಬಿದ್ದಿರುವ ಹಾಗೆ ಅನಿಸಿ ಪಟಪಟ ಅಡಿಸಿಕೊಂಡನು. ತೊಡೆಗಳೆರಡೂ ನೀರಿನಲ್ಲೇ ಇವೆ. ಮರಗಟ್ಟಿ ಹೋಗಿವೆ. ಸಮುದ್ರದ ಬದಿಯಲ್ಲಿ ಕೆಂಡವೆಲ್ಲಿಯದು? ಈ ಉರಿನೆಲಕ್ಕೆ ತನ್ನನ್ನು ಎಳೆದು ಹಾಕಿದವರು ಯಾರು?

ಅಂತೂ ತಾನು ಬದುಕಿರುವೆನೆಂದು ತಿಳಿದ ಕೂಡಲೇ ತನ್ನ ಪರಿಸ್ಥಿತಿ ವಿಚಿತ್ರವಾಗಿರುವಂತೆಯೂ ಅನಿಸಿತು. ಈ ಬಿಸಿ ಯಾವುದರದು? ತಾನಿರುವ ಸ್ಥಳ ಯಾವುದು? ಕಷ್ಟಪಡುತ್ತ ತಲೆಯನ್ನು ಸ್ವಲ್ಪ ಮಾತ್ರ ತಿರುಗಿಸಿ ನೋಡಿದನು.

ಕಂಡ ಪ್ರದೇಶವೆಲ್ಲಾ ಮರಳ ರಾಶಿಯೇ! ಹೊಯಿಗೆಯ ಗುಡ್ಡಗಳೇ! ಆ ಕ್ಷಣದಲ್ಲಿ ಅವನಿಗೆ ಪ್ರಾಣಭೀತಿಯೂ, ಸಾಯುವ ಹೊತ್ತಿಗೆ ಬರುವಂತಹ ದೊಡ್ಡ ಸತ್ವಶಕ್ತಿಯೂ ಬಂದು ಎದ್ದು ನಿಲ್ಲಲು ತುಳ್ಳಾಡಿದನು. ಕಾಲುಗಳಿಗೂ ರಕ್ತದ ಓಟ ಬಂದಿತು. ಆ ಕಾಲುಗಳಾಚೆಗೆ ಇರುವುದೆಲ್ಲಾ ಜಲಮಯ. ಅದು ಸಮುದ್ರವೇ ಆದರೂ ಸರೋವರದ ಹಾಗೆ ಪ್ರಶಾಂತವಾಗಿದೆ. ತೆರೆಗಳ ಹೊಯ್ದಾಟವಿಲ್ಲ. ಒದರಾಡುವ ಆ ಜಲರಾಶಿಯಿಂದ ಇಲ್ಲಿಗೆ ಹೇಗೆ ಬಂದೆನೆಂದು ಅವನಿಗೆ ತಿಳಿಯಲಿಲ್ಲ. ಆ ಪ್ರದೇಶವು ಎಂತಹುದೋ, ತಾನು ಎಂತಹ ಭೂಮಿಯ




ತೀರವನ್ನು ಸೇರಿದ್ದೇನೋ? ಒಂದು ಬದಿಯಲ್ಲಿ ಅಪಾರ ಜಲ ರಾಶಿಯಾದರೆ, ಇನ್ನೊಂದು ಬದಿಯಲ್ಲಿ ಮರಳುಗಾಡು. ಹೆಸರಿಗಾದರೂ ಮರಗಿಡಗಳ ಹಸಿರೇ ಇಲ್ಲ! ಬಿಸಿಲು ಕಾದು ಮರಳು ಕೆಂಡವಾಗಿತ್ತು. ಜಲರಾಶಿಯಲ್ಲಿ ಈಜಿಕೊಂಡಿದ್ದರೆ ಕೆಲವು ದಿನವಾದರೂ ಬದುಕಿರಬಹುದು. ಈ ಮರುಭೂಮಿಯಲ್ಲಿ ಕೆಲವು ಗಂಟೆಗಳೂ ಬದುಕಿರಲಾಗದೆ, ಒಲೆಗೆ ಬಿದ್ದ ಅಕ್ಕಳಿ ಯಾಗುವುದೇ ಸರಿ !

ಪಿಂಗಳನು ಆಲುತ್ತಮಾಲುತ್ತ ಕಾಲುಗಳನ್ನು ಎತ್ತಿ ಎತ್ತಿ ಹಾಕುತ್ತ ಮುಂದಕ್ಕೆ ನಡೆಯಲಾರಂಭಿಸಿದನು. ಸೂರ್ಯನ ಬಿಸಿ ಸರಳಿನಂತಹ ಕಿರಣಗಳು ಕಣ್ಣುಗಳ ಮೇಲೆ ಬೀಳದಂತೆ ಕೈಯನ್ನು ಅಡ್ಡವಾಗಿಟ್ಟುಕೊಂಡು, ದೂರದವರೆಗೆ ದೃಷ್ಟಿ ಹರಿಸಿ ನೋಡಿದನು.

ದೂರದಲ್ಲೊಂದು ಕಡೆ ಆಕಾಶದಲ್ಲಿ ಪಕ್ಷಿಗಳು ಎಗರಿಕೊಂಡಿರುವುದು ಕಂಡಿತು. ಅವು ಎತ್ತಲೋ ಹಾರಿಹೋಗುವ ಪಕ್ಷಿಗಳಾಗಿರಲಿಲ್ಲ. ಒಂದೇ ಪ್ರದೇಶದಲ್ಲಿ ವಲಯಾಕಾರವಾಗಿ ಸುತ್ತಿ ಸುತ್ತಿ ಹಾರುತ್ತಿದ್ದುವು. ಆಗಾಗ ಕೆಳಗೆ ಇಳಿದು ಮತ್ತೆ ಮೇಲೆ ಎಗುರುತ್ತಿದ್ದುವು. ಅಲ್ಲಿ ಏನೋ ಅವುಗಳ ಆಹಾರ ವಸ್ತುವಿರಬಹುದು. ಜನರಾರಾದರೂ ಇರಬಹುದೆ ?

ಪಿಂಗಳನಲ್ಲಿ ಆಶ್ಚರ್ಯದ ಜತೆಯಲ್ಲೇ ಎಂತಹುದೋ ಆಶೆಯು ಕುಡಿಯೂ ಹೊರಟಿತು. ಇನ್ನೂ ಮುಂದೆ ಹೋದಾಗ ಅವು ರಣ ಹದ್ದುಗಳೆಂದು ತಿಳಿಯಿತು.

ಹಾಗಾದರೆ ಅಲ್ಲಿ ಯಾವುದೋ ಪ್ರಾಣಿ ಸತ್ತಿರಬಹುದು. ಸ್ಮಶಾನವೋ ಏನೋ? ಪಕ್ಕದಲ್ಲಿ ಊರೂ ಇರಬಹುದು ಎಂದುಕೊಂಡನು. ಊರಿರುವಂತೆ ಏನೂ ಕಾಣದಿದ್ದರೂ ಅದೊಂದು ಆಶೆಯ ಊಹೆ ! ಈ ಬಗೆಯ ಆಲೋಚನೆಯಿಂದ ಮೈಗೆ ಶಕ್ತಿ ಬಂದಿತು. ಆ ಹದ್ದುಗಳು ತಿರುಗುವ ಪ್ರದೇಶವನ್ನೇ ಗುರಿ ಇಟ್ಟುಕೊಂಡು, ಸುಡುತ್ತಿರುವ ಮರಳಿನಲ್ಲಿ ಹಾಯ್ ಹೂಯ್ ಎನ್ನುತ್ತ ಅತ್ಯಂತ ಸಹನೆಯಿಂದ ನಡೆಯ ತೊಡಗಿದನು ಪಿಂಗಳ.

ಸ್ವಲ್ಪ ಹೊತ್ತಿಗೆ ಪಿಂಗಳನು ಆ ಪ್ರದೇಶವನ್ನು ಸಮೀಪಿಸಿದನು. ಆಗ ಅಲ್ಲಿ ಕೆಲವು ರಣ ಹದ್ದುಗಳು ಕೆಳಕ್ಕಿಳಿದು ಅಲ್ಲಿ ಬಿದ್ದಿರುವ ಯಾವುದೋ ಒಂದು ವಸ್ತುವನ್ನು ಮುತ್ತಿಕೊಂಡಿದ್ದುವು. ಅಯ್ಯೋ ! ಅದೊಂದು ಮನುಷ್ಯ ಶರೀರ ! ಆ ದೃಶ್ಯವನ್ನು ನೋಡಿ ಪಿಂಗಳನಿಗೆ ರೋಮಾಂಚನವಾಯಿತು.

ಕೈಕಾಲುಗಳನ್ನು ಹಗ್ಗದಿಂದ ಬಿಗಿಯಲ್ಪಟ್ಟ ಒಬ್ಬ ಮನುಷ್ಯನು ಅಲ್ಲಿದ್ದ ಒಂದು ಕಲ್ಲಿಗೆ ಆನಿಸಿದ ಹಾಗೆ ಕಟ್ಟಲ್ಪಟ್ಟು ಬಿದ್ದಿದ್ದನು. ಅವನಲ್ಲಿ ಯಾವ ಚಲನವೂ ಕಾಣುತ್ತಿರಲಿಲ್ಲ. ರಣ ಹದ್ದುಗಳು ಅವನನ್ನು ಕುಕ್ಕಿ ಕಿತ್ತು ತಿನ್ನಲು ಅಲ್ಲಿ ಕೂಡಿಕೊಳ್ಳುತ್ತಿದ್ದುವು. ಪಿಂಗಳನು ಬಾಗಿ ಅಲ್ಲಿ ಸಿಕ್ಕಿದ ಸಣ್ಣದೊಂದು ಕಲ್ಲಿನ ತುಂಡನ್ನು ಹೆಕ್ಕಿ ಆ ರಣ ಹದ್ದುಗಳ ಕಡೆಗೆ ಬಿಸುಟನು. ಕೂಡಲೇ



ಕೆಲವು ರಣ ಹದ್ದುಗಳು ರೆಕ್ಕೆಗಳನ್ನು ಟಪ್ಪ ಟಪ್ಪನೆ ಆಡಿಸಿ ಆಕಾಶಕ್ಕೆದ್ದುವು. ಕೆಲವು ಸ್ವಲ್ಪ ದೂರದವರೆಗೆ ಓಡಿ ತಮ್ಮ ಆಹಾರದ ಕಡೆಗೆ ನೋಡುತ್ತ ಅಲ್ಲೇ ನಿಂತುವು. ಆಕಾಶಕ್ಕೆ ಹಾರಿದ ಪಕ್ಷಿಗಳು ಮತ್ತೆ ಕೆಳಗೆ ಬಂದು ದೂರದಲ್ಲಿ ಎರಗಿದುವು.

ಪಿಂಗಳನು ಆ ಮನುಷ್ಯನ ಹತ್ತಿರ ಹೋದನು. ಅವನ ಕಣ್ಣುಗಳು ಮುಚ್ಚಿಕೊಂಡಿದ್ದುವು. ದೇಹದಲ್ಲಿ ಎಲ್ಲಿಯಾದರೂ ಪ್ರಾಣವಿರುವುದೋ ಎಂದು ಪಿಂಗಳನು ಅವನ ಎದೆಯ ಮೇಲೆ ಕೈಯಿಟ್ಟು ಪರೀಕ್ಷೆ ಮಾಡಿದನು. ಹದ್ದುಗಳಿಗೂ ಅದೇ ಸಂದೇಹ ಬಂದಿರಬಹುದು. ಅದುವರೆಗೂ ಅವನಲ್ಲಿ ಚಡಪಡಿಕೆ ಇದ್ದಿರಬೇಕು. ಆದರೆ ಈಗ ಯಾವ ಚಲನೆಯೂ ಕಾಣಲಿಲ್ಲ.

ಈ ಮರುಭೂಮಿಯಲ್ಲಿ ಯಾರು ಯಾವ ಕಾರಣಕ್ಕಾಗಿ ಈ ನಿರ್ಭಾಗ್ಯ ಮನುಷ್ಯನಿಗೆ ಇಂತಹ ಘೋರ ಮರಣ ಬರುವ ಹಾಗೆ ಮಾಡಿದರೋ ಎಂಬುದು ಪಿಂಗಳನ ಊಹೆಗೆ ನಿಲುಕಲಿಲ್ಲ. ಆ ನಿಮಿಷದಲ್ಲಿ ಅವನಿಗೆ ಹೊಸದೊಂದು ವಿಷಯ ಅರ್ಥವಾಯಿತು. ಜೀವನಾಧಾರವೇನೂ ಇಲ್ಲದೆ ಭಯಂಕರವಾಗಿಯೂ, ನಿರ್ಜನವಾಗಿಯೂ ಕಾಣುವ ಈ ಮರುಭೂಮಿಯಲ್ಲಿ ಸಮೀಪದಲ್ಲೆಲ್ಲಿಯೋ ಜನ ನಿವಾಸ ಸ್ಥಾನವಿರಲೇಬೇಕು. ಅವರು ಬಹಳ ಕ್ರೂರರಾಗಿರಲೂ ಬೇಕು !

ಅದು ಯಾವ ದಿಕ್ಕಿನಲ್ಲಿದೆಯೋ? ತಾನು ಯಾವ ಕಡೆಗೆ ಹೋಗಬೇಕು ? ಎಲ್ಲಕ್ಕೂ ಮೊದಲು ಬಾಯಾರಿಕೆ ತೀರಿಸಿಕೊಳ್ಳಬೇಕಾಗಿದೆ. ಆಮೇಲೆ ಏನಾದರೂ ತಿನ್ನಲೂ ಬೇಕು. ಇವುಗಳ ದಾರಿ ಹೇಗೆ ? ಸಿಕ್ಕುವ ಮನುಷ್ಯರು ದಯಾವಂತರಾಗಿದ್ದರೆ ತಾನೇ ಅದೆಲ್ಲಾ ?

ಇಂತಹ ಸಮಸ್ಯೆಯಲ್ಲಿ ಪಿಂಗಳನು ಮೇಲೆ ಕೆಳಗೆ ನೋಡಿಕೊಂಡಿದ್ದಾಗ, ದೂರದಲ್ಲಿ ಮರುಭೂಮಿಯಲ್ಲಿ ಪ್ರಯಾಣಿಸುತ್ತಿದ್ದ ಒಂಟೆ ಸವಾರರ ನಾಯಕನೊಬ್ಬನು, ತನ್ನ ದುರ್ಬೀನನ್ನು ಕಣ್ಣಿಗಿಟ್ಟುಕೊಂಡು, ಪಿಂಗಳನನ್ನೂ, ಸುತ್ತಲೂ ಹಾರುತ್ತಿದ್ದ ಹದ್ದುಗಳನ್ನೂ ನೋಡುತ್ತಿದ್ದನು.

ಮರುಕ್ಷಣದಲ್ಲೇ ಅವನ ಆಜ್ಞೆಯಂತೆ, ಒಂಟೆ ಪಟಾಲಂನವರು ಬಹು ವೇಗದಿಂದ ಓಡಿಕೊಂಡು ಪಿಂಗಳನಿರುವಲ್ಲಿಗೇ ಬರ ತೊಡಗಿದರು.

ದೂರದಲ್ಲಿ ಧೂಳೇಳುವುದನ್ನು ನೋಡಿ ಪಿಂಗಳನು ಮೊದಲು ಆಶ್ಚರ್ಯಪಟ್ಟು, ಅಷ್ಟರಲ್ಲಿ ಅದಕ್ಕೆ ಕಾರಣ ಗೊತ್ತಾಗಲು ಬೆರಗಾಗಿ ನಿಂತನು. ಒಂಟೆಗಳ ಸವಾರರ ಪಟಾಲಂ ಸ್ಪಷ್ಟವಾಗಿ ಕಾಣುವಾಗ ಮೊದಲು ಉತ್ಸಾಹವಾದರೂ ಬೆನ್ನಿಗೇ ಭಯವೂ ಹತ್ತಿತು. ಒಂದುವೇಳೆ ಆ ಬರುವವರು ಮರುಭೂಮಿಯ ಕಳ್ಳರಾಗಿದ್ದರೆ ?

ತನ್ನ ಹತ್ತಿರ ಅವರು ದೋಚಿಕೊಳ್ಳಲು ಏನೂ ಇಲ್ಲದಿದ್ದರೂ, ತನ್ನನ್ನೇ ದೋಚಿಕೊಂಡು ಗುಲಾಮ



ನಾಗಿ ಮಾಡುತ್ತಾರಲ್ಲ! ಎಲ್ಲಿಯಾದರೂ ಅಡಗಿಕೊಳ್ಳೋಣವೆಂದರೆ ಅಲ್ಲೆಲ್ಲೂ ಸ್ಥಳವೇ ಇಲ್ಲ. ಅದಕ್ಕೆ ಬೇಕಾದ ದೇಹ ಶಕ್ತಿಯೂ ತನಗಿಲ್ಲ. ಈಗ ತಾನಿರುವ ದೀನ ಸ್ಥಿತಿಯಲ್ಲಿ ಕಾಲೆತ್ತಿ ಮರಳಿನಲ್ಲಿ ನಡೆಯಲಿಕ್ಕಾದರೂ ಎಲ್ಲಿ ತ್ರಾಣವಿದೆ?

ಪಿಂಗಳನು ಇಂತಹ ಊಹಾಪೋಹಗಳಿಂದ ದೋಲಾಯಮಾನನಾಗಿರುವಾಗ, ಒಂಟೆ ಪಟಾಲಂ ಅಲ್ಲಿಗೆ ಬಂದೇ ಬಂದಿತು.

ನಾಯಕನು ಗಂಭೀರವಾದ ದೊಡ್ಡ ಕಂಠದಿಂದ "ಹೋ" ಎಂದ ಕೂಡಲೇ ರಣ ಹದ್ದುಗಳೆಲ್ಲ ಆಕಾಶಕ್ಕೆ ಹಾರಿಹೋದುವು. ಅವನು ಮಾಡಿದ ಗಂಭೀರ ಧ್ವನಿಯ ಆಜ್ಞೆಯಂತೆ ಪಟಾಲಂನವರು ತಮ್ಮ ತಮ್ಮ ವಾಹನಗಳಿಂದ ಇಳಿದು ಪಿಂಗಳನ ಸುತ್ತಲೂ ಕೋಟೆ ಕಟ್ಟಿ ನಿಂತರು. ಬೆಚ್ಚಿ ಬೆರಗಾಗಿ ಮೂಕನಂತಾದ ಪಿಂಗಳನನ್ನು, ಒಂಟೆ ಸವಾರರ ನಾಯಕನು ಸ್ವಲ್ಪ ಹೊತ್ತು ಪರೀಕ್ಷಿಸಿ ನೋಡಿ, "ಸುಳ್ಳು ಹೇಳಬೇಡ. ಯಾರು ನೀನು? ನೀನು ಹೆಗ್ಗಡೇಗೇ ಕಡೆಯವನೋ?" ಎಂದು ಕೇಳಿದನು.

ಅದಕ್ಕೇನೂ ಉತ್ತರ ಬಾರದಿರಲು ಸತ್ತ ಮನುಷ್ಯನ ಹತ್ತಿರ ಬಗ್ಗಿ ನೋಡಿ, ತನ್ನ ಅನುಚರರ ಕಡೆಗೆ ತಿರುಗಿ, "ಅರರೇ! ಇಲ್ಲಿ ಸತ್ತು ಬಿದ್ದಿರುವವನು ನಮ್ಮವನೇ! ಕೋಟೆಯ ಕಾವಲಿಗೆ ಕಳಿಸಿದ್ದ ಉಳಿದವರೆಲ್ಲ ಏನಾದರು? ಒಂದುವೇಳೆ ಕೋಟೆಯೇ ಹೆಗ್ಗಡೇಗೆಗಳ ವಶಕ್ಕೆ ಸಿಕ್ಕಿಹೋಗಿದೆಯೋ?" ಎಂದು ಹಳಹಳಿಸಿಕೊಂಡನು.

ಆಗ ಒಬ್ಬ ಪಟಾಲಂ ಮನುಷ್ಯ ತನ್ನ ಈಟಿಯನ್ನು ಪಿಂಗಳನ ಬೆನ್ನಿಗೆ ಆನಿಸಿ, "ನಿಜ ಹೇಳು. ನಿಮ್ಮ ನಾಯಕ ಹೆಗ್ಗಡೇಗೆ ಎಲ್ಲಿದ್ದಾನೆ?" ಎಂದು ಗದರಿಸಿ ಕೇಳಿದನು.

ಪಿಂಗಳನಿಗೆ ಆ ಪ್ರಶ್ನೆಯ ಅರ್ಥವೇ ತಿಳಿಯಲಿಲ್ಲ. ಬಹುಶಃ ಆ ಹೆಗ್ಗಡೇಗೆ ಎಂಬವನು ಕಳ್ಳರ ಗುಂಪಿನ ಮುಖಂಡನೋ ಏನೋ. ಹಾಗಾದರೆ ಇವರು ಯಾರಾಗಿರಬಹುದು? ರಾಜನ ಕಡೆಯವರೋ, ವ್ಯಾಪಾರದ ಪಯಣಿಗರೋ?

ಹೀಗೆ ಅನುಮಾನಿಸಿಕೊಂಡು ಪಿಂಗಳನು, "ನಾನೊಬ್ಬ ಒಂಟಿ ಆಳು ಮಾತ್ರ, ಯಾವ ಕಡೆಯವನೂ ನಾನಲ್ಲ. ಮಹಾ ಸಮುದ್ರದಲ್ಲಿ ತುಫಾನಿಗೆ ಸಿಕ್ಕಿ ನಾನಿದ್ದ ಹಡಗು ಒಡೆದು ಮುಳುಗಿಹೋಯಿತು. ದೇವರ ಕೃಪೆಯಿಂದ ನಾನೊಬ್ಬನೇ ಬದುಕಿ, ಓ ಅಲ್ಲಿ ದಡಕ್ಕೆ ಬಿದ್ದಿದ್ದೆ. ಏನೂ ತೋರದೆ ಇಲ್ಲಿಗೆ ಬಂದು, ಇಲ್ಲಿ ಸತ್ತಿರುವವನನ್ನು ನೋಡುತ್ತಾ ಇದ್ದೆ. ಈಗ ನೀವು ಬಂದಿರಿ. ಇದು ಯಾವ ದೇಶವೋ, ಈ ಮರುಭೂಮಿಯ ಹೆಸರೇನೋ? ನನಗೆ ಒಂದೂ ಗೊತ್ತಾಗುವುದಿಲ್ಲ. ನನ್ನ ಶರೀರ ಸ್ಥಿತಿಯನ್ನು ನೋಡಿದರೆ ನಾನು ಹೇಳಿದ್ದು ಸತ್ಯವೆಂದು ನಿಮಗೆ ತಿಳಿದೀತು. ಹೆಚ್ಚಿಗೆ ಮಾತಾಡುವ ಶಕ್ತಿಯೂ ನನಗಿಲ್ಲ" ಎಂದನು.



ಪಟಾಲಂ ನಾಯಕನು ಪಿಂಗಳನ ಮಾತು ಕೇಳಿ, ಮತ್ತೊಮ್ಮೆ ಅವನನ್ನು ಪರೀಕ್ಷಿಸಿ ನೋಡುತ್ತ, "ನೀನು ಹೇಳುವುದು ನಿಜವೇ ಆದರೆ ನಿನಗೆ ಯಾವ ಭಯವೂ ಇಲ್ಲ. ಒಂದುವೇಳೆ ಈ ವೇಷ ನಟನೆಗಳಿಂದ ಸುಳ್ಳು ಹೇಳಿದೆಯೆಂದಾದರೆ ನಿನ್ನನ್ನು ಚೂರು ಚೂರು ಮಾಡಿ, ಆ ರಣ ಹದ್ದುಗಳಿಗೆ ಎಸೆದು ಬಿಡುತ್ತೇವೆ. ನೀನು ಈಗ ಇರುವುದು ಆಫ್ರಿಕಾ ಸಮುದ್ರ ತೀರದಲ್ಲಿರುವ ಅರೇಬಿಯಾ ದೇಶಕ್ಕೆ ಸೇರಿದ ಪ್ರಾಂತ. ನಾನು ನವಾಬರ ಒಂಟೇ ಪಟಾಲಂ ನಾಯಕ. ಇನ್ನು ನಿನ್ನ ಹಡಗು ಸಮುದ್ರದಲ್ಲಿ ಮುಳುಗಿತೆಂದು ನೀನು ಹೇಳಿದ್ದೆಲ್ಲಾ ನಿಜವೇ ಏನು?" ಎಂದು ಕೇಳಿದನು.

ಅಂತೂ ಈಗ ಬಂದವರು ದಾರಿ ದೋಚುವವರಲ್ಲವೆಂದೂ, ನವಾಬನ ಸೈನಿಕರೆಂದೂ ಗೊತ್ತಾಗಿ ಪಿಂಗಳನಿಗೆ ಬಹಳ ಸಂತೋಷವೂ ಧೈರ್ಯವೂ ಉಂಟಾಯಿತು. ಆ ನವಾಬನೂ, ಈ ಸೈನಿಕರೂ ಎಂತಹರೇ ಆದರೂ ಪ್ರಸ್ತುತಕ್ಕೆ ತನಗೆ ಪ್ರಾಣ ಭೀತಿ ಇಲ್ಲವೆನಿಸಿತು, ತನ್ನ ತಲೆಯನ್ನೂ ಮೈಯನ್ನೂ, ಅಂಟಿ ಒಣಗಿ ಮರಗಟ್ಟಿದಂತಿದ್ದ ದುಸ್ತುಗಳನ್ನೂ ತೋರಿಸಿ ತಾನು ಸಮುದ್ರದಲ್ಲಿ ಮುಳುಗಿ ಬದುಕಿ ಬಂದವನೆಂಬುದನ್ನು ಒತ್ತೊತ್ತಿ ಹೇಳಿದನು. ಮುಂದಿನ ಪರಿಸ್ಥಿತಿಗಳಿಗೆ ತಕ್ಕ ಹಾಗೆ ಪ್ರವರ್ತಿಸಿಕೊಂಡು ಇರಬಹುದೆಂದು ನಂಬುಗೆಯುಂಟಾಯಿತು. ತನ್ನ ಪೂರ್ವ ಕಥೆಗಳೆಲ್ಲವನ್ನೂ, ತಾನು ಹಡಗಿನಲ್ಲಿ ಸೇರಿದ ಬಗೆಯನ್ನೂ ವಿವರಿಸಿ ಹೇಳಿದರೆ ಪಟಾಲಂ ನಾಯಕನಿಗೆ ನಂಬುಗೆ ಬಾರದಿರದು ಅಂದುಕೊಂಡನು. ಈಗಲೇ ಹೇಳಲು ಹಸಿವೆಯ ಸಂಕಟ ನಿಃಶಕ್ತತೆ.

ಸೈಗೆಯಿಂದಲೇ ಸ್ವಲ್ಪ ನೀರು ಕೇಳಿ ಕುಡಿದು ಪಿಂಗಳನು ತನ್ನ ಸಮಾಚಾರವನ್ನು ಮತ್ತಿಷ್ಟು ಹೇಳಿದನು. ತನ್ನ ಅಣ್ಣಂದಿರ ತಂತ್ರದಿಂದ ತಾನು ಹಡಗಿಗೆ ಸೇರಿದುದನ್ನೂ, ಆ ಸರಂಗನ ಕ್ರೌರ್ಯವನ್ನೂ, ಅವನ ಹಡಗಿಗೂ ಮತ್ತೊಂದು ಹಡಗಿಗೂ ತಾಕಲಾಟವಾದುದನ್ನೂ ವಿವರಿಸಿ ಹೇಳಿದನು. ಆಗ ಪಟಾಲಂ ನಾಯಕನು ತೃಪ್ತಿಯಿಂದ ಒಂದು ನಗುವನ್ನು ತೋರಿಸಿ, "ಹಾಗಾದರೆ ನಿನ್ನ ಹಡಗನ್ನು ಅಟಕಾಯಿಸಿದ ಹಡಗಿನಲ್ಲಿ ಕೂಡಾ ಗುಲಾಮರು ಇದ್ದರೆಂದಾಯಿತು. ಅಲ್ಲವೇ?" ಎಂದನು.

"ಹೌದು. ಅದರಲ್ಲಿ ಸಂದೇಹವೇನಿಲ್ಲ. ಆ ಹಡಗಿನ ಸರಂಗನೊಂದಿಗೆ ನಾನು ರಾಜಿಯ ರಾಯಭಾರ ಮಾತಾಡುತ್ತಿದ್ದಾಗಲೇ ಅವನು ಹೇಳಿದ ಮಾತಿನಿಂದ ಅದು ನನಗೆ ಗೊತ್ತಾಯಿತು. ಅವನು ಕೂಡಾ ಗುಲಾಮರನ್ನು ಮಾರುವ ವ್ಯಾಪಾರಿಯೇ ಎಂದು." ಎಂದನು ಪಿಂಗಳ.

ಪಟಾಲಂ ನಾಯಕನು ಅದು ನಿಜವೆಂಬಂತೆ ತಲೆಯಾಡಿಸಿ, "ನನ್ನ ಹೆಸರು ಹಸನ್‌ಗೋರಿ. ನನ್ನ ಹಾಗೆ ನೀನು ಕೂಡಾ ಯುದ್ಧದಲ್ಲಿ ಅನೇಕಮಂದಿಗೆ ನಾಯಕತ್ವ ವಹಿಸಿದವನಾದುದರಿಂದ ನೀನೂ ನನಗೆ

ಸಮಾನನೆಂದೇ ಆಯಿತು. ಆದುದರಿಂದ ನೀನು, ನನ್ನನ್ನು ಈ ಹೆಸರು ಹೇಳಿಯೇ ಕರೆಯಬಹುದು, ನಾವು ಹೆಗ್ಗಡೇಗೆ ಎಂದು ಹೇಳಲ್ಪಡುವ ಒಬ್ಬಾನೊಬ್ಬ ಮರಳು ಗಾಡಿನ ಕಳ್ಳನನ್ನು ಹತಮಾಡಲು ಈ ಮರಳು ಗಾಡಿನ ಹೆದ್ದಾರಿಯಲ್ಲಿ ಗಸ್ತಿ ತಿರುಗುವವರು. ಅಲ್ಲಿ ಹೀಗೆ ಕೈಕಾಲು ಕಟ್ಟಲ್ಪಟ್ಟು ಸತ್ತವನು ನವಾಬರ ಸೈನ್ಯದೊಳಗಿನವವನೇ. ಇವನು ಮರುಭೂಮಿಯಲ್ಲಿರುವ ಇಫೀಖಿಲ್ಲಾವನ್ನು ರಕ್ಷಿಸಿಕೊಂಡಿದ್ದವರಲ್ಲಿ ಒಬ್ಬನು. ಇವನನ್ನು ಹೆಗ್ಗಢೇಗೆ ಹೇಗೆ ಹಿಡಿದನೋ ಗೊತ್ತಾಗುವುದಿಲ್ಲ. ನನ್ನ ಭಯವೇನೆಂದರೆ, ಹೇಗೋ ದುರದೃಷ್ಟದಿಂದಾಗಿ ಇಫೀಖಿಲ್ಲಾ ಕೂಡಾ ಹೆಗ್ಗಡೇಗೆಯ ವಶವಾಗಿ ಹೋಯಿತೋ ಅಂತ!" ಎಂದು ಅವನು ಸೈನಿಕರ ಕಡೆಗೆ ತಿರುಗಿ, "ಈ ಕ್ಷಣದಿಂದ ಇವನು ಕೂಡಾ ನಮ್ಮ ಪಟಾಲಂನ ಒಬ್ಬನೆಂದು ತಿಳಿಯಿರಿ. ಪಾಪ, ಇವನೀಗ ತುಂಬಾ ಹಸಿವೆಯಲ್ಲಿದ್ದಾನೆ. ಮೊದಲು ಆಹಾರ ಪಾನಿಯಗಳನ್ನು ಅಣಿಗೊಳಿಸಿರಿ. ಇವನು ಸುದಾರಿಸಿಕೊಳ್ಳುವಂತೆ ನೋಡಿರಿ. ಗೌರವದಿಂದ ವರ್ತಿಸಿರಿ. ಆ ಮೇಲೆ ಉಳಿದ ಸಂಗತಿ" ಎಂದನು.

ಹಸನ್ ಗೋರಿಯು ಆ ಮಾತನ್ನು ಕೇಳಿದ ಕೂಡಲೇ ಪಿಂಗಳನ ಪ್ರಾಣಕ್ಕೆ ಅಮೃತ ಸುರಿದಂತಾಯಿತು. ಸೈನಿಕರು ಕೊಟ್ಟ ರೊಟ್ಟಿಗಳನ್ನು ತಿಂದು ತಣ್ಣಗಿನ ನೀರನ್ನು ಇಷ್ಟು ಕುಡಿದು ತೃಪ್ತಿಯಾಗಿ ತೇಗಿ. ಉತ್ಸಾಹದಿಂದ ಎದ್ದು ನಿಂತನು ಪಿಂಗಳ.

ಆಗ ಹಸನ್‌ಗೋರೀ ಒಂದು ಒಂಟೆಯನ್ನು ಅವನಿಗೆ ತೋರಿಸಿ, "ಇನ್ನು ಮೇಲೆ ಈ ಒಂಟೆ ನಿನ್ನದೇ ವಾಹನ. ಇಫೀಖಿಲ್ಲಾ ಕೋಟೆಯನ್ನು ಹೆಗ್ಗಡೇಗೆ ಆಕ್ರಮಿಸಿದ್ದಾನೋ ಎಂದು ನನಗೆ ಅನುಮಾನವಾಗಿದೆ" ಎಂದು ಹೇಳಿ, ಒಬ್ಬ ಸೈನಿಕನನ್ನು ನೋಡಿ, "ಆ ಶವವನ್ನು ಒಂದು ಒಂಟೆಯ ಮೇಲೆ ಹಾಕಿರಿ. ಖಿಲ್ಲೆಯ ಹತ್ತಿರ ಸಮಾಧಿ ಮಾಡೋಣ. ರಣಹದ್ದುಗಳಿಗೆ ಆಹಾರವಾಗುವಂತೆ ಬಿಡುವುದು ಧರ್ಮವಲ್ಲ" ಎಂದು ಅಪ್ಪಣೆ ಮಾಡಿದನು.

ಸ್ವಲ್ಪಹೊತ್ತಿಗೆ ಆ ಒಂಟೆ ಪಟಾಲಂ ಅಲ್ಲಿಂದ ಕದಲಿತು. ಮರಳುಗಾಡಿನಲ್ಲಿ ಆಗಾಗ ಅಲ್ಲಲ್ಲಿ ಕೆರಳಿಕೊಳ್ಳುತ್ತಿದ್ದ ತುಂಡು ತಫಾನು ಗಾಳಿಯ ನಡುವೆ ಪ್ರಯಾಣಿಸುತ್ತ, ಸೂರ್ಯನು ಪಶ್ಚಿಮ ದಿಕ್ಕಿಗೆ ಇಳಿಯುತ್ತಿರಲು ಪಟಾಲಂ ಇಫೀಖಿಲ್ಲಾದ ಸಮೀಪವನ್ನು ಸೇರಿತು. ಅದು ದೂರದಲ್ಲಿ ಮಸಕಾಗಿ ಕಾಣುತ್ತಿದ್ದಿತು. ಅಲ್ಲಿಯ ಪರಿಸರವೆಲ್ಲಾ ನಿರ್ಮಾನುಷ್ಯವಾಗಿ ಭಣ ಭಣಿಸಿಕೊಂಡಿತ್ತು.

ಹಸನ್‌ಗೋರಿ ಪಿಂಗಳನನ್ನು ಆಶ್ಚರ್ಯದಿಂದ ನೋಡುತ್ತ, ಹುಬ್ಬುಗಂಟು ಹಾಕಿಕೊಂಡು ಖಿಲ್ಲಾದ ಕಡೆಗೆ ಕೈ ತೋರಿಸಿದನು. —(ಇನ್ನೂ ಇದೆ)






## ೧೫

[ಹಡಗು ಒಡೆದು ಮುಳುಗಲು ಪಿಂಗಳನು ಸಿಕ್ಕಿದ ಹಲಗೆ ತುಂಡಿನ ಆಧಾರದಲ್ಲಿ ಈಜುತ್ತಾ ಹೋಗಿ ಯಾವುದೋ ಮರು ಭೂಮಿಯ ತೀರವನ್ನು ಸೇರಿಕೊಂಡನು. ಅಲ್ಲಿ ನವಾಬನ ಸೇನಾನಾಯಕನಾದ ಹಸನ್‌ಗೋರೀ ಎಂಬವ ನೊಂದಿಗೆ ಪರಿಚಯವಾಯಿತು. ಪಿಂಗಳನೂ ಹಸನ್‌ಗೋರಿಯೂ, ಅನುಚರರೂ "ಮರು ಭೂಮಿಯ ಕಳ್ಳರನ್ನು ಹಿಡಿಯಲು, 'ಇಫಿಖಿಲ್ಲಾ' ಎಂಬ ಕೋಟೆಯ ಕಡೆಗೆ ಹೊರಟರು.]

**ನ**ವಾಬನ ಒಂಟೆಗಳ ಪಟಾಲಂ ನಾಯಕನಾದ ಹಸನ್‌ಗೋರೀ ಕೈತೋರಿಸಿದ ಕಡೆಗೆ ಪಿಂಗಳನು ದೃಷ್ಟಿ ಹರಿಸಿ ನೋಡಿದನು. ಕಣ್ಣು ಹೊಸಗಿ ಕೊಂಡು ನೋಡಿದ ಮೇಲೆ ಭಣಭಣಿಸುವ ಆ ಮರುಭೂಮಿಯ ಯಾವುದೋ ಕೊನೆಯಲ್ಲಿ ಏನೋ ಗುಡ್ಡದ ಹಾಗೆ ಕಂಡಿತು. ಇನ್ನೂ ಪರೀಕ್ಷಿಸಿ ನೋಡಿದಾಗ ಅದೊಂದು ಪುರಾತನ ಕೋಟೆಯಾಗಿರುವುದೆಂದು ಅರ್ಥವಾಯಿತು. ಕೋಟೆಯ ಬದಿಯಿಂದ ಚಿಕ್ಕದೊಂದು ಬೆಟ್ಟದ ತೊರೆ ಹರಿಯುತ್ತಿರುವುದೂ ಕಾಣುತ್ತಿತ್ತು. ಮರುಭೂಮಿಯಲ್ಲಿ ನೀರಿರುವ ಸ್ಥಳವದು. ಮುಂದೆ ಹೋಗುತ್ತಿದ್ದ ಹಾಗೆ ಆ ತೊರೆಯ ಎರಡು ತೀರಗಳಲ್ಲಿ ಎತ್ತರವಾದ ಖರ್ಜೂರದ ಮರಗಳು ಗಾಳಿಗೆ ತಲೆಯಾಡಿಸುತ್ತಾ ಇದ್ದುವು. ಆದರೆ ಅಲ್ಲೆಲ್ಲಿಯೂ ಮನುಷ್ಯರಿರುವುದು ಕಾಣಲಿಲ್ಲ. ಕೋಟೆಯ ಬುರುಜುಗಳ ಮೇಲಾಗಲೀ, ಗೋಡೆಗಳ ಮೇಲಾಗಲೀ, ಬಾಗಿಲಿನ ಭಾಗದಲ್ಲಾಗಲೀ ಒಬ್ಬ ನರ ಮನುಷ್ಯನೂ ಕಾಣಲಿಲ್ಲ. ಅದನ್ನು ನೋಡಿ ಬೆರಗಾಗುತ್ತಿದ್ದ ಪಿಂಗಳನು, "ನೀವು ಹೇಳಿದ ಇಫಿಖಿಲ್ಲಾ ಎಂಬ ಕೋಟೆ ಅದೇ




ಏನು?" ಎಂದು ಹಸನ್‌ಗೋರಿಯನ್ನು ಕೇಳಿದನು.

"ಹೌದು, ಹೌದು. ಅದೇ ಅದು. ಅಕೋ ನೋಡು ಪಿಂಗಳಾ. ದೂರದಲ್ಲಿ ಗುಡ್ಡಗಳು ಕಾಣುತ್ತವಷ್ಟೆ? ಆ ಗುಡ್ಡದ ಕಡೆಗೆ ಹೋಗುವ ರಾಜಮಾರ್ಗವು ನಿನ್ನ ಕಣ್ಣಿಗೆ ಕಾಣಿಸುತ್ತದೆಯೆ? ಅದೇ ವರ್ತಕ ವೃತ್ತಿಯವರು ಟೆಹರಾನ್‌ನಿಂದ ಕೈರೋಗೆ ಹೋಗುವ ರಾಜಮಾರ್ಗ. ದಾರಿಯಲ್ಲಿರುವ ಈ ಕೋಟೆಯ ಪ್ರಾಂತವೇ ನೀರಿರುವ ಮಜಿಲೀ ಪ್ರದೇಶ. ಪ್ರಯಾಣಿಕರ ಆಯಾಸ ಪರಿಹಾರಕ್ಕೆ ಅದು ತಕ್ಕ ಜಾಗ. ಅಂಥವರಿಗೆ ನಡು ದಾರಿಯಲ್ಲಿ ಮರುಭೂಮಿಯ ಕಳ್ಳರಿಂದ ಅಪಾಯ ಬಾರದ ಹಾಗೆ ರಕ್ಷಿಸಲು ಇಫಿಖಿಲ್ಲಾ ಕೋಟೆ ಕಟ್ಟಲ್ಪಟ್ಟಿದೆ. ಇದನ್ನು ಕಾಪಾಡಿಕೊಂಡಿರಲು ಇನ್ನೂರು ಮಂದಿ ಸೈನಿಕರು ನಿಯೋಜಿಸಲ್ಪಟ್ಟಿದ್ದಾರೆ. ಅವರ ಸುಳಿವೇ ಕಾಣುವುದಿಲ್ಲವೇಕೋ? ಏನಾಗಿ ಹೋದರೋ? ಎಲ್ಲಿಯೂ ಯಾವ ಶಬ್ದವೂ ಇಲ್ಲದೆ ನಿರ್ಮಾನುಷ್ಯವಾಗಿದೆಯೆಂದರೆ ಆಶ್ಚರ್ಯವೇ ಸರಿ!" ಎಂದನು ಹಸನ್‌ಗೋರಿ.

"ಯಾವುದಕ್ಕೂ ನಾವು ಖಿಲ್ಲಾದ ಒಳಗೆ ಹೋದರೆ ಹೊರತು ಗೊತ್ತಾಗಲಾರದು. ನಿಮಗೆ ಈ ಮೊದಲೇ ಬಂದ ಅನುಮಾನದ ಹಾಗೆ ಮರುಭೂಮಿಯ ಚೋರ ಹೆಗ್ಗಡೇಗೆ. ತನ್ನ ಕಡೆಯವರೊಂದಿಗೆ ಖಿಲ್ಲಾದ ಮೇಲೆ ಮೋಸದ ಧಾಳಿಮಾಡಿ ಅಲ್ಲಿದ್ದ ಸೈನಿಕರನ್ನು ಹತಮಾಡಿದನೋ ಏನೋ?" ಎಂದನು ಪಿಂಗಳ.

"ಹಾಗೇ ನಡೆದಿರಬಹುದು. ಆದರೆ ಆ ಹೆಗ್ಗಡೇಗೆಯ ಕಡೆಯ ಒಬ್ಬನೂ ಕಾಣುವುದಿಲ್ಲವೇಕೆ? ಅದೇ ಆಶ್ಚರ್ಯವಾಗಿದೆ" ಎಂದನು ಹಸನ್‌ಗೋರೀ.

ಪಿಂಗಳನು ತನ್ನ ಒಂಟೆಯನ್ನು ಬೇಗ ಬೇಗನೆ ಮುಂದೆ ನಡೆಸುತ್ತ, "ಗೋರಿ ಸಾಹೇಬ್! ನಾವು ಹೊರಗೇ ನಿಂತುಕೊಂಡು ಅಲ್ಲಿ ಏನು ನಡೆದಿದೆ ಎಂಬುದನ್ನು ಊಹಾಪೋಹ ಮಾಡಿಕೊಂಡು ಯಾವ ಪ್ರಯೋಜನವೂ ಇಲ್ಲ. ಇದೆಲ್ಲಾ ವ್ಯರ್ಥವಾದ ಶ್ರಮ. ಕೋಟೆಯ ಬಾಗಿಲವರೆಗೆ ಹೋದ ಹೊರತು ಅಲ್ಲಿ ಎಷ್ಟು ದೊಡ್ಡ ಭೀಕರ ಸಂಗ್ರಾಮ ನಡೆಯಿತೋ ಗೊತ್ತಾಗಲಾರದು. ಬಹುಶಃ ಮರುಭೂಮಿಯ ಹೆಗ್ಗಡೇಗೆ ಕಳ್ಳರು ಯಾವ ಬಾಗಿಲನ್ನೋ ಸುಟ್ಟುಬೂದಿ ಮಾಡಿ ಒಳಗೆ ನುಗ್ಗಿ ಅಲ್ಲಿದ್ದ ಎಲ್ಲಾ ಸೈನಿಕರನ್ನೂ ಬಿಡದೆ ಕೊಂದಿರಬೇಕು." ಎಂದನು.

"ಯುದ್ಧ ನಡೆದರೆ ದೊಡ್ಡ ಯುದ್ಧವೇ ನಡೆದಿರುತ್ತದೆ. ನಮ್ಮ ಸೈನಿಕರು ಸಾಧಾರಣದ ಯುದ್ಧಕ್ಕೆ ಮಣಿದು ಹೋಗುವ ತರಗತಿಯವರಲ್ಲ. ಕಳ್ಳರ ಗುಂಪು ನೂರಾರು ಮಂದಿಯದಾಗಿದ್ದೀತು. ಎಂತಹ ಘೋರವೋ!" ಎಂದನು ಹಸನ್‌ಗೋರೀ. ಕ್ರಮಕ್ರಮವಾಗಿ ಪಿಂಗಳನೂ ಹಸನ್‌ಗೋರಿಯೂ

ಕುಳಿತಿದ್ದ ಒಂಟೆಗಳು ಕೋಟೆಗೋಡೆಯ ಬದಿಯಲ್ಲಿ ಸ್ವಲ್ಪದೂರ ನಡೆದುವು. ಒಳಗಿನಿಂದೇನಾದರೂ ಶಬ್ದ ಬರುವುದೋ ಎಂದು ಇಬ್ಬರೂ ಕಿವಿ ತೀಡಿಕೊಂಡೇ ಇದ್ದರು. ಇಬ್ಬರೂ ಮುಖದ್ವಾರದ ಹತ್ತಿರ ಬಂದರು.

ಮುಖದ್ವಾರವು ಮುಚ್ಚಿಕೊಂಡು ಭದ್ರವಾಗಿಯೇ ಇದ್ದಿತು. ಅದನ್ನು ಎಂದಿನಂತೆ ಒಳಗಿನಿಂದ ತಾಳ ಹಾಕಿಕೊಂಡ ಹಾಗೆ ಕಾಣುತ್ತಿತ್ತು. ಹಾಗಾದರೆ ಒಳಗೆ ಜನರಿರಲೇಬೇಕು. ಅವರು ಕಳ್ಳರ ಗುಂಪಿನವರೋ, ನವಾಬನ ಸೈನಿಕರೋ ಎಂಬುದೇ ಪ್ರಶ್ನೆ.

ಬಹಳ ಪ್ರಶಾಂತವಾಗಿ ಕಾಣುವ ಆ ದೃಶ್ಯವನ್ನು ನೋಡಿ, ಇದ್ದಕ್ಕಿದ್ದ ಹಾಗೆ ಹಸನ್‌ಗೋರೀ ಒಮ್ಮೆಗೇ ಗಟ್ಟಿಯಾಗಿ ನಗಲು ತೊಡಗಿದನು. ನಗುತ್ತಾ ಒಂಟೆಯ ಮೇಲಿನಿಂದ ಕೆಳಕ್ಕೆ ಧುಮುಕಿ, ಹೊಟ್ಟೆ ಹಿಡಿದು ಸ್ವಲ್ಪಹೊತ್ತು ನಕ್ಕು, ಆಶ್ಚರ್ಯದಿಂದ ತನ್ನನ್ನು ನೋಡುವ ಪಿಂಗಳನನ್ನು ನೋಡಿ, "ನಾವು ಸುಮ್ಮಸುಮ್ಮನೆ ಭಾರಿಯಾಗಿ ಹೆದರಿದೆವು. ಎಂತಹ ಸೊಕ್ಕು ಬಡಿದ ತಂತ್ರಗಾರನಾದರೂ ಆ ಹೆಗ್ಗಡೇಗೆ ನಾಯಕನು ನಮ್ಮ ವೀರ ಸೈನಿಕರಿಗೆ ಮುಖಾಮುಖೀ ನಿಂತು ಯುದ್ಧಮಾಡುವ ಸಾಹಸ ಮಾಡಲಿಕ್ಕೇ ಇಲ್ಲ. ಇಫಿಖಿಲ್ಲಾ ಇಷ್ಟು ನಿರ್ಮಾನುಷ್ಯವಾಗಿರುವುದಕ್ಕೆ ಕಾರಣ ಈಗ ನನಗೆ ಅರ್ಥವಾಯಿತು." ಎಂದನು ನಗುತ್ತಾ.

ಅವನ ಮಾತಿನಲ್ಲಿ ಪಿಂಗಳನಿಗೆ ಯಾವ ಅರ್ಥವೂ ಕಾಣಲಿಲ್ಲ. ಹಸನ್‌ಗೋರಿ ಪಿಂಗಳನ ತೀರ ಸಮೀಪಕ್ಕೆ ಬಂದು, ಮುಖವನ್ನು ಪಿಂಗಳನ ಹತ್ತಿರ ತಂದು ಮೆಲ್ಲನಿಯಿಂದ, "ನಮ್ಮ ಸೈನಿಕರೆಲ್ಲಾ ಕುತ್ತಿಗೆ ಗುಳಿಯವರೆಗೂ ಮಧುರವಾದ ಮದ್ಯ ಕುಡಿದು, ಆ ಮಯಕದಲ್ಲಿ ಮೈಮರೆತು ನಿದ್ದೆಮಾಡಿಕೊಂಡಿದ್ದಾರೆ. ಇದೇ ನಿಜ. ಬೇಕಾದರೆ



ಪಂಥ!" ಎಂದನು ವಿಜಯಶಾಲಿಯ ಠೀವಿಯಲ್ಲಿ. ಪಿಂಗಳನು ಅದನ್ನು ಒಪ್ಪದೆ ತಲೆಯನ್ನು ಆಡಿಸಿ, "ಹಾಗೆ ನೀವು ಖಂಡಿತವಾಗಿ ಹೇಳುವುದಾದರೆ ಆ ಮರುಭೂಮಿಯಲ್ಲಿ ಒಬ್ಬನೇ ಒಬ್ಬ ಸೈನಿಕನು ಮಾತ್ರ ಹೆಗ್ಗಡೇಗೆ ಕಳ್ಳರ ಕೈಗೆ ಹೇಗೆ ಸಿಕ್ಕಿಬಿದ್ದ? ಅವನು ಕೂಡಾ ಈ ಕೋಟೆಯ ರಕ್ಷಕರಲ್ಲೊಬ್ಬ ತಾನೆ?" ಎಂದು ಕೇಳಿದನು.

"ಅವನೊಬ್ಬ ಸೊಕ್ಕು ಹಿಡಿದು ಕೋಟೆಯೊಳಗಿನಿಂದ ಒಬ್ಬನೇ ಹೊರಗೆ ಸುತ್ತಲು ಹೋಗಿ ಎಲ್ಲೋ ಖರ್ಜೂರ ವೃಕ್ಷದ ಕೆಳಗೆ ಮಯಕದಲ್ಲಿ ಮಲಗಿರಬೇಕು, ಹೆಗ್ಗಡೇಗೆ ಅವನನ್ನು ಎತ್ತಿಕೊಂಡು ಅಲ್ಲಿ ಕೆಡವಿರಬೇಕು" ಎಂದನು ಹಸನ್‌ಗೋರೀ.

ಪಿಂಗಳನು ಏನೂ ಹೇಳದೆ ಸುಮ್ಮನೆ ನಿಂತನು. ಹಸನ್‌ಗೋರೀಗೆ ಮದ್ಯದ ನೆನಪು ಬಂದು ಹಾಗೆಲ್ಲಾ ಗಳಹುವನೇನೋ ಎಂದು ಅವನಿಗೆ ಅನುಮಾನವಾಯಿತು.




ಆಮೇಲೆ ಅವನು ಕೋಟೆಯ ದ್ವಾರದ ಕಡೆಗೆ ನಡೆಯುತ್ತ, "ಇರಬಹುದು. ನೀವು ಹೇಳುವ ಹಾಗೆ ನಡೆದರೆ ಒಳ್ಳೇದೇ ಆಯಿತು. ಅದರ ಬದಲಿಗೆ ಮತ್ತೇನೋ ಘೋರ ನಡೆದಿದ್ದರೂ ಇರಬಹುದು. ಯಾವುದಕ್ಕೂ ಮೊದಲು ಜಾಗರೂಕತೆಯಿಂದ ದ್ವಾರವನ್ನು ತೆರೆಯಿಸೋಣ. ಒಳಗಿನ ತಾಳ ತೆಗೆಯುವವರು ಯಾರೆಂದು ಕೂಡಲೇ ಗೊತ್ತಾಗಿಬಿಡುತ್ತದೆ." ಎಂದು ಬಾಗಿಲನ್ನು ಎರಡು ಕೈಗಳಿಂದಲೂ ಬಲವಾಗಿ ದೂಡಿದನು.

ತಾನು ಅಷ್ಟು ಬಲವನ್ನು ಉಪಯೋಗಿಸಿದ್ದು ವ್ಯರ್ಥವೇ ಎಂದು ಕೂಡಲೇ ಗೊತ್ತಾಯಿತು ಪಿಂಗಳನಿಗೆ. ಸುಮ್ಮನೆ ಮುಚ್ಚಿಕೊಂಡಿದ್ದ ಆ ಬಾಗಿಲುಗಳು ಕಿರ್ರನೆ ಶಬ್ದಮಾಡುತ್ತಾ ಹಿಂದಕ್ಕೆ ಜರುಗಿದುವು. ಒಂದು ಕೈ ಒಳಗೆ ತೂರುವಷ್ಟೇ ಜರುಗಿ ನಿಂತುಬಿಟ್ಟುವು. ಒಳಗೆ ಬಾಗಿಲ ಬದಿಯಲ್ಲೇ ಏನೋ ಚಿಟಿಚಿಟಿ ಶಬ್ದ ಹೊರಟಿತು. ಪಿಂಗಳನು ಕೆಟ್ಟದನಿಯಿಂದ "ಓಡಿರೋ ಓಡಿ!" ಎಂದು ಕೂಗಿ ಚಂಗನೆ ಹಿಂದಕ್ಕೆ ಹಾರಿ ಒಂದೇ ಸವನೆ ಓಡುವುದಕ್ಕೂ, ಆ ಕ್ಷಣದಲ್ಲಿ ಭೂಮ್ಯಾಕಾಶಗಳು ಒಡೆದ ಹಾಗೆ ಭಯಂಕರ ಶಬ್ದವಾಗುವುದಕ್ಕೂ ಸರಿ ಹೋಯಿತು. ಬಾಗಿಲ ಹಿಂದೆ ದಟ್ಟವಾಗಿ ಜಡಿದಿಟ್ಟಿದ್ದ ತುಪಾಕೀ ಮದ್ದಿನ ರಾಶಿ, ಸಿಡಿದು ಬಾಗಿಲನ್ನೂ, ಕೋಟೆಯ ಗೋಡೆಯ ಮುಂದಿನ ಭಾಗವನ್ನೂ ಉರುಳಿಸಿ ಎಂಟು ದಿಕ್ಕುಗಳಿಗೂ ಚೆದರಿಸಿತು.

ಆ ಧ್ವನಿಯನ್ನೂ, ಅದರೊಂದಿಗೆ ಹೊರಟ ಉರಿಯನ್ನೂ ಹೊಗೆಯನ್ನೂ ನೋಡಿ ಅಲ್ಲಿದ್ದವರೆಲ್ಲಾ ನಿಶ್ಚೇಷ್ಟಿತರಾದರು. ಕೋಟೆಯ ಬಾಗಿಲಿನ ತುಂಡುಗಳೂ, ಗೋಡೆಯ ಕಲ್ಲುಗಳೂ ತಗಲಿ ಅನೇಕರು ಬಿದ್ದು ಬಾಧೆಯಿಂದ ಹಾಹಾಕಾರ ಮಾಡುತ್ತ ಹೊರಳತೊಡಗಿದರು. ಗಾಯಗೊಂಡ ಒಂಟೆಗಳು ಕಿವಿ ತೂತಾಗುವಂತೆ ಅರಚುತ್ತಾ, ಸವಾರರನ್ನು ಬೀಳಿಸಿ ಸಿಕ್ಕಾಬಟ್ಟೆ ಓಡಿದುವು. ಕ್ಷಣಮಾತ್ರದಲ್ಲಿ ಮುತ್ತಿಕೊಂಡ ಕರಿಹೊಗೆಯಿಂದ ಯಾರಿಗೆ ಯಾರೂ ಕಾಣಲಿಲ್ಲ. ಹೊಗೆಯನ್ನೂ, ಬೆಂಕಿಯ ಕಿಡಿಗಳನ್ನೂ ಸುರುಳಿ ಸುರುಳಿಯಾಗಿ ಒಯ್ಯುವ ಗಾಳಿ ಬೇರೆ. ಜೋರಾಗಿ ಬೀಸುವ ಗಾಳಿಯಿಂದ ಹೊಗೆಯ ದಟ್ಟತೆ ಸಾಂದ್ರವಾಗಿ ಆಕಾಶದೊಂದಿಗೆ ಸೇರಿತು. ಮೊದಲೇ ದೂರ ಓಡಿದ ಪಿಂಗಳನು, ಅಲ್ಲಿ ನಡೆದ ಬೀಭತ್ಸವನ್ನು ನೋಡಿದನು. ಒಂಟೆಗಳ ಪಟಾಲಂನ ಕೆಲವರು ಸತ್ತುಹೋಗಿ ಬಿಟ್ಟಿದ್ದರು. ಕೆಲವರು ಸಾಯುವ ಹಾಗೆ ನರಳುತ್ತಿದ್ದರು. ಆ ಭಯಂಕರ ದೃಶ್ಯ ನೋಡಿ ನಡುಗುತ್ತಿರುವ ಪಿಂಗಳನು, ಬೇಗದಲ್ಲೇ ಪ್ರಜ್ಞೆ ತಂದುಕೊಂಡು ಹಸನ್‌ಗೋರೀ ಎಲ್ಲಿರುವನೆಂದು ಹುಡುಕತೊಡಗಿದನು. ಸಿಡಿತದ ವೇಗದಲ್ಲಿದ್ದ ಗಾಳಿ ಹಸನ್‌ಗೋರಿಯನ್ನು ಹಾರಿಸಿ ತುಸುದೂರದಲ್ಲಿದ್ದ ಖರ್ಜೂರದ ಮರದ ಹತ್ತಿರ



ಹಾಕಿತ್ತು. ಅಲ್ಲಿ ಬಿದ್ದ ಹಸನ್‌ಗೋರಿ ಮೈ ಕೈ ನಿಮಿರಿಕೊಂಡು ಮೆಲ್ಲನೆ ಏಳುತ್ತ ಸುತ್ತುಮುತ್ತಲೂ ನೋಡುತ್ತ, ಪಿಂಗಳನನ್ನು ನೋಡಿ ತಾನಿರುವ ಸ್ಥಳವನ್ನು ಸೂಚಿಸುವಂತೆ ಗಟ್ಟಿಯಾಗಿ ಕೂಗಿದನು.

ಏಳಲಾಗದೆ ಮುಗ್ಗರಿಸಿ ಬೀಳುವ ಹಸನ್‌ಗೋರಿಯ ಬಳಿಗೆ ಪಿಂಗಳನು ಓಡಿಬಂದು, ಆಸರೆಗೊಟ್ಟು ನಿಲ್ಲಿಸುತ್ತ, "ದೊಡ್ಡ ಗಾಯಗಳಾಗಿವೆಯೇ ?" ಎಂದು ಕೇಳಿದನು.

"ಅಂಥಾ ಗಾಯವೇನೂ ಆಗಿಲ್ಲಪ್ಪಾ ! ಮರಳಿನ ಮೇಲೆ ತಾನೇ ಬಿದ್ದೆ ? ಮದ್ದು ಸಿಡಿದಾಗ ಗಾಳಿಯ ಶಕ್ತಿ ಇಷ್ಟು ದೂರ ಹಾರಿಸಿಬಿಟ್ಟಿತು. ಛೇ ಛೇ ! ಈದಿನ ಬೆಳಿಗ್ಗೆ ಎದ್ದ ಸಮಯ ಚೆನ್ನಾಗಿತ್ತು ! ಜೀವ ಉಳಿದಿರುವುದೊಂದು ಅದೃಷ್ಟ !" ಎಂದನು ಹಸನ್‌ಗೋರೀ.

"ಅದಕ್ಕೆ ಸಂದೇಹವೇ ಇಲ್ಲ, ಹಸನ್‌ಗೋರೀ ಸಾಹೇಬರೇ ! ಕೋಟೆಯ ಬಾಗಿಲು ಹಗುರಾಗಿ ಹಿಂದೆ ಸರಿದಾಗಲೇ ಅಲ್ಲೇನೋ ಅಪಾಯವಿದೆಯೆಂದು ನಾನು ತಿಳಿದುಕೊಂಡೆ. ಅದಕ್ಕೇ ನಾನು ಗಟ್ಟಿಯಾಗಿ ದೂರ ಓಡಿರೋ ಎಂದು ಕೂಗಿ ಓಡಿದೆ. ಆದರೂ ದುರದೃಷ್ಟದಿಂದ ನಾನು ಕೂಗುವಾಗಲೇ ಕೆಲವರಿಗೆ ಪ್ರಾಣ ಹೋಗುವಂತಾಯಿತು. ಎಂದು ಹೇಳಿ ಪಿಂಗಳನು ಹಿಂದಿರುಗಿ ನೋಡಿ, "ಓಡಲಿಕ್ಕೇ ಸಮಯವಿಲ್ಲದಂತೆ, ಕಣ್ಣುಮುಚ್ಚಿ ಬಿಡಿಸುವುದರೊಳಗೆ ಸಿಡಿದುಬಿಟ್ಟಿತು ! ಅಬ್ಬಾ ! ಎಂಥಾ ಸರ್ವ ನಾಶವಾಯಿತು ! ಅನೇಕವಾಗಿ ಮುಕ್ಕಾಲು ಭಾಗದಷ್ಟು ಸೈನಿಕರು ಅನ್ಯಾಯವಾಗಿ ಸತ್ತಿರಬೇಕು !" ಎಂದನು.

ಹಸನ್‌ಗೋರಿ ಸುಧಾರಿಸಿಕೊಂಡು ಎದ್ದು ನಿಂತು, ದುಸ್ತುಗಳಿಗೆ ಹಿಡಿದ ಧೂಳು ಮರಳುಗಳನ್ನು ಕೊಡರಿಕೊಳ್ಳುತ್ತ, "ಇದು ಆ ಹೆಗ್ಗಡೇಗೆ ಕಳ್ಳ ನಮ್ಮನ್ನೆಲ್ಲಾ ಹತಮಾಡಲಿಕ್ಕೆ ಹೂಡಿದ ದುಸ್ತಂತ್ರ. ಕೋಟೆಯೊಳಗಿದ್ದ ಸೈನಿಕರೆಲ್ಲರನ್ನೂ ನಾಶಮಾಡಿದ ಮೇಲೆ ನಮ್ಮನ್ನು ಸಾಯಿಸಲು ಈ ಕಪಟೋಪಾಯವನ್ನು ಮಾಡಿದ್ದಾನೆ. ಇನ್ನೀಗ ನಾವು ಮಾಡಬೇಕಾದುದು, ಬದುಕಿ ಉಳಿದ ಸೈನಿಕರೊಂದಿಗೆ ಆ ಕ್ರೂರಕರ್ಮಿಯನ್ನು ಹುಡುಕಿ ಬೇಟೆಯಾಡಿ ಹಿಡಿದು ಚಿತ್ರಹಿಂಸೆಗೆ ಗುರಿಪಡಿಸಿ ಕೊಲ್ಲಬೇಕು. ಅಷ್ಟು ಮಾಡದೆ ನವಾಬರ ಮುಖ ನೋಡಲಾಗದು" ಎಂದನು ಉದ್ರೇಕದಿಂದ.

ಪಿಂಗಳನೂ ಹಸನ್‌ಗೋರಿಯೂ ಕೂಡಿ ತಿರುಗಾಡಿ ಗಾಯಗೊಂಡು ಬಿದ್ದ ಸೈನಿಕರನ್ನೆಲ್ಲಾ ಕೋಟೆಯ ಗೋಡೆಯ ನೆರಳಿಗೆ ಎತ್ತಿ ಎತ್ತಿ ತಂದು ಇರಿಸಿದರು. ಅವರ ಗಾಯಗಳಿಗೆ ಕಟ್ಟುಹಾಕಿ ಬೇರೆ ಕಡೆಗೆ ನಡೆಸಲು ಕೆಲವರನ್ನು ನಿಯೋಗಿಸಿದರು. ಉಳಿದವರೊಂದಿಗೆ ಅವರಿಬ್ಬರೂ ಇಷಿಖಿಲ್ಲಾ ಕೋಟೆಯ ಒಳಗೆ ಪ್ರವೇಶ ಮಾಡಿದರು. ಆ ಖಿಲ್ಲೆಯ ಒಳ ಪ್ರದೇಶದಲ್ಲಿ ಅವರಿಗೆ



ಇದಿರಾದ ದೃಶ್ಯ ಅವರಿಬ್ಬರನ್ನೂ ಸ್ಥಾಣುವಿನಂತೆ ಬೆರಗುಪಡಿಸಿತು. ಅಲ್ಲಿದ್ದ ಪ್ರತಿಭವನವೂ, ಗುಡಾರಗಳೂ ಸುಟ್ಟು ಹಾಕಲ್ಪಟ್ಟಿದ್ದುವು. ಕರಿಹಿಡಿದ ಮೊಂಡು ಗೋಡೆಗಳಷ್ಟೇ ಇದ್ದುವು. ಎಲ್ಲಿ ನೋಡಿದರೂ ಚೆಲ್ಲಾಚೆದರಾಗಿ ಬಿದ್ದಿದ್ದ ದುಸ್ತುಗಳು. ಆಯುಧಗಳ ಭಾಗಗಳು. ಅಡಿಗಡಿಗೂ ಸತ್ತುಬಿದ್ದ ಶವಗಳು! "ಪಿಂಗಳಾ! ಏನು ಘೋರ ದೃಶ್ಯ ಇದು! ಒಬ್ಬನೇ ಒಬ್ಬ ಸೈನಿಕನೂ ಬದುಕಿರುವ ಸೂಚನೆ ಇಲ್ಲ. ಇಲ್ಲಿ ನಿಜವಾಗಿ ಏನು ನಡೆಯಿತೆಂದು ಹೇಳುವವರೇ ಇಲ್ಲದಾಗಿದೆ. ಆ ಹೆಗ್ಗಡೇಗೆಯೇ ಮುದೆ ಬಂದು ಹೇಳಬೇಕು. ಮೋಸದ ವೀರನು ಇದಿರಿಗೇಕೆ ಬಂದಾನು? ಇಷ್ಟು ದೊಡ್ಡ ಸೈನ್ಯವನ್ನೇ ನಾಶಮಾಡಿದನೆಂದರೆ ಈ ಖಿಲ್ಲೆಯೊಳಗೆ ಅವನಿಗೆ ಯಾರೋ ಮಿತ್ರನೊಬ್ಬ ಇದ್ದಿರಬೇಕು. ಮಹಾ ದ್ರೋಹಿ!" ಎಂದನು ಹಸನ್‌ಗೋರೀ. "ಇದ್ದರೂ ಇರಬಹುದು" ಎಂದು ಪಿಂಗಳನು ಸುತ್ತಲೂ ಒಂದುಸಾರಿ ಪರೀಕ್ಷಿಸಿ ನೋಡಿ, "ಇನ್ನು ನಾವು ಇಲ್ಲಿ ಸುಮ್ಮನೆ ತಡಮಾಡುವುದೇಕೆ? ಆ ಹೆಗ್ಗಡೇಗೆಯನ್ನು ಹುಡುಕಿ ಬೆಂಬತ್ತೋಣವೆ? ಅವನು ಈ ವಿಸ್ತಾರವಾದ ಬೆಂಗಾಡಿನಲ್ಲಿ ಯಾವ ದಿಕ್ಕಿಗೆ ಹೋದನೆಂಬುದನ್ನು ಹೇಗೆ ತಿಳಿಯಲು ಸಾಧ್ಯ?" ಎಂದು ಕೇಳಿದನು.

"ಅದಕ್ಕೇನೂ ಕಷ್ಟವಿಲ್ಲ" ಎಂದು ಹಸನ್ ಗೋರೀ ಖಿಲ್ಲೆಯೊಳಗಿನಿಂದ ಹೊರಗೆ ಹೋದನು. ಆಮೇಲೆ ಅವನ ಆಜ್ಞೆಯಂತೆ ಐದಾರು ಮಂದಿ ಸೈನಿಕರು ಮರುಭೂಮಿಯ ಎಲ್ಲಾ ದಿಕ್ಕುಗಳಿಗೂ ಸ್ವಲ್ಪ ದೂರ ಹೋಗಿ, ಸ್ವಲ್ಪ ಹೊತ್ತಿಗೆ ಹಿಂದಿರುಗಿ ಬಂದರು.

ಮರಳಿನಲ್ಲಿ ಮೂಡಿದ ಒಂಟೆಗಳ ಹಜ್ಜೆಯ ಗುರುತುಗಳ ಮೂಲಕ ಹೆಗ್ಗಡೇಗೆ ಕಳ್ಳನ ಗುಂಪು ಯಾವ ಕಡೆಗೆ ಹೋಗಿದೆ ಎಂಬುದನ್ನು ಅವರು ತಮ್ಮ ನಾಯಕನಿಗೆ ತಿಳಿಸಿದರು.

ಹಸನ್ ಗೋರೀ ಪಿಂಗಳನಿಗೆ ಎರಡು ಮೂರು ಹರದಾರಿಗಳಷ್ಟು ದೂರದ ಗುಡ್ಡಗಳನ್ನು ತೋರಿಸುತ್ತ "ಹೆಗ್ಗಡೇಗೆ ನೇರಾಗಿ ಆ ಬೆಟ್ಟಗಳಲ್ಲಿರುವ ಗುಹೆಗಳ ಕಡೆಗೇ ಹೋಗಿದ್ದಾನೆ. ಅಂತಹ ಸ್ಥಳಗಳಲ್ಲಿಯೇ ಅವನು ಅಡಗಿರುವುದೆಂದು ಕೇಳಿದ್ದೇನೆ. ತಾನು ಇಲ್ಲಿ ಸಾಧಿಸಿದ ವಿಜಯಕ್ಕೆ ಸಂಭ್ರಮಿಸಿ, ಈಗ ಅವನು ತನ್ನ ಕಾಲವನ್ನು ಸಂತೋಷದ ಕುಣಿತದಲ್ಲಿ ಕಳೆಯುತ್ತಿದ್ದಾನು. ಆ ಖಿಲ್ಲೆಯ ಬಾಗಿಲಿನ ಹತ್ತಿರ ಇಟ್ಟು ಹೋದ ಸಿಡಿಮದ್ದುಗಳಿಗೆ ನಾವೆಲ್ಲಾ ಆಹುತಿಯಾಗಿ ಸತ್ತಿದ್ದೇವೆಂದೇ ಅವನ ನಂಬುಗೆ. ನಿಜಕ್ಕೂ ಕ್ಷಣ ತಡೆದಿದ್ದರೆ ನಾವೆಲ್ಲಾ ಆಹುತಿಯಾಗುತ್ತಿದ್ದೆವಷ್ಟೆ?" ಎಂದನು.

ಹೌದೆಂದು ಪಿಂಗಳನು ಒಪ್ಪಿಕೊಂಡನು,

ಅಂತೂ ಹಸನ್ ಗೋರೀ ಅಳಿದುಳಿದ ಸೈನಿಕರನ್ನು ಕರೆದುಕೊಂಡು, ಪಿಂಗಳನೊಂದಿಗೆ ಆ ಬೆಟ್ಟ



ಗಳ ಕಡೆಗೆ ಪ್ರಯಾಣ ಮಾಡಲು ತೊಡಗಿದನು. ಸುಮಾರು ಒಂದು ಗಂಟೆ ಹೊತ್ತು ಕಳೆದ ಮೇಲೆ ಯಾವುದೋ ಒಂದು ಕಣಿವೆಯ ಹತ್ತಿರ ಬಂದರು. ಪಿಂಗಳನು ಅಲ್ಲಿಯ ಬೆಟ್ಟದ ಎರಡು ಬದಿಗಳಲ್ಲಿಯೂ ನೆಟ್ಟಗೆ ನಿಂತ ಬಂಡೆಗಲ್ಲುಗಳನ್ನು ನೋಡುತ್ತ, "ಹಸನ್ ಗೋರೀ ಸಾಹೇಬರೆ! ನಾವು ಇಲ್ಲಿ ಎರಡು ಭಾಗವಾಗಿ ಸೀಳಿಕೊಳ್ಳುವುದು ಒಳ್ಳೆಯದೆಂದು ತೋರುತ್ತದೆ. ನಮ್ಮ ವಾಹನಗಳನ್ನು ಇಲ್ಲಿಯೇ ಬಿಟ್ಟು ಬಿಡೋಣ. ಅಲ್ಲಲ್ಲಿ ಕಲ್ಲಿನ ರಾಶಿಗಳು ತುಂಬಾ ಇವೆ. ಯಾವ ರಾಶಿಯ ಹಿಂದೆ, ಯಾವ ಗುಹೆಯಲ್ಲಿ ಯಾರಿದ್ದಾರೆಂದು ಹುಡುಕಲಿಕ್ಕೆ ಹಾಗೆ ಮಾಡುವುದೇ ಒಳ್ಳೆಯದು. ಬೇಕಾದಾಗ ಸಂಕೇತದ ಕೊಂಬನ್ನು ಊದಿ ಒಂದಾಗಿ ಸೇರಿ ಅವರನ್ನೆಲ್ಲ ಹತಮಾಡಿ ಹಾಕೋಣ. ಆಗದೆ?" ಎಂದನು.

ಆ ಉಪಾಯಕ್ಕೆ ಹಸನ್ ಗೋರೀ ಅಂಗೀಕರಿಸಿದನು. ಪಿಂಗಳನು ಕೆಲವು ಮಂದಿ ಸೈನಿಕರನ್ನು ತನ್ನೊಂದಿಗೆ ಕರೆದುಕೊಂಡು ಗುಡ್ಡದಕಲ್ಲುಗಳನ್ನು ಏರುತ್ತ ಇಳಿಯುತ್ತ ಹೆಗ್ಗಡೇಗೆಯನ್ನು ಹುಡುಕ ತೊಡಗಿದನು. ಹಸನ್ ಗೋರೀ ಕೆಲವರೊಂದಿಗೆ ಇನ್ನೊಂದು ಕಡೆಗಾಗಿ ಹೋದನು.

ಹಾಗೆ ಹೋಗುವಾಗ ಪಿಂಗಳನಿಗೆ ಹಠಾತ್ತಾಗಿ ತಾನಿರುವ ಸ್ಥಳದ ಕೆಳಭಾಗದಲ್ಲಿ ಏನೋ ಶಬ್ದ ಕೇಳಿಸಿತು. ಅದೊಂದು ಕೋಲಾಹಲ ಶಬ್ದದಂತಿತ್ತು. ಪಿಂಗಳನು ತನ್ನ ಸೈನಿಕರಿಗೆ ಸನ್ನೆ ಮಾಡಿ, ಎತ್ತರವಾದ ಬಂಡೆಯನ್ನೇರಿ ಕೆಳಗೆ ನೋಡಿದನು.

ಸಮತಲವಾಗಿದ್ದ ಒಂದು ಪ್ರದೇಶದಲ್ಲಿ ಅನೇಕ ಮಂದಿ ಗುಂಪಾಗಿ ಸೇರಿ ಏನೇನೋ ಹಾಡುತ್ತ ನಾಟ್ಯವಾಡುತ್ತಿದ್ದರು. ಅವರು ಧರಿಸಿದ ದುಸ್ತುಗಳೂ ಕೇಕೇ ಹಾಕಿ ಕೂಗುವ ಮಾತಿನ ಅರ್ಥಗಳೂ ಅವರು ಆ ಹೆಗ್ಗಡೇಗೆ ಕಳ್ಳನ ಗುಂಪಿನವರೇ ಎಂದು ಪಿಂಗಳನಿಗೆ ಅರ್ಥವಾಯಿತು. ಕೂಡಲೇ ಅವರು ಈ ಮೊದಲೇ ಮಾಡಿಕೊಂಡ ಗುರುತಿನಂತೆ ಪಿಂಗಳನು ಸಂಕೇತದ ಕೊಂಬನ್ನು ಊದಿದನು.

ಆ ಧ್ವನಿ ಕೆಳಗೆ ನಲಿದಾಡುವವರಿಗೂ ಕೇಳಿತೆಂದು ಕಾಣುತ್ತದೆ. ಅಲ್ಲಿಯ ನಾಟ್ಯ ಹಾಡು ಕೋಲಾಹಲಗಳೆಲ್ಲ ಒಮ್ಮೆಗೇ ನಿಂತು ಹೋದುವು. ಅದನ್ನು ನೋಡಿ ಪಿಂಗಳನಿಗೆ ಸ್ವಲ್ಪಗಾಬರಿಯೂ ಆಯಿತು. ಇನ್ನು ತಡಮಾಡಿ ಪ್ರಯೋಜನವಿಲ್ಲವೆಂದು ಕೊಂಡು ಪಿಂಗಳನು ದೊಡ್ಡದೊಂದು ಬಂಡೆಗಲ್ಲನ್ನು ಕೆಳಗಿರುವ ಕಳ್ಳರ ಮೇಲೆ ಉರುಳಿಸುತ್ತ, ತನ್ನ ಸೈನಿಕರಿಗೆ ಕೂಡಾ ಕಲ್ಲುಗಳನ್ನು ಉರುಳಿಸಲು ಆಜ್ಞೆ ಮಾಡಿದನು.

ಪಿಂಗಳನು ಉರುಳಿಸಿದ ಕಲ್ಲು ನೆಲವನ್ನು ಮುಟ್ಟುವುದರೊಳಗೇ, ಸೊಯ್ಯ ಸೊಯ್ಯನೆ ಕೆಲವು ಬಾಣಗಳು ಬಂದು ಅವನಿರುವ ಸ್ಥಳದ ಕಲ್ಲುಗಳಿಗೆ ತಾಗಿದುವು. ಪಿಂಗಳನು ತಟ್ಟನೆ ಕಲ್ಲುಗಳ

ಮರೆಯಲ್ಲಿ ತಪ್ಪಿಸಿಕೊಂಡನು. ಅವನು ಬಾಗಿ ನೋಡಿದಾಗ ಕೆಲಮಂದಿ ಕಳ್ಳರು ಈಟಿಗಳನ್ನು ಎತ್ತಿಕೊಂಡು ಗಟ್ಟಿಯಾಗಿ ವೀರಗರ್ಜನೆ ಮಾಡುತ್ತ ಗುಡ್ಡವನ್ನೇರಿ ಬರುತ್ತಿದ್ದರು. ಆಗ ಮತ್ತೊಂದು ದಿಕ್ಕಿನಿಂದ ಕೆಲವು ಬಂಡೆ ಕಲ್ಲುಗಳು ಹೊರಳುತ್ತ ಅವರ ಮೇಲೆ ಬೀಳತೊಡಗಿ ಅವರನ್ನು ಬೆದರಿಸುತ್ತಿದ್ದುವು.

ತನ್ನ ಸಂಕೇತ ಧ್ವನಿ ಹಸನ್ ಗೋರೀಗೆ ತಿಳಿಯಿತೆಂದು ಗೊತ್ತಾಗಿ ಪಿಂಗಳನಿಗೆ ಬಹಳ ಸಂತೋಷವಾಯಿತು. ಕೂಡಲೇ ಅವನು ತನ್ನ ಎಲ್ಲಾ ಬಲವನ್ನೂ ಸೇರಿಸಿ ಕಳ್ಳರ ಮೇಲೆ ದೊಡ್ಡ ದೊಡ್ಡ ಬಂಡೆಗಳನ್ನು ಹೊರಳಿಸುತ್ತ ಕೆಳಗಿಳಿಯ ತೊಡಗಿದನು. ಹಸನ್ ಗೋರೀಯೊಂದಿಗಿದ್ದ ಸೈನಿಕರು ಜೋರು ಜೋರಾಗಿ ಸಿಂಹನಾದ ಮಾಡುತ್ತ ಬೆಟ್ಟ ಕಲ್ಲುಗಳ ಮೇಲೆ ಲಂಘಿಸಿಕೊಂಡು ಕಳ್ಳರ ಗುಂಪಿನ ಕಡೆಗೆ ಓಡುತ್ತಿದ್ದರು.

ಪಿಂಗಳನು ಸಹಾ ತನ್ನ ಸೈನಿಕರೊಂದಿಗೆ ಕಳ್ಳರು ಪ್ರಯೋಗಿಸುವ ಬಾಣಗಳನ್ನು ತಪ್ಪಿಸಿಕೊಳ್ಳುತ್ತ ಮುಂದೆ ಮುಂದೆ ಓಡುತ್ತಿದ್ದನು. ಎರಡು ಗುಂಪುಗಳೂ ಬೆಟ್ಟದ ಕೆಳಭಾಗದಲ್ಲಿರುವ ಸಮತಲ ಪ್ರದೇಶವನ್ನು ಸೇರುವಷ್ಟರಲ್ಲಿ ಎಲ್ಲೆಲ್ಲಿದ್ದ ಕಳ್ಳರು ಅಲ್ಲಲ್ಲೇ ಬೆದರಿ ಬೆದರಿ ಓಡಿದರು. ಆದರೆ ಹಿಂದೆ ಬಿದ್ದ ಕೆಲಮಂದಿ ಕಳ್ಳರನ್ನು ಹಸನ್ ಗೋರಿಯ ಸೈನಿಕರು ತಮ್ಮ ಕೈಯಲ್ಲಿದ್ದ ಈಟಿಗಳಿಂದ ತಿವಿದು ಸಾಯಿಸಿಬಿಟ್ಟರು.

"ಪಿಂಗಳಾ ! ಕತ್ತಲೆ ಕವಿಯುತ್ತಾ ಇದೆ. ಇಲ್ಲಿ ಇನ್ನು ಕಳ್ಳರ ಬೆನ್ನು ಹತ್ತಲು ಸಾಧ್ಯವಾಗದು. ಈ ರಾತ್ರಿ ಇಲ್ಲಿಯೇ ಎಲ್ಲಿಯಾದರೂ ಮಜಿಲೀ ಹಾಕಿ. ಬೆಳಗಾದ ಕೂಡಲೇ ಅವರ ಜಾಡು ತಿಳಿದು ಒರೆಸಿಹಾಕೋಣ. ಏನನ್ನುವಿ ?" ಎಂದನು ಹಸನ್ ಗೋರೀ.

ಪಿಂಗಳನಿಗೆ ಕೂಡಾ ಹಾಗೆ ಮಾಡುವುದೇ ಒಳ್ಳೆಯದೆನಿಸಿತು. ಅವನು ಅಲ್ಲಿ ಮೇಜಿಯ ಆಕಾರದಲ್ಲಿದ್ದ ಒಂದು ಅಗಲವಾದ ಬಂಡೆಯಲ್ಲಿ ಕುಳಿತುಕೊಳ್ಳಲು ನೋಡುವಾಗ, "ಯಾವ ಪಿಂಗಳನಿದ್ದಾನೆ ಇಲ್ಲಿ ? ಅವಂತೀ ನಗರದ ಜಾಲರಿ ಪಿಂಗಳನಲ್ಲವಷ್ಟೆ ?" ಎಂಬುದೊಂದು ಪ್ರಶ್ನೆ ಪಕ್ಕದಲ್ಲಿದ್ದೊಂದು ಬಂಡೆ ಗುಡ್ಡದಿಂದ ಕೇಳಿಸಿತು.

"ಯಾರದು ? ಪದ್ಮಪಾದರ ಧ್ವನಿಯಾಗಿದೆಯಲ್ಲಾ !" ಎನ್ನುತ್ತಾ ಪಿಂಗಳನು ಆ ಪ್ರಶ್ನೆ ಬಂದ ಕಡೆಗೆ ತಿರುಗಿದನು.

ಆಳೆತ್ತರದ ಒಂದು ಬಂಡೆಯಾಚೆಗಿಂದ ಮಾಂತ್ರಿಕ ಪದ್ಮಪಾದನು ನಗುತ್ತ ಮುಂದೆ ಬರುವುದು ಕಂಡಿತು.

(ಇನ್ನೂ ಇದೆ)






## ೧೬

[ಪಿಂಗಳನು ಹಸನ್‌ಗೋರಿಯೊಂದಿಗೆ ಕೂಡಿ, ಕೋಟೆಯ ಬಾಗಿಲನ್ನು ತೆರೆಯಲು ಹೋಗಲು, ಮರುಭೂಮಿಯ ಕಳ್ಳರು ಬಾಗಿಲ ಹಿಂದೆ ಸೇರಿಸಿಟ್ಟಿದ್ದ ಸಿಡಿಮದ್ದುಗಳು ಸಿಡಿದು ಕೆಲವು ಸೈನಿಕರು ಗಾಯಗೊಂಡರು. ತರುವಾಯ ಕಳ್ಳರ ನಾಯಕ ಹೆಗ್ಗಡೇಗೆ ಬೆಟ್ಟಗಳಲ್ಲಿರುವುದು ಕಂಡಿತು. ಅಲ್ಲಿ ಭಯಂಕರ ಯುದ್ಧ ನಡೆಯಿತು. ಅದೇ ಸಮಯದಲ್ಲಿ ಪಿಂಗಳನಿಗೆ ಆಕಸ್ಮಾತ್ತಾಗಿ ಪದ್ಮಪಾದನು ಅಲ್ಲಿ ಕಾಣಿಸಿದನು.]

ಮಹಾ ಮಾಂತ್ರಿಕನಾದ ಪದ್ಮಪಾದನನ್ನು ಇನ್ನು ಈ ಜನ್ಮದಲ್ಲಿ ನೋಡುವೆನೆಂದು ಪಿಂಗಳನು ಯೋಚಿಸಿರಲಿಲ್ಲ. ಒಂದು ವೇಳೆ ಇದು ಭ್ರಮೆಯಾಗಿರಬಹುದೇನೋ ಎಂದು ಕಣ್ಣುಗಳನ್ನು ತಿಕ್ಕಿ ತಿಕ್ಕಿ ಬಿಡಿಸಿದನು. ಕಿವಿಗಳನ್ನು ತೀಡಿ ತೀಡಿ ಗಮನಿಸಿದನು. ಹೌದು. ಅದು ಪದ್ಮಪಾದನದೇ ಆಕೃತಿ! ಅವನದೇ ಕಂಠಸ್ವರ! ಆಕಸ್ಮಾತ್ತಾಗಿ ಅವನು ಇಲ್ಲಿಗೆ ಹೇಗೆ ಬಂದನು? ಎಲ್ಲಿಯ ಅವಂತೀ ನಗರ! ಅದಕ್ಕೆ ಸಾವಿರಾರು ಮೈಲು ದೂರದಲ್ಲಿ ಎಲ್ಲಿಯ ಈ ಮರುಭೂಮಿ ಪ್ರದೇಶ! ಅದೂ ಈ ಮರುಭೂಮಿಯ ಕಳ್ಳರಿರುವ ಬೆಟ್ಟಗಳ ನಡುವೆ ಅವನ ದರ್ಶನ! "ಮಹಾ ಮಾಂತ್ರಿಕನಾದ ಪದ್ಮಪಾದನು ನನಗೆ ಬಂದ ಕಷ್ಟವನ್ನು ತನ್ನ ಮಂತ್ರಶಕ್ತಿಯಿಂದಲೇ ತಿಳಿದು ತನ್ನನ್ನು ಹುಡುಕಿ ಹಿಡಿದು ಕಾಪಾಡಲು ಬಂದಿರಬೇಕು. ಅವನಿಗೆ ನಿಜಕ್ಕೂ ನನ್ನ ಮೇಲೆ ಅಷ್ಟು ಅಭಿಮಾನವಿದೆ" ಎಂದುಕೊಂಡನು ಪಿಂಗಳ.

ಪಿಂಗಳನಿಗಾದ ಆಶ್ಚರ್ಯಕ್ಕೆ ಮೇರೆಯೇ ಇರಲಿಲ್ಲ. ಇದ್ದಕ್ಕಿದ್ದ ಹಾಗೆ ಅವನ ಆಶ್ಚರ್ಯವು ಅನುಮಾನಕ್ಕೆ ತಿರುಗಿತು. ಒಂದು ವೇಳೆ ಪದ್ಮಪಾದನೇ ಹೆಗ್ಗಡೇಗೆಯಾಗಿರಬಹುದೆ? ಅಂತಹ ಘೋರ ಕಾರ್ಯವನ್ನು



ಪದ್ಮಪಾದನು ಮಾಡುವನೆ? ಹಾಗೆ ನೆನೆಯುವುದೇ ಅಸಹನೀಯವೆನಿಸಿತು ಪಿಂಗಳನಿಗೆ. ಅವನು ತನ್ನ ಪಕ್ಕದಲ್ಲಿರುವ ಹಸನ್‌ಗೋರಿಯನ್ನು ನೋಡಿದನು.

ಹಸನ್‌ಗೋರಿಯ ಮುಖದಲ್ಲಿಯೂ ಅನುಮಾನ ಇರುವುದು ಸ್ಪಷ್ಟವಾಗಿ ಗೋಚರಿಸಿತು. ಅವನು ಪಿಂಗಳನ ತೋಳು ಹಿಡಿದು ತನ್ನ ಕಡೆಗೆ ಎಳೆದು, "ಏನು ಪಿಂಗಳಾ! ಯಾರು ಈ ಪದ್ಮಪಾದ? ಮರುಭೂಮಿಯ ಕಳ್ಳರ ನಾಯಕ ಹೆಗ್ಗಡೇಗೆ ಇವನೇನಾ? ಗೊತ್ತೇ ನಿನಗೆ ಇವನನ್ನು? ನಿನ್ನ ಆತಂಕ ನೋಡುವಾಗ ನಿನಗೆ ತುಂಬ ಪರಿಚಿತನಾದವನೇ ಈ ಕಳ್ಳರ ನಾಯಕನಾಗಿದ್ದು, ಅವನ ವಿಷಯ ಹೇಳಲು ಹಿಂಜರಿಯುವ ಹಾಗಿದೆ. ನಿಜ ತಾನೆ?" ಎಂದು ಪಿಸುದನಿಯಿಂದ ಕೇಳಿದನು.

ಪಿಂಗಳನು ಏನು ಹೇಳಬೇಕೆಂದು ಆಲೋಚನೆ ಮಾಡುತ್ತಿರಲು, ಪದ್ಮಪಾದನು ಸಮೀಪಕ್ಕೆ ಬಂದನು. ಅವನು ಪಿಂಗಳನಿಗೆ ಹಸನ್‌ಗೋರಿಯನ್ನು ತೋರಿಸುತ್ತ, "ಪಿಂಗಳಾ! ಇವರು ಯಾರು? ದೊಡ್ಡ ರಾಜಕೀಯದವರ ಹಾಗೆ ಕಾಣುತ್ತಾರೆ. ನಿನಗೂ ಇವರಿಗೂ ಏನು ಸಂಬಂಧ?" ಎಂದು ಪ್ರಶ್ನಿಸಿದನು.

ಆ ಪ್ರಶ್ನೆಯಿಂದ ಪಿಂಗಳನು ಇನ್ನಿಷ್ಟು ತಳಮಳಿಸಿದನು. ಪದ್ಮಪಾದನು ಪಿಂಗಳನ ಮನಸ್ಸಿನ ಹೊಯ್ದಾಟವನ್ನು ಕಂಡುಹಿಡಿದು, ಮುಗುಳುನಗುವನ್ನು ಸೂಸಿ, "ಓಹೋ! ಪಿಂಗಳಾ! ನೀನು ನನ್ನ ಮೇಲೆ ಏನೋ ಸಂಶಯಪಡುವ ಹಾಗಿದೆ. ಅದು ನಿನಗೆ ನಂಬಲಾಗದಷ್ಟು, ಬಾಯಿಯಿಂದ ಹೇಳಲಾಗದಷ್ಟು ಕೆಟ್ಟ ರೀತಿಯ ಸಂಶಯವಾಗಿದೆ. ನಿಜ ತಾನೇ?" ಎಂದು ಕೇಳಿದನು.

ಏನು ಉತ್ತರ ಕೊಡಬೇಕೆಂದು ಪಿಂಗಳನಿಗೆ ತೋರಲಿಲ್ಲ. ಅವನು ಹಸನ್‌ಗೋರಿಯನ್ನು ಮತ್ತೆ ನೋಡತೊಡಗಿದನು. ಆಗ ಹಸನ್‌ಗೋರಿ ಪದ್ಮಪಾದನ ಕಡೆಗೆ ಒಂದಡಿ ಮುಂದಿಟ್ಟು, "ಅಯ್ಯಾ, ತಾವು ಯಾರೆಂದು ನನಗೆ ಗೊತ್ತಿಲ್ಲ. ನನ್ನ ಪರಿಚಿತನಾದ ಈ ಪಿಂಗಳನನ್ನು ನೀವು ಗುರುತಿಸಿದ್ದೀರಿ. ಮರುಭೂಮಿಯ ಕೊಳ್ಳೇಗಾರರನ್ನು ಹುಡುಕುವಾಗ ನೀವು ಬಯಲಿಗೆ ಬಂದಿದ್ದೀರಿ. ಪುಣ್ಯ ಯಾತ್ರಿಕರಂತೆ ಕಾಣುತ್ತಿದ್ದೀರಿ. ಇದು..." ಎಂದಷ್ಟೇ ಹೇಳಿ, ಪದ್ಮಪಾದನು ನಕ್ಕುದನ್ನು ನೋಡಿ ಮಾತು ಅಲ್ಲಿಗೇ ನಿಲ್ಲಿಸಿ ಪರೀಕ್ಷಿಸಿ ನೋಡತೊಡಗಿದನು.

ಪದ್ಮಪಾದನು ಪಿಂಗಳನ ಭುಜಗಳನ್ನು ಆಪ್ಯಾಯತೆಯಿಂದ ತಟ್ಟುತ್ತ, "ಪಿಂಗಳಾ, ನಿನ್ನ ಹಾಗೆ ನನಗೂ ಈ ಸ್ಥಳದಲ್ಲಿ ನಿನ್ನನ್ನು ನೋಡಿ ಆಶ್ಚರ್ಯವಾಗಿದೆ. ಈಗ ಈ ಬೆಟ್ಟಗಳ ಕಡೆಯಿಂದ ಓಡಿಹೋದ ಕಳ್ಳರಿಗೆಲ್ಲ ನಾನೇ ನಾಯಕನೆಂದು ನಿಮಗಿಬ್ಬರಿಗೂ ಅನುಮಾನವಾಗಿರುವುದೇನು? ಹಾಗಾಗುವುದು ಸಹಜವೇ ಅನ್ನು. ಪರವಾಗಿಲ್ಲ. ನೊಂದುಕೊಳ್ಳಲಾರೆ, ಹೇಳು" ಎಂದು ಹೇಳಿದನು.

"ಇಲ್ಲ ಪದ್ಮಪಾದರೇ! ಹಾಳು ಸಂಶಯಗಳಿಗೆ

ಮಣ್ಣು ಹಾಕಿಬಿಟ್ಟೆ. ನೀವು ಇಂಥಾ ಹೀನವಾದ ಕಾರ್ಯಕ್ಕೆ ಇಳಿಯುವವರಲ್ಲವೆಂದು ನನಗೆ ಚೆನ್ನಾಗಿ ಗೊತ್ತಿದೆ" ಎಂದು ಪಿಂಗಳನು ಹಸನ್‌ಗೋರಿಯನ್ನು ನಿರ್ದೇಶಿಸುತ್ತ, "ಇವರಿಗೆ ಅಂತಹ ಸಂದೇಹ ಬಂದರೂ ಬಂದಿರಬಹುದು. ಇವರು ನವಾಬರ ಒಂಟೆ ಪಟಲಾಮಿನ ನಾಯಕರಾದ ಹಸನ್‌ಗೋರಿ. ಹೆಗ್ಗಡೇಗೆ ಎಂಬ ಮರುಭೂಮಿಯ ಕಳ್ಳರ ತಂಡ ದವರನ್ನು ಶೋಧಿಸಿಕೊಂಡು ಇವರು ಬಂದಿದ್ದಾರೆ. ಬಹಳ ಕಾಲದಿಂದ ಆ ಘೋರ ಕ್ರೂರ ಕರ್ಮಿಗಳನ್ನು ಹಿಡಿಯಲು ಹೆಣಗಾಡುತ್ತಿದ್ದಾರೆ. ಅಂಥವರ ಎಡೆ ಯಲ್ಲಿ ನೀವು ಹೇಗೆ ಸೇರಿದಿರಪ್ಪಾ ಅಂತ ಆಶ್ಚರ್ಯ, ಅಷ್ಟೇ" ಎಂದನು.

ಅದನ್ನು ಕೇಳಿ ಪದ್ಮಪಾದನು ಹಸನ್‌ಗೋರಿಯ ಕಡೆಗೆ ತಿರುಗಿ, "ಅಯ್ಯಾ, ನೀವು ಮರುಭೂಮಿಯ ರಕ್ಷಕಭಟರ ನಾಯಕರಾದರೆ, ನೀವು ಕಾಪಾಡಬೇಕಾದ ಕೆಲವು ವರ್ತಕರು ಅಲ್ಲಿ ಕಾಣುವ ಗುಹೆಯೊಳಗೆ ಆ ಕಳ್ಳರಿಂದ ಬಂಧಿಸಲ್ಪಟ್ಟಿದ್ದಾರೆ. ಅತ್ಯಂತ ಶರೀರ ಸಂಕಟದಲ್ಲಿ ನರಳಿಕೊಂಡಿದ್ದಾರೆ. ಮೊದಲು ಅವರನ್ನು ಕಾಪಾಡಬೇಕು" ಎಂದನು.

ಹಸನ್‌ಗೋರಿಗೆ ಪದ್ಮಪಾದನ ಮೇಲೆ ಇನ್ನೂ ಪೂರ್ತಿ ನಂಬುಗೆಯಾಗಲಿಲ್ಲ. ಹಸನ್‌ಗೋರಿ ಯೋಚಿಸುವುದನ್ನು ನೋಡಿ ಪಿಂಗಳನು, "ಹಸನ್ ಅವರೇ, ನೀವು ಈ ಪದ್ಮಪಾದರನ್ನು ನನ್ನ ಹತ್ತಿರ ಬಿಟ್ಟುಬಿಡಿರಿ. ಏನೂ ಹೆದರಬೇಕಾದ ಅಗತ್ಯವಿಲ್ಲ. ಇವರು ನನ್ನ ಆತ್ಮೀಯರಾಗಿದ್ದಾರೆ. ಇವರಿಂದ ಸರ್ವಸ್ವವನ್ನೂ ನಾನು ವಿಚಾರಿಸಿ ತಿಳಿಯುತ್ತೇನೆ. ಒಂದು ವೇಳೆ ಇವರೇ ಕಳ್ಳರ ನಾಯಕ ಹೆಗ್ಗ ಡೇಗೆಯೇ ಆಗಿದ್ದರೆ ಇವರ ಕೈಕಾಲುಗಳನ್ನು ಕಟ್ಟಿ ನಿಮಗೆ ಒಪ್ಪಿಸಿಬಿಡುತ್ತೇನೆ" ಎಂದನು.

ತನ್ನ ನಡತೆಗಳಿಂದ ವಿಶ್ವಾಸಪಾತ್ರನಾದ ಪಿಂಗಳನು ಹೇಳಿದ ಮಾತು ಕೇಳಿ ಹಸನ್‌ಗೋರಿಯ ಅನು



ಮಾನವೆಲ್ಲಾ ಹಾರಿಹೋಯಿತು. ಅವನು ಕೆಲವು ಮಂದಿ ಸೈನಿಕರನ್ನು ಕರೆದುಕೊಂಡು ಅವಸರದ ಆಜ್ಞೆ ಮಾಡಿ, ಪದ್ಮಪಾದನು ತೋರಿಸಿದ ಬೆಟ್ಟದ ಗುಹೆಯ ಕಡೆಗೆ ಹೊರಟುಹೋದನು.

"ಇದೇನು ಪಿಂಗಳಾ! ದೇಶವಲ್ಲದ ದೇಶದಲ್ಲಿ ಈ ಒಣ ಮರಳುಗಾಡಿನಲ್ಲಿ, ಈ ಪಾಳು ಬೆಟ್ಟಗಳ ಹತ್ತಿರ ನಿನ್ನನ್ನು ನೋಡುತ್ತಿರವೆನಲ್ಲಾ! ದೊಡ್ಡ ಮಾತೃ ಭಕ್ತನಾದ ನೀನು ಅವಂತೀ ನಗರದಲ್ಲಿರುವ ನಿನ್ನ ಸ್ವಂತ ಮನೆಯನ್ನು ಬಿಟ್ಟು, ತಾಯಿಯನ್ನು ಬಿಟ್ಟು ಇಷ್ಟು ದೂರಕ್ಕೆ ಯಾವ ಕಾರಣಕ್ಕಾಗಿ ಬಂದೆ ಯಪ್ಪಾ? ಏನು ಸಂಭವಿಸಿತು? ನಿನ್ನ ತಾಯಿ ಕ್ಷೇಮವಾಗಿದ್ದಾಳೆ ತಾನೆ?" ಎಂದು ಪದ್ಮಪಾದನು ಪ್ರಶ್ನಿಸಿದನು.

"ಅಯ್ಯಾ ಪದ್ಮಪಾದರೇ! ನನ್ನ ತಾಯಿ ಕ್ಷೇಮ ವಾಗಿಯೇ ಇರಬಹುದು. ಆಕೆಗೆ ಏನೂ ಆಗದಿರಲಿ. ನನ್ನದು ಅತ್ಯಂತ ದೀನಾತಿದೀನವಾದ ಕಥೆಯಾಯಿತು.




ಇದಕ್ಕೆಲ್ಲಾ ನನ್ನ ಒಳ್ಳೆಯತನವೇ ಕಾರಣ. ನೀವು ಕೊಟ್ಟ ಮಹಿಮೆಯ ಚೇಲವನ್ನೂ, ಧನರಾಶಿಯನ್ನೂ, ಕಡೆಗೆ ಸಹಾಯಕನಾಗಿದ್ದ ಭಲ್ಲೂಕಕೇತುವನ್ನೂ ಸಹ ಕಳೆದುಕೊಂಡುಬಿಟ್ಟೆನು. ಎಷ್ಟು ತಲೆಯೊಡೆದು ಕೊಂಡರೂ ನನ್ನ ಮರಮಂಡೆಗೆ ಭಲ್ಲೂಕಕೇತು ಮಂತ್ರ ನೆನಪಿಗೆ ಬರಲಿಲ್ಲ. ಈ ಎಲ್ಲಾ ಕಷ್ಟನಷ್ಟಗಳಿಗೂ, ಬಹು ದುಷ್ಟರಾದ ತುಚ್ಛ ಗುಣದ ನನ್ನ ಅಣ್ಣಂದಿರೇ ಕಾರಣ. ಅಂದು ನಾನು ನಿಮ್ಮಿಂದ ಅಪ್ಪಣೆ ಪಡೆದುಕೊಂಡು ನನ್ನ ಸ್ವಂತ ಮನೆಗೆ ಹೋದಂದಿನಿಂದ ಈವರೆಗೂ ನಾನು ಅನುಭವಿಸಿದ ಯಾತನೆಗಳನ್ನೆಲ್ಲ ಹೇಳಬೇಕಾದರೆ ಬಹಳ ಕಾಲ ಬೇಕಾಗುತ್ತದೆ. ದಿಕ್ಕಿಲ್ಲದ ಈ ಸ್ಥಳದಲ್ಲಿ ನಾನು ಜೀವದೊಂದಿಗೆ ಇರುವುದೇ ಒಂದು ಆಶ್ಚರ್ಯ. ಬಹುಶಃ ನನ್ನ ಆಯುಷ್ಯ ಗಟ್ಟಿ ಇದ್ದಿರಬೇಕು. ಅದಿರಲಿ ಅಯ್ಯಾ, ಮೊದಲು ನೀವು ಈ ಪ್ರಾಂತಕ್ಕೆ ಬರಲು ಏನು ಕಾರಣವೋ ಹೇಳಿರಿ. ಮತ್ತೊಬ್ಬ ಮಾಂತ್ರಿಕನು ನಿಮಗೆ ಗಂಟುಬಿದ್ದಿಲ್ಲವಷ್ಟೆ? ಒಂದು ವೇಳೆ ಅವನನ್ನು ಜಯಿಸಲಿಕ್ಕಾಗಿ ನೀವು ಬಂದಿದ್ದರೆ ನಾನು ಮತ್ತೆ ನಿಮಗೆ ಸಹಾಯ ಮಾಡುತ್ತೇನೆ. ನಿಮ್ಮ ಕೆಲಸ ಮಾಡುವುದೆಂದರೆ ನನಗೆ ಪ್ರತ್ಯೇಕ ಸಂತೋಷ" ಎಂದನು ಪಿಂಗಳ.

ಪಿಂಗಳನು ಹೇಳಿದ ಕಡೆಯ ಮಾತಿನಿಂದ ಪದ್ಮಪಾದನಿಗೆ ಬಹಳ ಸಂತೋಷವಾಯಿತು. ಆದರೆ ತಾನು ಅವನಿಗೆ ಕೊಟ್ಟ ಧನವನ್ನೂ ಮಹತ್ವದ ಚೇಲವನ್ನೂ ಕಳೆದುಕೊಂಡಿರುವನೆಂಬುದನ್ನು ತಿಳಿದು ಬಹಳ ಬೇಸರಗೊಂಡನು. ಭಲ್ಲೂಕ ಪರ್ವತಗಳ ಹತ್ತಿರ ಮಹಾಮಾಯನನ್ನು ಜಯಿಸುವುದರಲ್ಲಿ ಪಿಂಗಳನು ತೋರಿಸಿದ ಧೈರ್ಯವೂ, ಮಾಡಿದ ಸಹಾಯವೂ ಬಹಳ ದೊಡ್ಡದೇ. ಪದ್ಮಪಾದನು ಅದನ್ನೆಂದೂ ಮರೆಯಲಿಲ್ಲ.

"ಪಿಂಗಳಾ, ನಾನು ಯಾವ ಮಾಂತ್ರಿಕನನ್ನೂ ಜಯಿಸಲಿಕ್ಕಾಗಿ ಈ ಪ್ರಾಂತಕ್ಕೆ ಬರಲಿಲ್ಲ. ಮಹಾಮಾಯನ ಸಮಾಧಿಯಿಂದ ನಾವು ಸಂಪಾದಿಸಿದ ಅಪೂರ್ವ ಶಕ್ತಿಯ ವಸ್ತುಗಳು ನನ್ನ ಹತ್ತಿರವಿರುವವರೆಗೆ ನಾನು ಪ್ರಪಂಚದಲ್ಲಿರುವ ಯಾರಿಗೂ ಹೆದರಬೇಕಾಗಿಲ್ಲ. ನಾನು ಕೇವಲ ದೇಶ ಸಂಚಾರ ಮಾಡುವುದಕ್ಕೂ, ವಿಶೇಷ ಯಾತ್ರಾಸ್ಥಳಗಳನ್ನು ಸಂದರ್ಶಿಲಿಕ್ಕೂ, ಸಾಧಾರಣ ಯಾತ್ರಿಕನ ವೇಷದಲ್ಲಿ ವಲಸೆ ಹೋಗುವ ವರ್ತಕರ ಜತೆಯಲ್ಲಿ ಕೂಡಿ ಈ ಪ್ರಾಂತಕ್ಕೆ ಬಂದೆನು. ಈ ದಿನ ಸಾಯಂಕಾಲದಲ್ಲಿ ಆ ವರ್ತಕರ ಮೇಲೆ ಕಳ್ಳರ ಗುಂಪು ದಾಳಿಮಾಡಿ, ಬೆಲೆ ಬಾಳುವ ಸಾಮಾನುಗಳನ್ನೆಲ್ಲಾ ಕೊಳ್ಳೆ ಹೊಡೆದರು. ವರ್ತಕರನ್ನೆಲ್ಲ ಅಲ್ಲಿ ಕಾಣುವ ಗುಹೆಯೊಳಗೆ ಬಂಧಿಸಿಟ್ಟಿದ್ದಾರೆ. ಅವರಲ್ಲಿ ಕೆಲವರು ಅವಂತೀ ನಗರವಾಸಿಗಳೂ ಇದ್ದಾರೆ. ನಿಜಕ್ಕೂ ಆ ಕಳ್ಳರು ಬಹಳ ಕ್ರೂರರು. ನರಮೃಗಗಳು" ಎಂದನು ಪದ್ಮಪಾದ.



ಅವನ ಮಾತು ಕೇಳಿ ಪಿಂಗಳನು ಆಶ್ಚರ್ಯ ಪಡುತ್ತ, ಪದ್ಮಪಾದನ ಮುಖವನ್ನು ಅನುಮಾನದಿಂದ ನೋಡುತ್ತ, "ಇದೇನು ಹೇಳುವಿರಿ ಪದ್ಮಪಾದರೇ ! ಮಹಾ ಮಾಂತ್ರಿಕರಾದ ನೀವು ಜತೆಯಲ್ಲಿದ್ದು ಕೂಡಾ ಕ್ರೂರರಾದ ಆ ಮರುಭೂಮಿಯ ಕಳ್ಳರು ವರ್ತಕರನ್ನು ದೋಚಿಕೊಳ್ಳಲು ಹೇಗೆ ಸಾಧ್ಯವಾಯಿತು ? ನೋಡುತ್ತಾ ನೀವು ಹೇಗೆ ಸುಮ್ಮನಿದ್ದಿರಿ ? ಬಹುಶಃ ಯಾವ ತಪ್ಪಿನಿಂದಾದರೂ ನಿಮ್ಮ ಅದ್ಭುತ ಮಂತ್ರಶಕ್ತಿಗಳನ್ನು ಕಳೆದುಕೊಂಡು ಬಿಡಲಿಲ್ಲವಷ್ಟೆ ? " ಎಂದು ಕೇಳಿದನು.

ಪದ್ಮಪಾದನು ಮುಗುಳುನಗುತ್ತ, "ಪಿಂಗಳಾ, ನಾನು ಆ ವರ್ತಕರ ಗುಂಪಿನೊಂದಿಗೆ ಹೊರಡುವಾಗ ಯಾತ್ರಿಕನೆಂದಷ್ಟೇ ಹೇಳಿದ್ದೆನು. ನಾನೊಬ್ಬ ದೊಡ್ಡ ಮಾಂತ್ರಿಕನೆಂದು ಹೇಳಿದ್ದರೆ ನನ್ನನ್ನು ತಮ್ಮೊಂದಿಗೆ ಬರಲು ಅನುಮತಿ ಕೊಡುತ್ತಿದ್ದಿಲ್ಲ. ಆ ಕಾರಣದಿಂದಲೇ ಕಳ್ಳರು ಅವರ ಮೇಲೆ ಬೀಳುವಾಗ, ನಾನು ಯಾರೆಂಬುದು ಹೊರಬೀಳದಂತೆ ನನ್ನ ಮಂತ್ರ ತಂತ್ರಗಳನ್ನು ತೋರ್ಪಡಿಸದೆ ಈ ಕಲ್ಲುಗಳಾಚೆಗೆ ತಪ್ಪಿಸಿಕೊಂಡೆನು. ಮನಸ್ಸು ಕಲ್ಲು ಮಾಡಿ ಕಳ್ಳರ ಕ್ರೂರ ಕರ್ಮಗಳನ್ನು ಸಹಿಸಿಕೊಂಡೆನು " ಎಂದನು.

"ಏನಾದರೂ ನಿಮ್ಮ ಪ್ರವರ್ತನೆ ನನಗಷ್ಟು ಹಿಡಿಸಲಿಲ್ಲ. ನಿಮ್ಮ ಹತ್ತಿರವಿರುವ ಅದ್ಭುತ ವಸ್ತುಗಳಾದ ಭೂಗೋಳವೂ, ಉಂಗುರವೂ, ವಜ್ರಖಚಿತವಾದ ಕತ್ತಿಯೂ ಇಂತಹ ಸಂದರ್ಭದಲ್ಲಿ ಉಪಯೋಗವಿಲ್ಲದೆ ಹೋಗುವುದೆಂದರೇನು ? ನೀವು ನೋಡಬೇಕಾದ ಸ್ಥಳವನ್ನೆಲ್ಲಾ ಆ ಭೂಗೋಳದಲ್ಲೇ ನೋಡಿಬಿಡಬಹುದಿತ್ತು. ಹಾಗಿರುವಾಗ ದಾರಿಯ ಶ್ರಮವನ್ನೆಲ್ಲಾ ಮೈಮೇಲೆ ಹಾಕಿಕೊಂಡು ಈ ವರ್ತಕರೊಂದಿಗೆ ಹೊರಡುವ ಆಗತ್ಯವೇನಿತ್ತು ? ಅವರೆಲ್ಲರ ಹಾಗೆ ನೀವಾಗಿ ಕಷ್ಟಪಡಲು ಹೊರಡುವುದೆಂದರೇನು ? ಇಷ್ಟು ದೊಡ್ಡ ವೈರಾಗ್ಯ ಬರುವಷ್ಟು ನಿಮಗೇನಾಯಿತು ? " ಎಂದು ಕೇಳಿದನು ಪಿಂಗಳ.

"ಓಹೋ ! ಪಿಂಗಳಾ ! ಆ ಕಳ್ಳರ ನಾಯಕನಾದ ಹೆಗ್ಗಡೇಗೆ ನಾನೇ ಎಂದು ಇನ್ನೂ ನಿನಗೆ ಅನಮಾನವಿದೆ, ಹೌದಾ ? " ಎಂದು ಪದ್ಮಪಾದನು ಪಿಂಗಳನನ್ನು ನೋಡಿ ನಕ್ಕು, "ಎಷ್ಟಾದರೂ ನಿನಗೆ ಲೋಕಾನುಭವ ಕಡಿಮೆಯೇ. ನಾನು ದೇಶಗಳನ್ನು ತಿರುಗುತ್ತ ಆಯಾ ಪುಣ್ಯಕ್ಷೇತ್ರಗಳನ್ನು ಸೇವಿಸಿದ ನಿಜವಾದ ಫಲವನ್ನು ಅನುಭವಿಸಬೇಕಾದರೆ ಎಲ್ಲರ ಹಾಗೆ ನಾನೂ ಪಾದಚಾರಿಯಾಗಿಯೇ ಹೋಗಬೇಕು. ಅದನ್ನು ಬಿಟ್ಟು, ನನ್ನ ಹತ್ತಿರವಿರುವ ಅದ್ಭುತ ಶಕ್ತಿಗಳ ಸಹಾಯದಿಂದ ಎಲ್ಲೆಂದರಲ್ಲಿಗೆ ಕ್ಷಣಮಾತ್ರದಲ್ಲಿ ಹೋಗುವುದರಿಂದ ಯಾತ್ರೆಯ ಫಲವು ದಕ್ಕುವುದಿಲ್ಲ. ಎಲ್ಲರ ಹಾಗೆ ತಾನೂ ಒಬ್ಬನೆಂದುಕೊಳ್ಳುವುದರಲ್ಲೇ ದೊಡ್ಡತನವಿದೆಯಪ್ಪಾ. ಪ್ರಪಂಚದಲ್ಲಿ ಹುಟ್ಟಿದವನಿಗೆ ತಾನೊಬ್ಬ ಬೇರೆ

ಅನಿಸಿಕೊಂಡರೆ ಯಾವ ಸುಖವೂ ಇಲ್ಲವಪ್ಪಾ. ಈ ನೀತಿಯನ್ನು ನೀನೂ ತಿಳಿದಿರಬೇಕು." ಎಂದನು.

ಹೀಗೆ ಇವರು ಮಾತಾಡಿಕೊಳ್ಳುತ್ತಿರುವಾಗ, ಸ್ವಲ್ಪ ದೂರದಲ್ಲಿ ಹಸನ್‌ಗೋರಿಯ ಸೈನಿಕರ ಕೇಕೇಗಳೂ, ವರ್ತಕರ ದೀನಾಲಾಪಗಳೂ ಕಲಕಲರವವಾಗಿ ಸಮೀಪಿಸುತ್ತ ಕಿವಿಗಡಚಿಕ್ಕುವಷ್ಟು ಗೋಳಾಟವಾಯಿತು.

ಆದುದರಿಂದ ಪಿಂಗಳನೂ ಪದ್ಮಪಾದನೂ ತಮ್ಮ ಮಾತನ್ನು ಅಲ್ಲಿಗೆ ನಿಲ್ಲಿಸಿ, ಆ ಕಡೆಗೆ ಗಮನ ಹರಿಸಿದರು. ಹಸನ್‌ಗೋರಿ ವರ್ತಕರನ್ನೆಲ್ಲ ಆದರಿಸಿ ಅವರಿಗೆ ಧೈರ್ಯವನ್ನು ಹೇಳುತ್ತ ಕರೆದುಕೊಂಡು ಬರುತ್ತಿದ್ದನು.

ಅದೇ ಸಮಯದಲ್ಲಿ ಒಬ್ಬ ಸೈನಿಕನು ಓಡುತ್ತಾ ಪಿಂಗಳನ ಬಳಿಗೆ ಬಂದು, "ಹೆಗ್ಗಡೇಗೆ ಇಲ್ಲೆಲ್ಲೋ ಇರುವ ಹಾಗಿದೆ. ಗುಂಪಿನೊಂದಿಗೆ ಪರಾರಿಯಾಗುತ್ತಿದ್ದಾನೆ. ಅವರು ತಪ್ಪಿಸಿಕೊಂಡು ಹೋಗುವುದರೊಳಗೆ ಅವರನ್ನು ಹಿಡಿಯಲು ನಿಮ್ಮ ಸಹಾಯಬೇಕೆಂದು ಹಸನ್‌ಗೋರಿ ಸಾಹೇಬರು ಹೇಳಿದ್ದಾರೆ. ಬನ್ನಿ! ಬನ್ನಿ!" ಎಂದು ಅವಸರಪಡಿಸಿದನು.

ಪಿಂಗಳನು ಪದ್ಮಪಾದನನ್ನು ಪ್ರಾರ್ಥಿಸುವಂತೆ ನೋಡುತ್ತ, "ಅಯ್ಯಾ, ಹಸನ್‌ಗೋರೀ ನನ್ನನ್ನು ಈ ಮರುಭೂಮಿಯಲ್ಲಿ ಒಣಗಿ ಸಾಯದಂತೆ ಕಾಪಾಡಿದ್ದಾರೆ. ಅದಕ್ಕೆ ಪ್ರತಿಯಾಗಿ ನಾನು ಅವರಿಗೆ ಏನಾದರೂ ಸಹಾಯ ಮಾಡಲೇಬೇಕು. ಈ ಕತ್ತಲೆಯಲ್ಲಿ ಆ ಮರುಭೂಮಿಯ ಕಳ್ಳರನ್ನು ಹಿಡಿಯುವುದು ಮಾನವ ಮಾತ್ರರಿಂದ ಆಗುವ ಕಾರ್ಯವಲ್ಲ. ಆ ಕಳ್ಳರೂ ಅವರ ನಾಯಕ ಹೆಗ್ಗಡೇಗೆಯೂ ಬಹು ಕ್ರೂರರು. ಸಮೀಪದಲ್ಲಿದ್ದ ಖಿಲ್ಲೆಯೊಳಗಿನ ಸೈನಿಕರನ್ನೆಲ್ಲಾ ಕೊಲೆಮಾಡಿ, ಕಪಟೋಪಾಯದಿಂದ ನಮ್ಮನ್ನೆಲ್ಲಾ ಕೊಲ್ಲಲು ನೋಡಿದ್ದಾರೆ. ಆದುದರಿಂದ ಈ ಮರುಭೂಮಿಯ ಕಳ್ಳರನ್ನು ಹಿಡಿಯುವ ಪ್ರಯತ್ನದಲ್ಲಿ ನಿಮ್ಮ ಅದ್ಭುತ ಶಕ್ತಿಗಳನ್ನು ಪ್ರಯೋಗಿಸಿ ಸಹಾಯ ಮಾಡಲೇಬೇಕು. ಈ ಕಳ್ಳರಿಂದ ನೀವೇ ಕಾಪಾಡಬೇಕು. ನನಗಾಗಿ ಸ್ವಲ್ಪ



ದಯಮಾಡಿ. ನಿಮ್ಮ ಉಪಕಾರವನ್ನು ಅವರು ಎಂದಿಗೂ ಮರೆಯಲಾರರು. ಇದೊಂದು ಲೋಕೋಪಕಾರವೂ ಆಗಿ ಹತ್ತು ಪುಣ್ಯಕ್ಷೇತ್ರಗಳ ಯಾತ್ರೆಯ ಪುಣ್ಯ ಬಂದೀತು!" ಎಂದನು.

"ಪಿಂಗಳಾ! ನೀನು ಕೇಳಿಕೊಳ್ಳುವುದರಿಂದ ನಾನು ಸಹಾಯ ಮಾಡುತ್ತೇನೆ. ಅದರಿಂದ ನಾನು ಮಾಂತ್ರಿಕನೆಂದು ವರ್ತಕರಿಗೆಲ್ಲಾ ಗೊತ್ತಾಗಿ ಹೋಗುತ್ತದೆ. ಆಮೇಲೆ ಅವರೊಂದಿಗೆ ನಾನು ಪ್ರಯಾಣ ಮಾಡಲು ಸಾಧ್ಯವಾಗದು. ಏಕೆಂದರೆ ಅವರು ನನ್ನನ್ನು ಆಕಾಶಕ್ಕೆತ್ತಿ ಪೂಜಿಸಿ ಬ್ರಹ್ಮರಥವೆತ್ತುವುದು ನನಗೇನೂ ಇಷ್ಟವಿಲ್ಲ. ಸರಿ. ಯಾತ್ರಾಸ್ಥಳಗಳನ್ನು ಸಂದರ್ಶಿಸಲು ಎಷ್ಟೋ ಮಾರ್ಗಗಳಿವೆ!" ಎಂದು ಪದ್ಮಪಾದನು ಒಂದು ಕಲ್ಲನ್ನು ಹೆಕ್ಕಿ ಅದನ್ನು ತನ್ನ ಕತ್ತಿಯಿಂದ ಸಣ್ಣ ಸಣ್ಣ ತುಂಡುಗಳಾಗುವಂತೆ ಮಂತ್ರ ಗುಣುಗುತ್ತಾ ಒಡೆದನು.

ಪದ್ಮಪಾದನು ಮಾಡುವ ಕೆಲಸ ನೋಡಿ ಪಿಂಗಳನು ಸಂತೋಷದಿಂದುಕ್ಕಿ, "ಪದ್ಮಪಾದರೇ! ಇದೇನು ಕೆಲಸವೋ? ಅಲ್ಲಿ ಕಳ್ಳಕಾಕರು ವರ್ತಕರ ಸೊತ್ತು ಅಪಹರಿಸಿ ಓಡಿಹೋಗುತ್ತಿದ್ದರೆ, ನೀವು ಹೀಗೆ ಕುಳಿತು ಕಲ್ಲು ಒಡೆಯುವ ಆಟ ತೋರಿಸುತ್ತಿರುವಿರಿ! ಏನಿದು?" ಎಂದನು.

ಪದ್ಮಪಾದನು ನಗುತ್ತ ತನ್ನ ಕೈಯಲ್ಲಿರುವ ಕಲ್ಲಿನ ತುಂಡುಗಳನ್ನು ಪಿಂಗಳನಿಗೆ ತೋರಿಸುತ್ತ, "ಈ ಕತ್ತಲೆಯಲ್ಲಿ ಕಳ್ಳರನ್ನು ಬೆನ್ನಟ್ಟಿ ಹಿಡಿಯುವುದು ಆಗದ ಕೆಲಸವೆಂದು ನೀನೇ ಹೇಳಿದೆಯಷ್ಟೆ? ಅದಕ್ಕೇ ಕತ್ತಲೆಯಲ್ಲಿ ನೋಡಬಲ್ಲಂತಹ ತೋಳಗಳನ್ನೂ ಹೆಬ್ಬುಲಿಗಳನ್ನೂ ಇಲ್ಲಿಗೆ ಬರುವಂತೆ ಮಾಡಲು ಕಳುಹಿಸುತ್ತೇನೆ. ಇವುಗಳಲ್ಲಿ ದೊಡ್ಡ ತುಂಡುಗಳು ಹೆಬ್ಬುಲಿಗಳು. ಚಿಕ್ಕ ಕಲ್ಲುಗಳು ತೋಳಗಳು!" ಎಂದು ಹೇಳಿ ಆ ಕಲ್ಲಿನ ತುಂಡುಗಳನ್ನು ಮಂತ್ರಿಸಿ ಎಲ್ಲಾ ದಿಕ್ಕುಗಳಿಗೂ ಬಲವಾಗಿ ಬೀಸಿ ಕತ್ತಲೆಯ ಕಡೆಗೆ ಒಗೆದನು.

ನೋಡುತ್ತಿದ್ದ ಹಾಗೆ ಆ ಕಲ್ಲುಗಳಿಂದ ಭೀಕರವಾಗಿ ಕೂಗುವ ತೋಳಗಳೂ ಹೆಬ್ಬುಲಿಗಳೂ



ಹೊರಟು ಬೆಟ್ಟದ ಬಂಡೆಗಳ ಮೇಲಿಂದ ಹಾರುತ್ತಾ, ಧುಮುಕುತ್ತಾ ಎಲ್ಲಾ ಕಡೆಗಳಿಗೂ ಓಡಿದುವು.

ಈ ಅದ್ಭುತ ದೃಶ್ಯವನ್ನು ನೋಡಿ ಪಿಂಗಳನು ನಿಶ್ಚೇಷ್ಟಿತನಾದನು. ಅವನು ನೋಡುತ್ತಿದ್ದ ಹಾಗೆ ಬೆಟ್ಟಗಳ ಗುಹೆಯ ಕಡೆಯಿಂದ ಹಸನ್‌ಗೋರಿ ಬಿಡಿಸಿದ ವರ್ತಕರು ಗುಂಪುಗುಂಪಾಗಿ ಹೊರಟು ಪದ್ಮಪಾದನಿರುವ ಜಾಗೆಗೆ ಬಂದರು. ಅವರೊಂದಿಗಿದ್ದ ಹಸನ್‌ಗೋರಿ, ಕೈಗಳನ್ನು ಆಚೀಚೆ ಬೀಸುತ್ತ, ಓಡೋಡಿ ಬಂದು, "ಏನಿದು ಘೋರ ! ಈ ಗುಡ್ಡಗಾಡು ಪ್ರಾಂತದಲ್ಲಿ ಈವರೆಗೂ ಒಂದೇ ಒಂದು ತೋಳವನ್ನೋ ಹುಲಿಯನ್ನೋ ನೋಡಿದ್ದಿಲ್ಲ. ಈಗ ಬಹಳ ವಿಚಿತ್ರ !" ಎಂದು ದೊಡ್ಡ ಕಣ್ಣುಗಳಿಂದ ಪಿಂಗಳನನ್ನು ನೋಡಿ ಸ್ತಂಭಿಸಿ ನಿಂತನು.

"ಪದ್ಮಪಾದರೇ ! ಇನ್ನು ನಿಮ್ಮ ರಹಸ್ಯವನ್ನು ಅಡಗಿಸಿ ಪ್ರಯೋಜನವಿಲ್ಲ. ಹೇಳಿಬಿಡಲೇ ?" ಎಂದನು ಪಿಂಗಳ.

ಪದ್ಮಪಾದನು ಒಪ್ಪಿಗೆ ಸೂಚಿಸುವಂತೆ ತಲೆಯಾಡಿಸಿದನು. ಅವನು ತನ್ನ ದುಸ್ತಿನೊಳಗೆ ಇಟ್ಟುಕೊಂಡಿದ್ದ ಮಹಾ ಮಾಯನ ಉಂಗುರವನ್ನು ಹೊರಕ್ಕೆ ತೆಗೆದು ಅಲ್ಲಿ ಎತ್ತರವಾಗಿದ್ದ ಒಂದು ಕಲ್ಲಿನ ಮೇಲೆ ಇಟ್ಟನು. ಮರುಕ್ಷಣದಲ್ಲಿ ಆ ಪ್ರದೇಶವೆಲ್ಲಾ ಕಣ್ಣು ಕೋರೈಸುವಂತಹ ಕಾಂತಿಯಿಂದ ಹಚ್ಚ ಹಗಲಿನ ಹಾಗೇ ಆಯಿತು. ಎಲ್ಲರಿಗೂ ಅತ್ಯಾಶ್ಚರ್ಯ! ಪಿಂಗಳನು ಒಂದೆರಡು ಮಾತುಗಳಲ್ಲಿ ಪದ್ಮಪಾದನು ಮಹಾ ಮಾಂತ್ರಿಕನೆಂಬುದನ್ನು ಅಲ್ಲಿ ಸೇರಿದವರೊಂದಿಗೆ ಹೇಳಿ, ಹಸನ್‌ಗೋರಿಯನ್ನು ನೋಡಿ, "ಹಸನ್‌ಗೋರಿಯವರೇ, ಆ ಮರುಭೂಮಿಯ ಕಳ್ಳ ಹೆಗ್ಗಡೇಗೆಯನ್ನು ಕುರಿತು ಇನ್ನೇನೂ ಚಿಂತಿಸಬೇಕಾದ ಅಗತ್ಯವಿಲ್ಲ. ಪದ್ಮಪಾದರು ಕಳುಹಿಸಿದ ಪಿಶಾಚಿ ತೋಳಗಳೂ, ಹುಲಿಗಳೂ ಅವನನ್ನು ಎಲ್ಲಾ ಅನುಚರರೊಂದಿಗೆ, ಸೊತ್ತುಗಳೊಂದಿಗೆ ಇಲ್ಲಿಗೆ ಬರಿಸುತ್ತವೆ, ನೋಡುತ್ತಿರಿ" ಎಂದನು.

ಪಿಂಗಳನ ಮಾತು ಪೂರ್ತಿಯಾಗುವ ಮೊದಲೇ ಆ ಬೆಟ್ಟಗಳ ಕಡೆಯಿಂದ ಹಾಹಾಕಾರಗಳು ಹೊರಟುವು. ತೋಳಗಳ ಕೂಗೂ, ಹುಲಿಗಳ ಗಾಂಕ್ರಿಕೆಗಳೂ, ಗರ್ಜನೆಗಳೂ ಕೇಳುತ್ತಲೇ ಇದ್ದುವು. ನೋಡುತ್ತಿದ್ದ ಹಾಗೆ ನೂರಾರು ಸಂಖ್ಯೆಯಲ್ಲಿದ್ದ ಮರುಭೂಮಿಯ ಕಳ್ಳರೆಲ್ಲಾ ಎಲ್ಲಾ ಕಡೆಗಳಿಂದಲೂ ತಮ್ಮನ್ನು ಆಕ್ರಮಿಸುವ ಕ್ರೂರ ಮೃಗಗಳಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತ, ಮೃಗಗಳಿಂದ ತಳ್ಳಲ್ಪಟ್ಟು ಪದ್ಮಪಾದನೂ ಪಿಂಗಳನೂ ಇರುವ ಕಡೆಗೇ ಬಂದು ಶರಣಾಗತರಾಗುವಂತೆ ಹೊರಳಿ ಬಿದ್ದು ಕೂಗುತ್ತಿದ್ದರು. —(ಇನ್ನೂ ಇದೆ)






## ೧೭

[ ಪದ್ಮಪಾದನು ಪಿಂಗಳನಿಗೆ, ಮರುಭೂಮಿಯ ಕಳ್ಳರು ವರ್ತಕರನ್ನೆಲ್ಲ ಬಂಧಿಸಿದ ಗುಹೆಯನ್ನು ತೋರಿಸಿದನು. ಹಸನ್‌ಗೋರೀ ಸೈನಿಕರೊಂದಿಗೆ ಹೋಗಿ ವರ್ತಕರನ್ನು ಬಂಧಮುಕ್ತ ಮಾಡಿಸಿದನು. ಆಗ ಪಿಂಗಳನ ಅಪೇಕ್ಷೆಯಂತೆ ಪದ್ಮಪಾದನು ತನ್ನ ಮಂತ್ರಶಕ್ತಿಯಿಂದ ತೋಳಗಳನ್ನೂ ಹೆಬ್ಬುಲಿಗಳನ್ನೂ ಸೃಷ್ಟಿಸಿ, ಅವುಗಳಿಂದ ಮರುಭೂಮಿಯ ಕಳ್ಳರನ್ನೆಲ್ಲಾ ಅಡ್ಡಗಟ್ಟಿಸಿ ಮುತ್ತಿಸಿ, ತಾನಿರುವಲ್ಲಿಗೆ ಬರಮಾಡಿಸಿಕೊಂಡನು.]

**ಯಾ**ರಿಗೂ ಅಂಜದೆ, ಎಲ್ಲರನ್ನೂ ಅಂಜಿಸುವ ಮರುಭೂಮಿಯ ಕಳ್ಳರಾದ ಹೆಗ್ಗಡೇಗೆಯ ಗುಂಪಿನವರು, ಪ್ರಾಣಭೀತಿಯಿಂದ ಗೋಳಾಡುತ್ತಾ, ಆಯುಷ್ಯ ತೀರಿದವರು ಯಮನ ಬಳಿಗೇ ಓಡುವಂತೆ ತಮ್ಮ ಹತ್ತಿರ ಬರುವುದನ್ನು ನೋಡಿ ಹಸನ್ ಗೋರಿ ನಗುತ್ತ, ತನ್ನ ವಿಜಯವನ್ನು ಸೂಚಿಸಿದನು. ಎಷ್ಟೋ ವರ್ಷಗಳಿಂದ ಈ ಪ್ರಾಂತದಲ್ಲಿ ಪ್ರಯಾಣ ಮಾಡುವ ವರ್ತಕರನ್ನು ದೋಚಿಕೊಂಡೇ ಬರುತ್ತಿದ್ದ ಈ ಕಳ್ಳ ಖದೀಮರೆಲ್ಲ ಇಷ್ಟೊಂದು ಸುಲಭವಾಗಿ ಸಿಗುವರೆಂದು ಅವನೆಂದೂ ಊಹಿಸಿರಲಿಲ್ಲ. ಈಗ ತನ್ನ ಪ್ರಯತ್ನವೇನಿಲ್ಲದೆ ಯಾವನಿಂದಲೋ ವಿಜಯವಾದರೂ, ಅವನಿಗಾಗುವ ಆನಂದಕ್ಕೆ ಮೇರೆ ಇಲ್ಲ.

ಈ ಘನ ವಿಜಯಕ್ಕೆ ಕಾರಣನಾದವನು ಮಹಾ ಮಾಂತ್ರಿಕ ಪದ್ಮಪಾದನಾದರೂ, ನವಾಬನು ತನ್ನನ್ನು ತಪ್ಪದೆ ಬಹು ದೊಡ್ಡ ರೀತಿಯಲ್ಲಿ ಬಹುಮಾನಿಸುವನೆಂದು ಹಸನ್‌ಗೋರೀ ಭಾವಿಸಿಕೊಂಡನು. ಈ ಸಂತೋಷದ ಉಕ್ಕುವಿಕೆಯಲ್ಲಿ ಅವನು ಪದ್ಮಪಾದನನ್ನು ನೋಡಿ, "ಅಯ್ಯಾ! ಪದ್ಮಪಾದರೇ! ನಿಮ್ಮ ಶಕ್ತಿಗೆ ಸಾಟಿಯೇ ಇಲ್ಲ. ಈ ಕ್ರೂರ ಕರ್ಮಿಗಳನ್ನು ಹಿಡಿಯಲು ನಾನು ಅನೇಕ ವರ್ಷಗಳಿಂದ ಪ್ರಯತ್ನ

ಪಡುತ್ತಿದ್ದೆನು. ಇವರಿಂದ ಅನೇಕ ಸೈನಿಕರು ಸತ್ತರು. ಈ ದಿನ ನಿಮ್ಮ ಸಹಾಯದಿಂದ ಕ್ಷಣಮಾತ್ರದಲ್ಲಿ ಅದ್ಭುತ ರೀತಿಯಲ್ಲಿ ಕ್ರೂರರೆಲ್ಲರ ಬಂಧನವಾಯಿತು. ಇನ್ನು ಈ ಮರುಭೂಮಿಯ ದಾರಿ ವರ್ತಕರಿಗೂ ಯಾತ್ರಿಕರಿಗೂ ನಿರ್ಭಯದ ದಾರಿಯಾಗುತ್ತದೆ. ನಿಮ್ಮ ದಯೆಗೆ, ಉಪಕಾರಕ್ಕೆ ಎಂದೆಂದೂ ಕೃತಜ್ಞನಾಗಿರುತ್ತೇನೆ" ಎಂದನು.

ಪದ್ಮಪಾದನು ಮುಗುಳುನಗು ತೋರಿಸಿ, "ಹಸನ್‌ಗೋರಿ ! ನಾನು ಮಾಡಲಿಕ್ಕೆ ಸಾಧ್ಯವಾಗುವ ಸಹಾಯವನ್ನೇನೋ ಮಾಡಿದ್ದೇನೆ. ನನ್ನ ಸಂಗತಿ ಪ್ರಕಟವಾಗುವುದು ನನಗಿಷ್ಟವಿಲ್ಲ. ಇನ್ನು ಈ ಕಳ್ಳರನ್ನೆಲ್ಲಾ ವಿಚಾರಣೆಗೆ ಗುರಿಪಡಿಸಿ ಶಿಕ್ಷಿಸಬೇಕಾದುದು ನಿಮ್ಮ ಹೊಣೆ. ಈಗ ನಾನು ನನ್ನ ಹೆಬ್ಬುಲಿಗಳನ್ನೂ ತೋಳಗಳನ್ನೂ ಕಳುಹಿಸಿಬಿಡುತ್ತೇನೆ" ಎಂದು ಹೇಳಿ ಎರಡು ಕೈಗಳನ್ನೂ ಮೇಲಕ್ಕೆತ್ತಿ ಏನೋ ಮಂತ್ರವನ್ನು ಪಠಿಸಿದನು. ಇದ್ದಕ್ಕಿದ್ದ ಹಾಗೆ ತೋಳಗಳೂ ಹೆಬ್ಬುಲಿಗಳೂ ಮಾಯವಾಗಿ ಹೋದುವು. ಆಗ ಪದ್ಮಪಾದನ ಕೈಯೊಳಗೆ ಅನೇಕ ಕಲ್ಲುಗಳು ಬಂದು ಸೇರಿದುವು. ಅವುಗಳನ್ನು ಹಸನ್‌ಗೋರಿಗೂ ಪಿಂಗಳನಿಗೂ ತೋರಿಸಿ, "ಇವೇ ತೋಳಗಳು ! ಹೆಬ್ಬುಲಿಗಳು !" ಎನ್ನುತ್ತ ಅವುಗಳನ್ನು ದೂರ ಬೀಸಿ ಒಗೆದನು.

ಹಸನ್‌ಗೋರೀ ಆಜ್ಞೆ ಮಾಡಿದ ಕೂಡಲೇ ಅವನ ಸೈನಿಕರು ಮೊದಲು ಕಳ್ಳರ ನಾಯಕನಾದ ಹೆಗ್ಗಡೇಗೆಗೆ ಸಂಕಲೆಗಳನ್ನು ತಗಲಿಸಿ, ಆಮೇಲೆ ಅವನ ಅನುಚರರೆಲ್ಲರನ್ನೂ ಹಗ್ಗಗಳಿಂದ ಒಬ್ಬರೊಡನೆ ಒಬ್ಬರನ್ನು ಜೋಡಿಸಿ ಒಂದಾಗಿ ಬಿಗಿಸಿ ಕಟ್ಟಿಸಿದನು.

ಆ ಸಮಯದಲ್ಲಿ ಪದ್ಮಪಾದನು ಪಿಂಗಳನನ್ನು ಸ್ವಲ್ಪ ಆಚೆಗೆ ಕರೆದುಕೊಂಡು ಹೋಗಿ, "ಪಿಂಗಳಾ, ತಿಳಿಯದಂತೆಯೇ ಇಲ್ಲಿ ಸೇರಿದ ನಿನಗೆ ಇವರೊಂದಿಗಿರಲು ಇಷ್ಟವಿರಲಿಕ್ಕಿಲ್ಲ. ಬೇಗನೇ ಅವಂತಿ ನಗರಕ್ಕೆ ಹೋಗಬೇಕೆಂದಿದ್ದೀತು, ನಿಜತಾನೆ ?" ಎಂದು ಕೇಳಿದನು. "ಹೌದು ಪದ್ಮಪಾದರೇ, ಮಹಾ ದುಷ್ಟರಾದ



ನನ್ನ ಅಣ್ಣಂದಿರು ನನ್ನನ್ನು ಹಡಗಿನ ಸರಂಗನಿಗೆ ಮಾರಿದ ಮೇಲೆ, ನಮ್ಮ ಅಮ್ಮನನ್ನು ನಾನಾ ಹಿಂಸೆಗಳಿಗೆ ಗುರಿಪಡಿಸಿದ್ದಾರು. ಈ ಮೊದಲು ಅವರು ಹಾಗೆಯೇ ಮಾಡಿದ್ದಾರೆ. ಅವರಿಗೆ ಹಡೆದ ತಾಯಿಯ ಮೇಲೆ ಕೂಡಾ ಪ್ರೀತಿ ಇಲ್ಲ. ಮಮತೆ ಇಲ್ಲ!" ಎಂದನು ಪಿಂಗಳ.

"ನಿನ್ನ ಈ ಎಲ್ಲಾ ಕಷ್ಟಗಳಿಗೂ ಕಾರಣ ನೀನು ಭಲ್ಲೂಕಕೇತು ಆವಾಹನೆಯ ಮಂತ್ರವನ್ನು ಮರೆತದ್ದೇ. ಇಕೋ, ಆ ಮಂತ್ರವನ್ನು ನಾನು ನೆನಪುಮಾಡಿ ಕೊಡುತ್ತೇನೆ. ಇನ್ನು ಮೇಲೆ ಮರೆಯಬೇಡ. ಅದು ನಿನಗೆ ಯಾವಾಗಲೂ ಕ್ಷೇಮವಾಗಿರುತ್ತದೆ" ಎಂದು ಪದ್ಮಪಾದನು ಆ ಮಂತ್ರವನ್ನು ಅವನಿಗೆ ಹೇಳಿದನು. ಈಗ ಅದು ಚೆನ್ನಾಗಿ ಪಿಂಗಳನ ನೆನಪಿನಲ್ಲಿ ಉಳಿಯುವಂತಾಯಿತು. ಆಮೇಲೆ ಪದ್ಮಪಾದನು ತನ್ನ ಕಿರುಬೆರಳಿನ ಒಂದು ಉಂಗುರವನ್ನು ಪಿಂಗಳನಿಗೆ ಕೊಟ್ಟು, "ಈ ಉಂಗುರವನ್ನು ಜಾಗರೂಕತೆಯಿಂದ ಕಾಪಾಡಿಕೊಂಡಿರು. ನಿನಗೆ ಎಂದಾದರೂ ಸರಿಯೆ, ನನ್ನನ್ನು ನೋಡಬೇಕೆಂದು ಕಾಣುವಾಗ, ಮನಸ್ಸಿನಲ್ಲಿ ನನ್ನನ್ನು ನೆನೆಯುತ್ತ ಈ ಉಂಗುರವನ್ನು ಮುಟ್ಟಿದರೆ ಸಾಕು; ನಾನು ನಿನ್ನ ಮುಂದೆ ಬಂದು ನಿಲ್ಲುತ್ತೇನೆ" ಎಂದನು.

"ಪದ್ಮಪಾದರೇ! ನಿಮ್ಮ ಮೇಲು ಎಂದೆಂದೂ ಮರೆಯಲಾಗದಂಥಾದ್ದು. ನಿಮ್ಮ ಸಹಾಯದಿಂದ ತಿರುಗಿ ನಾನು ನನ್ನ ಹೆತ್ತಮ್ಮನನ್ನು ನೋಡಲಿದ್ದೇನೆ. ನೀವು ಕೂಡಾ ನನ್ನೊಂದಿಗೆ ಅವಂತಿ ನಗರಕ್ಕೆ ಬರುವಿರಾ? ನಿಮ್ಮನ್ನು ನೋಡಿದರೆ ಅಮ್ಮನಿಗೆ ಬಹಳ ಸಂತೋಷವಾಗುತ್ತದೆ. ದಯಮಾಡಬೇಕು" ಎಂದನು ಪಿಂಗಳ.

ಪದ್ಮಪಾದನು ಪಿಂಗಳನನ್ನು ವಾತ್ಸಲ್ಯದಿಂದ ನೋಡುತ್ತ, "ಪಿಂಗಳಾ, ನೀನು ಮಾಡಿದ ಉಪಕಾರವನ್ನು ನಾನು ಮಾತ್ರ ಹೇಗೆ ಮರೆತುಹೋಗಲು ಸಾಧ್ಯ? ನಿನ್ನ ಸಹಾಯದಿಂದ ತಾನೇ ನಾನು ಮಹಾ ಮಾಯನ ವಸ್ತುಗಳನ್ನು ಜಯಿಸಿಕೊಳ್ಳಲು ಸಾಧ್ಯವಾಯಿತು? ಆದ್ದರಿಂದ ಎಂದೋ ಒಂದು





ದಿನ ನಾನು ನಿನ್ನ ಮನೆಗೆ ಅತಿಥಿಯಾಗಿ ಬಂದು, ನಿನ್ನ ತಾಯಿಯ ದರ್ಶನ ಮಾಡಿಕೊಳ್ಳುತ್ತೇನೆ. ಪ್ರಸ್ತುತ ನಾನು ಈ ವರ್ತಕರನ್ನೆಲ್ಲ ಬಿಟ್ಟು, ಒಂಟಿಯಾಗಿಯೇ ತೀರ್ಥಯಾತ್ರೆಗೆ ಹೋಗಬೇಕಾಗಿದೆ. ಹೊರಡುತ್ತೇನಪ್ಪಾ!" ಎಂದು ಹೇಳಿದ ಮರುಕ್ಷಣದಲ್ಲೇ ಪಿಂಗಳನ ಅನುಮತಿಗೂ ನಿಲ್ಲದೆ ಅವನು ಮಾಯವಾಗಿ ಹೋದನು.

ಪಿಂಗಳನು ಹಸನ್‌ಗೋರಿಯ ಹತ್ತಿರ ಹೋಗಿ, ತಾನಿನ್ನು ತನ್ನ ದೇಶಕ್ಕೆ ಹೋಗುತ್ತೇನೆಂದು ಅನುಮತಿ ಕೇಳಿದನು.

ಆ ಮಾತು ಕೇಳಿ ಹಸನ್‌ಗೋರೀ ಆಶ್ಚರ್ಯಪಡುತ್ತ, "ಪಿಂಗಳಾ! ಅದೇನು ಹೇಳಿದಿ ನೀನು? ಯಾವುದೋ ಪಕ್ಕದ ಊರಿಗೆ ಹೋಗುವ ಹಾಗೆ ಅಷ್ಟು ಹಗುರಾಗಿ ಹೇಳುವಿ! ನಿನ್ನ ದೇಶ ಎಷ್ಟು ಸಾವಿರ ಮೈಲು ದೂರವೆಂದು ಗೊತ್ತಿದೆಯೇನು? ದಿಕ್ಕಾದರೂ ಗೊತ್ತೆ?" ಎಂದು ಕೇಳಿದನು.

ಪಿಂಗಳನು ಕಿರುನಗು ತೋರಿಸುತ್ತ, "ಹಸನ್ ಗೋರಿಯವರೇ, ಅದು ಎಷ್ಟು ದೂರವೋ, ಯಾವ ದಿಕ್ಕೋ ಅದೊಂದೂ ನನಗೆ ಗೊತ್ತಿಲ್ಲ. ಆದರೆ ನನಗಿರುವ ಶಕ್ತಿಸಾಮರ್ಥ್ಯ ಎಂತಹುದೆಂದು ನಿಮಗೂ ಗೊತ್ತಿಲ್ಲ. ದಯಮಾಡಿ ಅಲ್ಲಿ ಕಾಣುವ ಆ ಬಂಡೆಗಲ್ಲಿನ ಆಚೆಗೆ ನನ್ನೊಂದಿಗೆ ಬನ್ನಿರಿ. ನಿಮಗೆ ಒಬ್ಬ ಅದ್ಭುತ ವ್ಯಕ್ತಿಯ ದರ್ಶನ ಮಾಡಿಸುತ್ತೇನೆ. ನಿಮ್ಮ ಸೈನಿಕರೂ, ಮರುಭೂಮಿಯ ಕಳ್ಳರೂ ಅವನನ್ನು ನೋಡುವುದು ಒಳ್ಳೆಯದಲ್ಲ" ಎಂದು ದೊಡ್ಡದಾದೊಂದು ಬಂಡೆಯ ಕಡೆಗೆ ನಡೆದನು. ಕುತೂಹಲದಿಂದ ಹಸನ್‌ಗೋರಿಯೂ ಅವನನ್ನು ಅನುಸರಿಸಿ ಹೋದನು.

ಪಿಂಗಳನು ಮನಸ್ಸಿನಲ್ಲಿ ಭಲ್ಲೂಕಕೇತು ಮಂತ್ರವನ್ನು ಜಪಿಸಿದ್ದೇ ತಡ, ಭಲ್ಲೂಕಕೇತು ಅಲ್ಲಿ ಪ್ರತ್ಯಕ್ಷನಾಗಿ ಅವನ ಮುಂದೆ ಮಂಡಿಯೂರಿ, "ಪ್ರಭೂ! ಏನಪ್ಪಣೆ? ಬಹಳ ಕಾಲದಿಂದ ಈ ಸೇವಕನನ್ನು ಮರೆತುಬಿಟ್ಟಿರಿ, ಏಕೆ?" ಎಂದನು ನೆಲ ನಡುಗುವ ಗಡಸು ದನಿಯಿಂದ.

ಭಲ್ಲೂಕಕೇತುವಿನ ಭಯಂಕರಾಕಾರವನ್ನು ನೋಡಿದ ಕೂಡಲೇ ಹಸನ್‌ಗೋರೀ ದೊಡ್ಡ ಕಂಠದಿಂದ ಕೂಗಿ ಅಲ್ಲಿಂದ ಓಡಿಹೋಗಲು ನೋಡಿದನು. ಪಿಂಗಳನು ಅವನ ಕೈಹಿಡಿದು ನಿಲ್ಲಿಸಿ, "ಹಸನ್, ನಿಮಗೆ ಇವನಿಂದ ಯಾವ ಭಯವೂ ಇಲ್ಲ. ಈ ಭಲ್ಲೂಕಕೇತು ನನ್ನ ವಿಧೇಯ ಸೇವಕ" ಎಂದನು.

"ಈ ಘೋರ ರಾಕ್ಷಸನು ನಿನ್ನ ಸೇವಕನೇ?" ಎಂದು ಹಸನ್‌ಗೋರೀ ಮತ್ತಷ್ಟು ಬೆರಗಾದನು.

"ಹೌದು" ಎಂದು ಪಿಂಗಳನು ಭಲ್ಲೂಕಕೇತುವಿನ ಹೆಗಲ ಮೇಲೆ ಏರಿ ಕುಳಿತು, "ಅಯ್ಯಾ, ಹಸನ್ ಗೋರೀಯವರೇ! ಹಸಿವೆ, ನೀರಡಿಕೆಯಿಂದ ಸಾಯಲಿರುವ ನನ್ನನ್ನು ನೀವು ರಕ್ಷಿಸಿದ್ದೀರಿ. ಅದನ್ನೆಂದೂ ಮರೆಯಲಾರೆ! ಇನ್ನು ಅಪ್ಪಣೆ ಕೊಡಿರಿ!"

ಎಂದು ಕೈಮುಗಿದು, ಭಲ್ಲೂಕಕೇತುವಿನೊಂದಿಗೆ, "ಭಲ್ಲೂಕಕೇತೂ ! ನನ್ನನ್ನು ಅವಂತಿ ನಗರದೊಳಗಿನ ನನ್ನ ಮನೆಗೆ ಒಯ್ದುಬಿಡಪ್ಪಾ !" ಎಂದನು.

ಭಲ್ಲೂಕಕೇತು ಭೂಮಿ ನಡುಗುವಂತೆ ಒಂದು ಹೂಂಕಾರ ಮಾಡಿ, ಆಕಾಶಕ್ಕೇರಿ ಸಾಗತೊಡಗಿದನು. ಸಮುದ್ರಗಳನ್ನು, ನದಿಗಳನ್ನು, ಬೆಟ್ಟಗಳನ್ನು ದಾಟಿ ದಾಟಿ, ಸೂರ್ಯೋದಯದ ಹೊತ್ತಿಗೆ ಪಿಂಗಳನನ್ನು ಅವಂತೀ ನಗರದೊಳಗಿನ ಅವನ ಮನೆಯ ಸಮೀಪ ದಲ್ಲಿ ಕೆಳಗಿಳಿಸಿದನು. ಪಿಂಗಳನು ಜನ್ಮಭೂಮಿಗೆ ಅಡ್ಡ ಬಿದ್ದನು. ತೀರಾ ಶಿಥಿಲಾವಸ್ಥೆಯಲ್ಲಿದ್ದ ಮನೆಯನ್ನು ನೋಡಿದ ಕೂಡಲೇ ಪಿಂಗಳನು ಗಾಬರಿಯಾಗಿ ನಿಂತನು. ಆಮೇಲೆ ತನ್ನ ಮನೆಯ ಬಾಗಿಲಿನ ಹತ್ತಿರ ಹೋದನು. ಅಲ್ಲಿ ಸೊರಗಿ ತೀರಾ ನಿತ್ರಾಣ ಳಾಗಿರುವ ತನ್ನ ತಾಯಿಯನ್ನು ನೋಡಿ ಅವನಿಗೆ ಹೊಟ್ಟೆ ಮಗುಚಿಕೊಂಡು ಬಂದಿತು. ಉಕ್ಕುವ ದುಃಖವನ್ನು ನುಂಗಿಕೊಳ್ಳುತ್ತಾ ಪಿಂಗಳನು "ಅಮ್ಮಾ !" ಎಂದು ಕೂಗಿ ತಾಯಿಯ ಹತ್ತಿರ ಕುಳಿತು ಅಪ್ಪಿಕೊಂಡನು.

ತಾಯಿ ಕ್ಷಣಕಾಲ ಬೆರಗಾಗಿ, ಕೂಡಲೇ ತನ್ನ ಕುಮಾರನ ಗುರುತು ಹಿಡಿದು, "ಮಗನೇ ! ನನ್ನ ಮುದ್ದು ಮಗನೇ ! ಕಣ್ಮಣಿ ಕಂದಾ ! ಪಿಂಗಳಾ ! ನೀನು ಬದುಕಿಯೇ ಇರುವೆಯಾ ? ಆಹಾ ! ನಾನೆಷ್ಟು ಅದೃಷ್ಟವಂತೆಯೋ !..." ಎಂದು ಅಳಲು ತೊಡಗಿದಳು.

ಪಿಂಗಳನು ತಾಯಿಯನ್ನು ಸಮಾಧಾನ ಪಡಿಸುತ್ತ, "ಅಮ್ಮಾ, ಇನ್ನು ನಮಗೆ ಯಾವ ಕಷ್ಟವೂ ಬರು ವುದಿಲ್ಲ. ಹಾಳು ಮೂಳು ಬುದ್ಧಿಯ ಅಣ್ಣಂದಿರು ಎಲ್ಲಿದ್ದಾರೆ ಹೇಳು" ಎಂದು ಕೇಳಿದನು.

"ಅದನ್ನೇನು ಕೇಳುತ್ತೀಯಪ್ಪಾ ? ಅವರು ನಿನಗೆ ಮಾಡಿದ ದ್ರೋಹಕ್ಕೆ ಶಿಕ್ಷೆ ಅನುಭವಿಸಿಕೊಂಡಿದ್ದಾರೆ. ಅವರಿಬ್ಬರನ್ನೂ ರಾಜನು ಕಾರಾಗಾರದಲ್ಲಿ ಬಂಧಿಸಿ



ದ್ದಾನೆ. ಆ ಕತ್ತಲೆ ಕೋಣೆಯೊಳಗೆ ಕೈಕಾಲಾಡಿಸ ಲಾಗದೆ ನರಳಿಕೊಂಡಿದ್ದಾರೆ" ಎಂದಳು ತಾಯಿ.

"ಹಾಗಾದರೆ ನಿನಗೆ ಈ ದೀನ ಸ್ಥಿತಿ ಏಕೆ? ನಾನು ಬಿಟ್ಟುಹೋದ ಧನವೂ, ಮಹತ್ವದ ಚೀಲವೂ ಇದೆಯಷ್ಟೆ ?" ಎಂದು ಕೇಳಿದನು ಪಿಂಗಳ.

ತಾಯಿ ಉಕ್ಕಿ ಬರುವ ದುಃಖವನ್ನು ನುಂಗಿ ಕೊಳ್ಳುತ್ತ, "ಅಪ್ಪಾ, ಅವುಗಳಿಗಾಗಿಯೇ ರಾಜನು ನಿನ್ನ ಅಣ್ಣಂದಿರನ್ನು ಕಾರಾಗೃಹದಲ್ಲಿ ಇಡಿಸಿದ್ದು..." ಎಂದು ಪಿಂಗಳನು ಹಡಗಿನವನಿಗೆ ಮಾರಲ್ಪಟ್ಟ ಮೇಲೆ, ಅಣ್ಣಂದಿರ ಪ್ರವರ್ತನೆಗಳನ್ನೆಲ್ಲಾ ಒಂದೊಂ ದಾಗಿ ಹೇಳಿದಳು. ಪಿಂಗಳನು ಕಟಕಟನೆ ಹಲ್ಲು ಕಡಿದನು. ಅವಳ ಮಾತನ್ನು ಕೇಳುತ್ತಿದ್ದಂತೆ ಪಿಂಗಳನು ಕೋಪದಿಂದ ನಡುಗತೊಡಗಿದನು.

"ಅಮ್ಮಾ ! ನಮ್ಮ ಅವಂತಿಯ ರಾಜ ಅಷ್ಟು ದುಷ್ಟನೇ ! ಅವನಿಗೆ ತಕ್ಕ ಪ್ರತೀಕಾರ ಮಾಡದೆ ಬಿಡಲಾರೆ !" ಎಂದು ಅವನು ಹೊರಗೆ ಹೋಗಿ

ಭಲ್ಲೂಕಕೇತುವನ್ನು ಕರೆದನು. ಅಲ್ಲೇ ಇದ್ದ ಭಲ್ಲೂಕಕೇತು, "ಪ್ರಭೂ! ಏನಪ್ಪಣೆ?" ಎಂದು ಅವನ ಮುಂದೆ ಕೈಕಟ್ಟಿ ನಿಂತನು.

"ಭಲ್ಲೂಕಕೇತೂ! ಈ ಅವಂತಿ ನಗರದ ರಾಜನು ನನ್ನ ಅಣ್ಣಂದಿರಿಬ್ಬರನ್ನು ಕಾರಾಗೃಹದಲ್ಲಿರಿಸಿದ್ದಾನೆ. ಅವರನ್ನು ಕೂಡಲೇ ಇಲ್ಲಿಗೆ ತರಬೇಕು. ಅಷ್ಟೇ ಅಲ್ಲ, ಆ ರಾಜನ ಕೋಶಾಗಾರದಲ್ಲಿರುವ ಧನವನ್ನು ಕೂಡಾ ಇಲ್ಲಿಗೆ ತಂದುಹಾಕಬೇಕು. ನಮ್ಮ ಮಹಿಮೆಯ ಚೀಲ ಕೂಡಾ ಅವನ ಹತ್ತಿರವಿದೆ, ಅದನ್ನು ಕೂಡಾ ಹುಡುಕಿ ತಂದುಬಿಡು" ಎಂದು ಅಪ್ಪಣೆ ಕೊಟ್ಟನು ಪಿಂಗಳ.

"ಅಪ್ಪಣೆ ಪ್ರಭೂ!" ಎಂದು ಭಲ್ಲೂಕಕೇತು ಮಾಯವಾಗಿ ಪಾತಾಳ ಮಾರ್ಗದಿಂದ ರಾಜಭವನದೊಳಗೆ ಸೇರಿ, ಧನಾಗಾರದೊಳಗಿದ್ದ ಪೂರ್ತಿ ಧನವನ್ನೂ, ಮಹತ್ವದ ಚೀಲವನ್ನೂ ತೆಗೆದುಕೊಂಡು, ಕಾರಾಗಾರದೊಳಗೆ ಹೋದನು.

ಭಯಂಕರ ರೂಪದ ಭಲ್ಲೂಕಕೇತುವನ್ನು ನೋಡಿದ ಕೂಡಲೇ ಪಿಂಗಳನ ಅಣ್ಣಂದಿರಾದ ಜೀವದತ್ತ, ಲಕ್ಷದತ್ತರು ಕಿಟ್ಟನೆ ಕಿರಿಚಿ, ಮೂರ್ಛೆ ಹೋದರು. ಭಲ್ಲೂಕಕೇತು ಅವರಿಬ್ಬರನ್ನೂ ಒಂದೊಂದು ಕಂಕುಳಿಗೆ ಅಂಟಿಸಿಕೊಂಡು, ಬೆಟ್ಟದಂಥ ಧನರಾಶಿಯನ್ನು ಬೆನ್ನ ಮೇಲೆ ಆಕರ್ಷಿಸಿ ಹೇರಿಕೊಂಡು, ಪಿಂಗಳನ ಹತ್ತಿರ ಬಂದು, "ಮಹಾಪ್ರಭು! ಇದೋ ನೀವು ಹೇಳಿದ್ದೆಲ್ಲವೂ ತಂದಿದ್ದೇನೆ. ಇವರೇ ನಿಮ್ಮ ಅಣ್ಣಂದಿರು!" ಎಂದು ತಂದುದನ್ನೆಲ್ಲಾ ಪಿಂಗಳನ ಮುಂದೆ ಇರಿಸಿದನು.

ಮೂರ್ಛೆ ಬಿದ್ದಿರುವ ಕುಮಾರರನ್ನು ನೋಡಿದ ಕೂಡಲೇ ತಾಯಿಯ ಮನಸ್ಸು ಪುತ್ರ ವಾತ್ಸಲ್ಯದಿಂದ ಕರಗಿಹೋಯಿತು. ಅವಳು ಅವರ ಮುಖಗಳಿಗೆ ನೀರು ಚಿಮುಕಿಸಿ "ಅಪ್ಪಗಳಿರಾ! ಜೀವೂ! ಲಕ್ಷೂ!..." ಎನ್ನುತ್ತ ಕರೆದಳು.




ಮೆಲ್ಲನೆ ಜೀವದತ್ತ, ಲಕ್ಷದತ್ತರು ಕಣ್ಣು ಬಿಡಿಸಿದರು. ಇದಿರಿನಲ್ಲಿ ಅವರಿಗೆ ತಾಯಿಯೂ ಪಿಂಗಳನೂ ಕಾಣಿಸಿದ ಕೂಡಲೇ, ಒಮ್ಮೆಗೇ ಅವರ ಪ್ರಾಣ ಹಾರುವ ಹಾಗಾಯಿತು. ಅವರಿಬ್ಬರೂ ಪಶ್ಚಾತ್ತಾಪದಿಂದ ಕುದಿಯುತ್ತ, "ಅಮ್ಮಾ! ಪಿಂಗಳಾ! ನಮ್ಮನ್ನು ಕ್ಷಮಿಸು! ಕ್ಷಮಿಸು. ಏನೂ ಮಾಡಬೇಡಿ! ನಮಗೆ ಸಾಕಾಗುವಷ್ಟು ಬುದ್ಧಿ ಬಂತಪ್ಪಾ ಬಂತು! ನಾವು ಮಾಡಿದ ಪಾಪಗಳಿಗೆ ಆ ಕಗ್ಗತ್ತಲೆಯಲ್ಲಿ ಪ್ರಾಯಶ್ಚಿತ್ತ ಅನುಭವಿಸಿದೆವು" ಎಂದರು. ಅವರ ದೀನ ಮುಖಗಳ ಮಾತುಗಳನ್ನು ಕೇಳಿ ಪಿಂಗಳನಿಗೆ ಕೂಡಾ ಅವರ ಮೇಲೆ ಕನಿಕರ ಒಸರತೊಡಗಿತು. ಆದರೂ ಅವನು ಅವರಿಬ್ಬರನ್ನೂ, ಕೋಪದಿಂದ ನೋಡುತ್ತ, "ನಿಮ್ಮಿಬ್ಬರಿಗಿಂತ ಹೆಚ್ಚಿನ ನೀಚರು, ದ್ರೋಹಿಗಳು ಲೋಕದಲ್ಲಿ ಬೇರೆ ಯಾರೂ ಇರಲಾರರು. ನಿಮ್ಮನ್ನು ಈ ಕ್ಷಣದಲ್ಲೇ ನನ್ನ ಸೇವಕ ಭಲ್ಲೂಕಕೇತುವಿನಿಂದ ಪಾತಾಳದಲ್ಲಿ

ಹುಗಿಸಿಬಿಡುತ್ತೇನೆ. ಏನೋ ಸಹೋದರರೆಂಬ ಪಾಶದಿಂದ, ಪುಣ್ಯವತಿಯಾದ ತಾಯಿಯ ಕರುಳಿನ ಅಂಶ ಸ್ವಲ್ಪವಾದರೂ ನಿಮ್ಮಲ್ಲಿದ್ದೀತೆಂಬ ಗೌರವ ದಿಂದ ಇದೊಂದು ಸಾರಿ ಮಾತ್ರ ನಿಮ್ಮನ್ನು ಕ್ಷಮಿಸುತ್ತೇನೆ. ಮುಂದೆ ನೀವು ಎಂದಾದರೂ ನನಗಾಗಲೀ, ಅಮ್ಮನಿಗಾಗಲೀ ದ್ರೋಹಕ್ಕೆ ತಲೆ ಹಾಕಿದಿರೋ, ನಿಮ್ಮನ್ನು ಚೂರು ಚೂರು ಮಾಡಿಸುತ್ತೇನೆ. ಇದು ನಿಜ!" ಎಂದನು.

"ಇಲ್ಲ ತಮ್ಮಾ, ಇಲ್ಲ. ನಮಗೆ ನಿಜಕ್ಕೂ ಬುದ್ಧಿ ಬಂದಿದೆ!" ಎಂದರು ಜೀವದತ್ತ ಲಕ್ಷದತ್ತರು ಏಕ ಕಂಠದಿಂದ.

ಪಿಂಗಳನು ಮಹಿಮೆಯ ಚೀಲವನ್ನು ತಾಯಿಗೆ ಕೊಡುತ್ತಾ, "ಊಟದ ಸಮಾಚಾರ ನೋಡಮ್ಮ!" ಎಂದನು. ಅಣ್ಣಂದಿರನ್ನು ಸ್ನಾನಮಾಡಿ ಬನ್ನಿರೆಂದು ಕಳುಹಿಸಿ, ಭಲ್ಲೂಕಕೇತುವನ್ನು ಕರೆದು "ಭಲ್ಲೂಕ ಕೇತೂ, ನದಿಯ ತೀರದಲ್ಲಿ ಕಾಣುವ ಆ ಮರಗಳ ಗುಂಪಿನಲ್ಲಿ, ರಾತ್ರಿ ಕಳೆದು ಬೆಳಗಾಗುವಷ್ಟರಲ್ಲಿ ನನಗೊಂದು ಒಳ್ಳೆಯ ಮನೆಯನ್ನು ಕಟ್ಟಿಸಿಬಿಡಬೇಕು. ಆ ಭವನವು ಎಲ್ಲ ವಿಧದಲ್ಲಿಯೂ ಅವಂತೀ ರಾಜಭವನವನ್ನು ಮಿಂಚಿ ಹೋಗುವಂತೆ ಕಾಣಬೇಕು. ಇದೇ ನೀನು ನನಗೆ ಮಾಡಬೇಕಾದ ದೊಡ್ಡ ಕೆಲಸ. ತಿಳಿಯಿತೆ?" ಎಂದನು.

"ಅಪ್ಪಣೆ, ಪ್ರಭೂ! ಭಲ್ಲೂಕ ಪರ್ವತಗಳಲ್ಲಿರುವ ನನ್ನ ಅನುಚರರಲ್ಲಿ ದೊಡ್ಡ ದೊಡ್ಡ ಶಿಲ್ಪಿಗಳಿದ್ದಾರೆ. ಕೋ ಅಂದರೆ ಕ್ಷಣಮಾತ್ರದಲ್ಲಿ ಬಂದುಬಿಡುತ್ತಾರೆ. ಈಗಲೇ ಕೆಲಸ ಪ್ರಾರಂಭ ಮಾಡಲು ಅಪ್ಪಣೆಯೆ?" ಎಂದನು ಭಲ್ಲೂಕಕೇತು.

"ಹಗಲು ಹೊತ್ತಿನಲ್ಲಿ ನಿನ್ನ ರಾಕ್ಷಸ ಗಣಗಳೊಂದಿಗೆ ಇಲ್ಲಿ ಬಂದುಬಿಟ್ಟರೆ, ನಿಮ್ಮನ್ನೆಲ್ಲ ನೋಡಿ ಪ್ರಜೆಗಳೆಲ್ಲಾ ಜೀವಬಿಟ್ಟಾರು. ಈ ಅವಂತೀ ನಗರದಲ್ಲಿರಲು ಹಕ್ಕಿ, ಹರಣೆ ಕೂಡಾ ಹೆದರಿಯಾವು. ಪ್ರಜೆಗಳೆಲ್ಲಾ ನಗರ ಬಿಟ್ಟು ಓಡಿಹೋದ ಮೇಲೆ ನಾನು ಇಲ್ಲಿ ಹೇಗಿರಲಿ? ಹಾಗೆಲ್ಲಾ ವಿಪರೀತವಾಗಬಾರದು. ಆದ್ದರಿಂದ ಸೂರ್ಯಾಸ್ತಮಾನವಾದ ಮೇಲೆ ರಾತ್ರಿಯಲ್ಲೇ ನಿನ್ನ ಕೆಲಸ ನಡೆಯಲಿ. ಬೆಳಗಾದ ಮೇಲೆ ಭವನದ ಹೊರತು ಭವನ ಕಟ್ಟಿದವರೊಬ್ಬರೂ ಇಲ್ಲೆಲ್ಲೂ ಇರಬಾರದು" ಎಂದನು ಪಿಂಗಳ.

"ಅಪ್ಪಣೆ ಪ್ರಭೋ! ಭಲ್ಲೂಕ ಪರ್ವತಗಳಿಗೆ ಹೋಗಿ, ನನ್ನ ಅನುಚರರಿಗೆ ಈ ಸಂಗತಿಯನ್ನು ಹೇಳಿ, ಹೊತ್ತು ಮುಳುಗಿದ ಕೂಡಲೇ ಕೆಲಸವನ್ನು ಪ್ರಾರಂಭಿಸುತ್ತೇನೆ" ಎಂದು ಹೇಳಿ ಭಲ್ಲೂಕಕೇತು ಮಾಯವಾಗಿ ಹೋದನು.

(ಮುಂದಿನ ಸಂಚಿಕೆಯಲ್ಲಿ ಮುಕ್ತಾಯವಾಗುತ್ತದೆ)






## ೧೮

[ಪಿಂಗಳನು ಅವಂತೀ ನಗರವನ್ನು ತಲಪುವಾಗ ತಾಯಿಯ ಸ್ಥಿತಿ ಬಹಳ ಹೀನವಾಗಿತ್ತು. ಅವಳಿಂದ ಎಲ್ಲಾ ಸಂಗತಿಯನ್ನೂ ತಿಳಿದು, ಭಲ್ಲೂಕಕೇತುವಿನ ಮೂಲಕ ಸೆರೆಯಲ್ಲಿ ತನ್ನ ಅಣ್ಣಂದಿರನ್ನೂ, ರಾಜನ ಧನಾಗಾರದ ಧನವನ್ನೂ, ಮಹತ್ವದ ಚೀಲವನ್ನೂ ತನ್ನ ಬಳಿಗೆ ತರಿಸಿದನು. ತರುವಾಯ ಪಿಂಗಳನ ಆಜ್ಞೆಯಂತೆ ಭಲ್ಲೂಕಕೇತು. ತನ್ನ ಪಿಶಾಚಿ ಅನುಚರರೊಂದಿಗೆ ಒಂದು ಅಪೂರ್ವ ಭವನವನ್ನು ಕಟ್ಟಿಸಲು ತಯಾರಾದನು.]

ಕೆತ್ತಲಾದ ಕೂಡಲೇ ಭಲ್ಲೂಕಕೇತು ತನ್ನ ಭಯಂಕರ ರೂಪದ ಬೇರೆ ಬೇರೆ ಶಿಲ್ಪ ಪಿಶಾಚಗಳೊಂದಿಗೆ ಮನೆ ಕಟ್ಟಬೇಕಾದ ಜಾಗದಲ್ಲಿ ಸೇರಿದನು. ನಾಯಕನಾದ ಭಲ್ಲೂಕಕೇತು ಹೇಳಿದಂತೆ ನದೀ ತೀರದ ವಿಸ್ತಾರ ಪ್ರದೇಶವನ್ನು ಪಿಶಾಚ ಕರ್ಮಚಾರಿಗಳು ನಿಮಿಷ ಮಾತ್ರದಲ್ಲಿ ಹಸನು ಮಾಡಿದರು, ಅದರ ಬೆನ್ನಿಗೇ ನೂರಾರು ಸಾವಿರಾರು ಪಿಶಾಚಿಗಳು ಅಡಿಪಾಯ ತೋಡಿ ಗೋಡೆ ಎಬ್ಬಿಸಿದುವು. ಕೂಲೀ ಪಿಶಾಚಿಗಳು ಬಹು ಚುರುಕಾಗಿ ಓಡಾಡಿದುವು. ಕಲ್ಲು ಕೆತ್ತುವ ಶಬ್ದಗಳು, ಸಿಗಿಯುವ ಶಬ್ದ ಒಂದೇ ಸಮನೆ ಹೊರಟುವು. ಅದರೊಂದಿಗೇ ಕಟ್ಟಡವು ನಾಲ್ಕು ಸುತ್ತಲಿಂದಲೂ ಕ್ಷಣೇ ಕ್ಷಣೇ ಏರುತ್ತಿತ್ತು.

ಇದ್ದಕ್ಕಿದ್ದ ಹಾಗೆ ನದೀ ತೀರದಲ್ಲಿ ಹೊರಡುವ ಆ ವಿಚಿತ್ರ ಶಬ್ದಗಳ ಕೋಲಾಹಲವನ್ನು ಕೇಳಿ, ಅವಂತಿ ನಗರದ ಕಾವಲುಗಾರರು ಬೆರಗಾಗಿ ಅಲ್ಲಿ ಏನು ನಡೆಯುವುದೆಂದು ನೋಡಲು ಹೋದರು. ಅವರೊಂದಿಗೆ ಅನೇಕರು ಸೇರಿಕೊಂಡರು. ಹಾಗೆ ಬಂದ ಅನೇಕರನ್ನು ಭಲ್ಲೂಕಕೇತುವಿನ ಪಿಶಾಚಿಗಳು ಹಿಡಿದು ಎಳೆದು ಬಲವಂತವಾಗಿ ಭವನ ನಿರ್ಮಾಣದ ಕೆಲಸದಲ್ಲಿ ಕೂಲಿಗಳಾಗಿ ಉಪಯೋಗಿಸಿಕೊಂಡರು.



ಅವುಗಳನ್ನು ಇದಿರಿಸಿ ಕತ್ತೀ ಕಠಾರಿ ಎತ್ತಿದ ರಾಜ ಭಟರನ್ನು ಗುದ್ದಿ ಗುದ್ದಿ ಮೆತ್ತಗೆ ಮಾಡಿ ಓಡಿಸಿ ಬಿಟ್ಟವು. ಈ ಅದ್ಭುತ ವಾರ್ತೆ ಊರೊಳಗೆಲ್ಲಾ ಬಿರುಗಾಳಿಯಂತೆ ಹರಡಿತು.

ಬೆಳಗಾಗಿ ಸೂರ್ಯೋದಯವಾಗುವ ಹೊತ್ತಿಗೆ ದಿವ್ಯವೂ ಭವ್ಯವೂ ಆದ ಮಹಾ ಭವನವು ಆಕಾಶವನ್ನು ಮುದ್ದಿಸುವಂತೆ ಕಂಗೊಳಿಸುತ್ತಿತ್ತು. ಅರಮನೆಯನ್ನು ನಾಚಿಸುವಂತಿರುವ ಮತ್ತೊಂದು ರಾಜಭವನ. ಪಿಂಗಳನು ತಾಯಿಯನ್ನೂ ಅಣ್ಣಂದಿರನ್ನೂ ಕರೆದುಕೊಂಡು ಆ ಭವನದೊಳಗೆ ಪ್ರವೇಶ ಮಾಡಿದನು. ಬಾಲಸೂರ್ಯನ ಎಳೆಕಿರಣಗಳ ಕಾಂತಿಯಲ್ಲಿ ಆ ಭವನವು ಬಂಗಾರದ ನೀರನ್ನು ಅಭಿಷೇಕ ಮಾಡಿಸಿಕೊಂಡಂತೆ ಥಳಥಳನೆ ಹೊಳೆಯುತ್ತಿದ್ದಿತು. ಅದನ್ನು ನೋಡಲು ಕುತೂಹಲ ತುಂಬಿದ ಜನರು ಎಲ್ಲೆಲ್ಲಿಂದಲೋ ಸಾಲುಸಾಲಾಗಿ ಬರುತ್ತಿದ್ದರು. ಪಿಂಗಳನು ಭಲ್ಲೂಕಕೇತುವಿನ ಅನುಚರರಲ್ಲಿ ಐವತ್ತು ಮಂದಿಯನ್ನು ಮಾತ್ರ ತನಗೂ ತನ್ನ ಭವನಕ್ಕೂ ಕಾವಲು ಕಾಯಲು ಇಟ್ಟುಕೊಂಡು, ಉಳಿದೆಲ್ಲರನ್ನೂ ಭಲ್ಲೂಕ ಪರ್ವತಕ್ಕೆ ಕಳುಹಿಸಿ ಬಿಟ್ಟನು. ಭಲ್ಲೂಕಕೇತು ಮೊತ್ತ ಭವನದ ಆವರಣದ ಬಾಗಿಲನ್ನು ತೆರೆದಿಟ್ಟು ಕಬ್ಬಿಣದ ಸರಳುಗಳಿರುವ ಬಾಗಿಲನ್ನು ಮುಚ್ಚಿ, ಬದಿಯಲ್ಲೊಂದು ಕಲ್ಲಿನ ಕುರ್ಚಿಯಲ್ಲಿ ಕಾವಲು ಕಾಯಲು ವಿಗ್ರಹದ ಹಾಗೆ ಕುಳಿತುಕೊಂಡನು. ಅವನನ್ನು ನೋಡಿದರೆ ಭವನದೊಳಗೆ ಹೋಗಲು ಯಾರಿಗೂ ಧೈರ್ಯಬಾರದು.

ಅಷ್ಟು ಹೊತ್ತಿಗೆ ಅತ್ತ ಅವಂತೀ ನಗರದ ರಾಜಭವನದಲ್ಲಿ ಕಲಕಲರವವೇಳಲು ಪ್ರಾರಂಭವಾಗಿತ್ತು. ರಾತ್ರಿಯಲ್ಲಿ ಭಲ್ಲೂಕಕೇತು ಕಟ್ಟಿಸಿಕೊಂಡಿದ್ದ ಭವನವನ್ನು ನೋಡಲು ಹೋಗಿ, ಅಲ್ಲಿದ್ದ ಪಿಶಾಚಿಗಳ ಕೈಯಲ್ಲಿ ಪೆಟ್ಟು ತಿಂದು ಓಡಿಬಂದ ರಕ್ಷಕಭಟ ನಾಯಕನೊಬ್ಬನು, ಮಂತ್ರಿಯ ಹತ್ತಿರ ಹೋಗಿ ತನ್ನ ಅನುಭವವನ್ನು ಮೊರೆ ಇಟ್ಟುಕೊಂಡನು. ಅಲ್ಲಿ ಏಳುತ್ತಿರುವ ಭವನವನ್ನೂ, ಕೆಲಸ ಮಾಡುತ್ತಿರುವ ಅದ್ಭುತ ಶಿಲ್ಪಿಗಳನ್ನೂ, ಕೂಲೀ ಪಿಶಾಚಿಗಳನ್ನೂ ಕುರಿತು ಹೇಳುವುದನ್ನು ಕೇಳಿ, ಮಂತ್ರಿಗೆ ಅವನ ಬುದ್ಧಿಯ ಸ್ಥಿಮಿತದ ಮೇಲೆ ಸಂದೇಹ ಬಂದಿತು. ಯಾವುದೋ ಕೆಟ್ಟ ಸ್ವಪ್ನ ನೋಡಿ ಭ್ರಮಿಸಿ ಹುಚ್ಚನಾದನೇನೋ ಅನಿಸಿತು.

"ನೀನೇನು ಬೊಗುಳವಿಯೆಂದು ನಿನಗೆ ಅರ್ಥವಾಗುತ್ತಿದೆಯೇ? ರಾತ್ರಿ ಕುತ್ತಿಗೆ ಗುಳಿಯುವರೆಗೂ ಕುಡಿದು ಏನೇನೋ ಹುಚ್ಚುಚ್ಚು ಕನಸು ಕಂಡಿಯೇನು? ಮನೆಗೆ ಹೋಗಿ ಸ್ವಲ್ಪ ಹೊತ್ತು ಬಿದ್ದುಕೋ. ಮತ್ತು ಇಳಿದ ಮೇಲೆ ಬಂದು ಮಾತಾಡುವಿಯಂತೆ. ಸುಮ್ಮನೆ ಹರಟೆ ನಮ್ಮನ್ನೆಲ್ಲ ಹುಚ್ಚರಾಗುವಂತೆ ಮಾಡಬೇಡ. ನಿನ್ನ ಈ ಬೊಗಳು ಮಹಾರಾಜರಿಗೆ ತಿಳಿದರೆ ನಿನಗೆ ಕಾರಾಗಾರ ಶಿಕ್ಷೆ ತಪ್ಪದು" ಎಂದನು ಮಂತ್ರಿ.

"ನನಗೆ ಹಾಗೇನೂ ಆಗಿಲ್ಲ ಮಹಾ ಮಂತ್ರಿಯವರೇ. ಅದಾವುದಕ್ಕೂ ವ್ಯವಧಿಯಿಲ್ಲದಂತೆ ರಾತ್ರಿಯ ದೃಶ್ಯವಿತ್ತು. ನಮ್ಮ ಭಟರಲ್ಲಿ ಕೆಲವರು ಅವರಿಗೆ ಖೈದಿಗಳಾಗಿ ಸಿಕ್ಕಿಬಿದ್ದಿದ್ದಾರೆ. ಆ ಪಿಶಾಚಿಗಳ ಕೈಯಲ್ಲಿ ಪೆಟ್ಟು ತಿಂದು ತಪ್ಪಿಸಿಕೊಂಡು ಓಡಿ ಬಂದವನು ನಾನೊಬ್ಬನೇ ಅಲ್ಲ. ಅಷ್ಟೆಲ್ಲ ಬೇಡ. ನೀವೇ ಕೋಟೆಬುರುಜಿನ ಮೇಲೆ ಹತ್ತಿ ನದಿಯ ಕಡೆಗೆ ನೋಡಿರಿ. ಅಲ್ಲಿರುವ ಮಹಾ ಭವನವು ನಿಮಗೇ ಕಾಣುತ್ತದೆ!" ಎಂದನು ರಕ್ಷಕ ಭಟರ ನಾಯಕ.

ಮಂತ್ರಿ ಬೇಗ ಬೇಗನೆ ಕೋಟೆಯ ಬುರುಜು ಹತ್ತಿ ನೋಡಿದನು. ದೂರದಲ್ಲಿ ನದೀ ತೀರದಲ್ಲಿ ಈವರೆಗೆ ಕಾಣದ ಭವ್ಯವಾದ ಮಹಾ ಭವನದ ದೃಶ್ಯವು ಕಾಣುತ್ತಿದ್ದಿತು. ಅವನ ಆಶ್ಚರ್ಯಕ್ಕೆ ಮೇರೆಯಿಲ್ಲದೆ ಹೋಯಿತು! "ಇದೇನು ಅದ್ಭುತ!" ಎಂದುಕೊಂಡು ತಾನು ನಿದ್ದೆಯಲ್ಲಿರುವೆನೋ, ಎಚ್ಚರದಲ್ಲಿರುವೆನೋ ಎಂದು ತಲೆ ಕೊಡರಿಕೊಳ್ಳುತ್ತ ಮಂತ್ರಿ ಬುರುಜಿನಿಂದ ಕೆಳಗಿಳಿದು ಬಂದನು.

ಆಗ ಕೋಶಾಧಿಕಾರಿ ಲಬೊಲಬೋ ಬೊಬ್ಬಿಡುತ್ತಾ ಓಡಿ ಬಂದು, "ಅಯ್ಯೋ! ಮಹಾ ಮಂತ್ರಿಯವರೇ! ಸರ್ವನಾಶವಾಯಿತು! ಕೋಶಾಗಾರದಲ್ಲಿ ಬಿಡಿಗಾಸು ಕೂಡಾ ಇಲ್ಲ! ಗುಡಿಸಿ ಒರೆಸಿ ಹೋದ ಹಾಗೆ ಭಾರಿ ಕಳ್ಳತನವಾಗಿದೆ! ಹೇಗಾಯಿತೋ ಗೊತ್ತಾಗುವುದಿಲ್ಲ!" ಎಂದನು.

"ಆ! ಕೋಶಾಗಾರವು ಪೂರ್ತಿ ಖಾಲಿಯೇ! ಅದರ ಕಾವಲುಗಾರರೇನಾದರು? ಕರೆ ಅವರನ್ನೆಲ್ಲಾ! ಅವರೇನು ನಿದ್ದೆ ಮಾಡಿಕೊಂಡಿದ್ದರೋ? ಅಥವಾ ಕುಡಿದು ಕುಪ್ಪಳಿಸಿ ಕುಣಿಯಲು ಹೋದರೋ?" ಎಂದು ಗರ್ಜಿಸಿದನು ಮಂತ್ರಿ.

"ಕಾವಲಿನವರದು ಯಾವ ತಪ್ಪೂ ಇಲ್ಲ ಪ್ರಭುಗಳೇ. ಕೋಶಾಗಾರದ ಬಾಗಿಲು ಮುಚ್ಚಿದ್ದು



ಮುಚ್ಚಿದ ಹಾಗೆಯೇ ಇದೆ. ಬೀಗಗಳೂ ಇದ್ದ ಹಾಗೇ ಇವೆ. ಎಲ್ಲವೂ ಒಳಗಿಂದೊಳಗೇ ಮಾಯ! ಭೂಮಿಯಡಿಯಲ್ಲಿ ಏನೋ ಆಗಿರಬೇಕು" ಎಂದನು ಕೋಶಾಧಿಕಾರಿ ಆಕಾಶ ನೋಡುತ್ತ.

"ಅದು ಹೇಗೆ? ಎಲ್ಲಾದರೂ ಉಂಟೆ?" ಎಂದು ಮಂತ್ರಿ ಕೋಶಾಧಿಕಾರಿಯನ್ನು ಕಣ್ಣು ಕೆಕ್ಕರಿಸಿ ನೋಡಿ, "ಕೋಶಾಗಾರವೆಲ್ಲಾ ಪೂರಾ ಖಾಲಿ ಎನ್ನಲು ಎಷ್ಟು ಧೈರ್ಯ ನಿನಗೆ? ಈ ಮಾಯೆಗೆ ನೀನು ಅನುಭವಿಸಬೇಕಾದ್ದು ಗಲ್ಲಿನ ಶಿಕ್ಷೆ. ಗೊತ್ತಿದೆಯೋ? ಮಹಾರಾಜರ ಬಳಿಗೆ ನಡೆ! ಎಂದು ಮಂತ್ರಿ ಹೂಂಕಾರ ಮಾಡಿದನು.

ಮಂತ್ರಿ ಕೋಶಾಧಿಕಾರಿಯೊಂದಿಗೆ ರಾಜನ ಹತ್ತಿರ ಹೋದಾಗ, ಅಲ್ಲಿಯೂ ಒಂದು ಗಲಾಟೆ ಎದ್ದಿತ್ತು. ಅದೇನೆಂದು ತಿಳಿಯುವುದರೊಳಗೆ, ಕಾರಾಗಾರಾಧಿಪತಿ ಶೋಕಮುದ್ರೆಯಿಂದ "ಮಹಾ ಮಂತ್ರೀ...." ಎಂದು ಕೂಗುತ್ತಾ ಓಡಿಬಂದು, "ಮಹಾ ವಿಪತ್ತು



ನಡೆಯಿತು. ಆ ಜೀವದತ್ತ, ಲಕ್ಷದತ್ತರೆಂಬ ದೊಡ್ಡ ಖೈದಿಗಳು ಆರ್ತನಾದ ಮಾಡಿಕೊಂಡಿದ್ದವರು, ಸೆರೆಮನೆಯ ಒಳಗಿಂದೊಳಗೇ ಮಾಯವಾಗಿದ್ದಾರೆ! ನನ್ನನ್ನು ಕ್ಷಮಿಸಬೇಕು ಪ್ರಭೂ! ಕಾವಲುಗಾರರೆಲ್ಲ ಎಚ್ಚರದಲ್ಲೇ ಇದ್ದರೂ ಅವರುಗಳು ಗಾಳಿಯಾಗಿ ಹಾರಿಹೋಗಿದ್ದಾರೆ! ಬೇರೆ ರೀತಿ ಅವರು ಮಾಯವಾಗಲು ಸಾಧ್ಯವೇ ಇಲ್ಲ" ಎಂದು ಗೋಳಿಟ್ಟನು.

ಅದನ್ನು ಕೇಳಿ ಮಂತ್ರಿ ಅವನನ್ನು ಕಣ್ಣು ಕೆಕ್ಕರಿಸಿ ನೋಡುತ್ತ, "ಮುಚ್ಚುಬಾಯಿ! ಆ ಜೀವದತ್ತ ಲಕ್ಷದತ್ತರು ದೇವತೆಗಳೇನು? ಗಾಳಿಯಾಗಿ ಹಾರಿಹೋಗುವುದೆಂದರೇನೋ ಅದು? ಹುಚ್ಚ! ನೋಡದ್ದೆಲ್ಲಾ ನಮ್ಮ ಮುಂದೆ ಹೇಳುವಿಯಾ?" ಎಂದನು.

"ಅಲ್ಲಲ್ಲ! ಗಾಳಿಯಾಗಿ ಹಾರಿಹೋದದ್ದು ಅಲ್ಲ. ಮೊದಲು ಹಾಗೇ ಅಂದುಕೊಂಡು ಒಳಗೆ ಹೋಗಿ ನೋಡಿದರೆ, ಕೋಣೆಯ ಮಧ್ಯದಲ್ಲಿ ದೊಡ್ಡದೊಂದು ಗುಹೆ ಇದೆ. ಅದು ಮನುಷ್ಯರು ಮಾಡಿದ ಗುಹೆಯಂತೂ ಅಲ್ಲ. ಶಬ್ದವೇ ಇಲ್ಲದೆ ಯಾವ ರಾಕ್ಷಸರೋ ಮಾಡಿದ್ದು!" ಎಂದನು ಕಾರಾಗಾರಾಧಿಪತಿ.

ಮಂತ್ರಿ ಆಲೋಚನೆಗೆ ಬಿದ್ದನು. ನದೀ ತೀರದಲ್ಲಿ ಒಂದೇ ರಾತ್ರಿಯಲ್ಲಿ ಮಹಾ ಭವನದ ನಿರ್ಮಾಣ! ರಕ್ಷಕ ಭಟಾಧಿಕಾರಿಯ ಅನುಭವ, ಸೆರೆಮನೆಯು ವಿಚಿತ್ರ. ಇದನ್ನೆಲ್ಲ ನೋಡುವಾಗ, ಇದು ಸಾಮಾನ್ಯ ಮಾನವರ ಕೆಲಸವಲ್ಲವೆಂದು ಮಂತ್ರಿಗೆ ಅರ್ಥವಾಯಿತು. ಖೈದಿನಲ್ಲಿದ್ದ ಜೀವದತ್ತ ಲಕ್ಷದತ್ತರಿಗೆ ಪಿಂಗಳನೆಂಬ ದೊಡ್ಡ ಮಾಂತ್ರಿಕ ತಮ್ಮನಿರುವಂತೆ, ಅವನಿಗೆ ಈ ಅಣ್ಣಂದಿರು ದ್ರೋಹ ಮಾಡಿದಂತೆ ಮಂತ್ರಿಗೆ ಗೊತ್ತಿತ್ತು. "ಈಗ ನಡೆದುದೆಲ್ಲ ಮಹಾರಾಜರೊಂದಿಗೆ ಹೇಳುವುದೇ ಉಚಿತ. ಮಂತ್ರಗಾರನಾದ ಪಿಂಗಳನು ನಗರಕ್ಕೆ ತಿರುಗಿ ಬಂದಿರಬೇಕು" ಎಂದುಕೊಂಡನು ಮಂತ್ರಿ.

ರಾಜನ ಕೋಣೆಗೆ ಹೋದಾಗ, ಅಲ್ಲಿಯೂ ರಾಜನನ್ನು ಕಾಡುವ ಕಲ್ಲೋಲ ಬಯಲಾಯಿತು. "ನಿಜ ಸಂಗತಿ ಹೇಳಿರಿ. ನಿಮ್ಮೆಲ್ಲರನ್ನೂ ಶೂಲಕ್ಕೇರಿಸುತ್ತೇನೆ. ನನ್ನ ಹತ್ತಿರವಿದ್ದ ಅಮೂಲ್ಯವಾದ ಅದ್ಭುತದ ಚೀಲ ಎಲ್ಲಿಗೆ ಹೋಯಿತು?" ಎಂದು ರಾಜನು ಇದಿರಿನಲ್ಲಿ ನಿಂತಿದ್ದ ಸೇವಕರನ್ನು ಗದರಿಸಿ ಕೇಳುತ್ತಿದ್ದನು, ಅವರೆಲ್ಲಾ ರಾಜನ ಪಾಕಶಾಲೆಯ ಆಳುಗಳು. ಎಲ್ಲರೂ ಏನೂ ಹೇಳದೆ ಒಬ್ಬರನ್ನೊಬ್ಬರು ನೋಡುತ್ತ ನಡುಗಿಕೊಂಡಿದ್ದರು. ಅವರೆಲ್ಲರಿಗೂ ಭಯದಿಂದ ಬಾಯಿಯ ಪಸೆ ಪೂರಾ ಆರಿಹೋಗಿತ್ತು.

ಮಂತ್ರಿಯನ್ನು ನೋಡಿದ ಕೂಡಲೇ ಮಹಾರಾಜನು, "ಸರಿಯಾದ ಸಮಯಕ್ಕೆ ಬಂದೆ ಮಂತ್ರೀ. ಇವರೆಲ್ಲರನ್ನೂ ಕಟ್ಟಿಹಾಕಿಸಿ ಸಾಲಾಗಿ ಮಲಗಿಸಿ ಆನೆಯ ಕಾಲಿಂದ ತುಳಿಸಿಬಿಡಿರಿ. ಮಹಾ ದುಷ್ಟರು! ಕಳ್ಳರು! ನನ್ನ ಮಹತ್ವದ ಚೀಲವನ್ನು ಕದ್ದು ಬಚ್ಚಿಟ್ಟು ಕಾಣದೆ ಹೋಯಿತು ಅನ್ನುತ್ತಾರೆ! ನನ್ನ ಉಪ್ಪು

ತಿಂದು ನನಗೇ ದ್ರೋಹ ಮಾಡುತ್ತಾರೆ! ಮೊದಲು ನಾಲಗೆ ಕತ್ತರಿಸಿ ಬಿಡಿರಿ!" ಎಂದನು ಉದ್ರೇಕದಿಂದ.

"ಅಷ್ಟು ಮಾತ್ರವಲ್ಲ ಮಹಾ ಪ್ರಭೂ! ಇನ್ನೂ ಅನೇಕ ಘೋರಗಳು ನಡೆದಿವೆ. ನದೀ ತೀರದಲ್ಲಿರುವುದನ್ನು ನೋಡಿದರೆ ತಾವೇನು ಹೇಳುವಿರೋ!" ಎಂದು ಮಂತ್ರಿ ತನಗೆ ತಿಳಿದುದೆಲ್ಲವನ್ನೂ ರಾಜನೊಂದಿಗೆ ನಿವೇದಿಸಿದನು.

ಅದನ್ನೆಲ್ಲ ಕೇಳಿ ರಾಜನು ಮಹಾ ರೌದ್ರಾಕಾರನಾಗಿ, "ಹಾಗಾದರೆ ಆಲೋಚನೆ ಮಾಡಲಿಕ್ಕೇನಿದೆ? ಭವನ ರಕ್ಷಕನೊಂದಿಗೆ ಐವತ್ತು ಮಂದಿ ವೀರ ಯೋಧ ಭಟರನ್ನು ಕಳುಹಿಸು. ಆ ಹೊಸ ಭವನದಲ್ಲಿದ್ದ ಎಲ್ಲರನ್ನೂ ಹೆಡೆಮುರಿಗೆ ಕಟ್ಟಿ ಇಲ್ಲಿಗೆ ತರಲಿ! ನನ್ನ ಅನುಮತಿ ಇಲ್ಲದೆ ಹೇಗೆ ಕಟ್ಟಿದನೋ ನೋಡುತ್ತೇನೆ" ಎಂದು ಆಜ್ಞೆ ಮಾಡಿದನು.

"ಮಹಾರಾಜಾ, ಇದು ಸಾವಧಾನವಾಗಿ ಆಲೋಚಿಸಿ ಮಾಡಬೇಕಾದ ಕೆಲಸ" ಎಂದು ಮಂತ್ರಿ ಏನೋ ಹೇಳಬೇಕೆಂದಿರಲು, ರಾಜನು ತಾಳ್ಮೆಗೆಟ್ಟು ಕಸಕ್ಕನೆ ರೇಗಿ, "ನೀನು ಆ ಮೋಡಿಗಾರ ಜಾಲರಿಗೇ ರಾಜ್ಯವನ್ನು ಕೊಟ್ಟು ಅವನಿಗೆ ಮಂತ್ರಿಯಾಗಿರಬೇಕೆಂದು ನೋಡುವಿಯೇನು?" ಎಂದನು ತೀವ್ರ ಸ್ವರದಲ್ಲಿ ಕಣ್ಣು ತಿರುಗಿಸಿ.

ಮಂತ್ರಿ ಅದಕ್ಕೇನೂ ಉತ್ತರ ಕೊಡಲಿಲ್ಲ. ಆಗ ಅಲ್ಲಿಯೇ ಇದ್ದು ಇದನ್ನೆಲ್ಲ ಕೇಳುತ್ತಿದ್ದ ರಕ್ಷಕಭಟರ ಮುಖ್ಯಸ್ಥನೊಬ್ಬನು ಮುಂದೆ ಬಂದು, "ಮಹಾ ಪ್ರಭೂ! ಪಿಂಗಳನನ್ನು ಕುದುರೆಗೆ ಕಟ್ಟಿ ಎಳೆದುಕೊಂಡು ಬರಲು ನನಗೆ ಅಪ್ಪಣೆ ಕೊಡಿರಿ!" ಎಂದು ಕೇಳಿದನು.

"ಅವನನ್ನು ಕುದುರೆಗೆ ಕಟ್ಟಿ ಎಳೆಸಿಕೊಂಡು ಬಂದರೂ, ಕತ್ತೆಗೆ ಕಟ್ಟಿ ಎಳೆದುಕೊಂಡು ಬಂದರೂ ನನಗೆ ಒಂದೇ. ಅದು ಮಾತ್ರ ಸಾಲದು. ನನಗೆ ಬೇಕಾದುದು ಮಹತ್ವದ ಚೀಲ ಮತ್ತು ಧನಾಗಾರದಿಂದ ಕಳವಾಗಿ ಹೋದ ಧನ. ಅರ್ಥವಾಯಿತೆ?" ಎಂದನು ರಾಜ ಕೋಪದಿಂದ.



ರಕ್ಷಕಭಟ ಮುಖ್ಯನು, "ಅಪ್ಪಣೆ ಪ್ರಭು" ಎಂದು ಹೇಳಿ, ಸಾಯುಧರಾದ ಐವತ್ತು ಮಂದಿ ಭಟರೊಂದಿಗೆ ಪಿಂಗಳನ ಹೊಸ ಭವನದ ಕಡೆಗೆ ಹೋದನು. ಹೊರಬಾಗಿಲ ಬಳಿಯಲ್ಲಿ ಕಲ್ಲಿನ ಕುರ್ಚಿಯ ಮೇಲೆ ಕುಳಿತುಕೊಂಡು, ತೂಕಡಿಸುತ್ತಿದ್ದ ಭಲ್ಲೂಕಕೇತುವನ್ನು ನೋಡಿದ ಕೂಡಲೇ ಭಟರು ಬೆದರಿಬಿದ್ದರು.

"ಅಯ್ಯಬ್ಬೋ! ಇವನಾವನೋ ರಾಕ್ಷಸನಹಾಗಿದ್ದಾನೆ. ಹಗಲು ವೇಷಗಾರನಂತೆ ಕಾಣುತ್ತಾನೆ!" ಎಂದುಕೊಳ್ಳುತ್ತ ಭಟರ ನಾಯಕನು ಕುದುರೆಯ ಮೇಲೆ ಇದ್ದ ಹಾಗೆಯೇ ಭಲ್ಲೂಕಕೇತುವನ್ನು ಸಮೀಪಿಸಿದನು. ಅವನ ಈಟಿ ಭಲ್ಲೂಕಕೇತುವಿನ ತೋಳನ್ನು ತಿವಿಯಲು ಬಂತು. ಬಾಯಿಯಿಂದ, "ಲೋ! ಮೊದ್ದು ಬಂದೇ ಧಡಿಯಾ!



ಕಣ್ಣಿಲ್ಲದ ನೀನು ಎಂಥ ಕಾವಲುಗಾರ! ಕಿವಿಯೂ ಕೇಳಿಸದ ಕಿವುಡಾ! ಎದ್ದು ನಿಲ್ಲು!" ಎಂದನು.

ಭಲ್ಲೂಕಕೇತು ಕಣ್ಣು ತೆರೆದು ಒಂದು ಕೈಯಿಂದ ಈಟಿಯನ್ನು ಹಿಡಿದು ಮುಂದಕ್ಕೆಳೆದು, ರಕ್ಷಕಭಟನ ಸೊಂಟಕ್ಕೆ ಒಂದು ಗುದ್ದಿ ಕುಳಿತಲ್ಲೇ ಅವನ ಎರಡು ಕಾಲುಗಳನ್ನು ಹಿಡಿದು ಗೊಂಬೆಯನ್ನೆತ್ತಿದಂತೆ ಎತ್ತಿ ಗಿರಿಗಿರಿ ತಿರುಗಿಸಿ ದೂರದಲ್ಲಿ ಇರುವ ನದಿಯಲ್ಲಿ ಬೀಳುವಂತೆ ಬೀಸಿ ಒಗೆದನು.

ಇದನ್ನು ನೋಡಿದ ಕೂಡಲೇ ಉಳಿದ ರಾಜಭಟರು "ಅಯ್ಯೋ, ಅಮ್ಮೋ!" ಎಂದು ಕೂಗಿಕೊಳ್ಳುತ್ತ ಕಾಲಿಗೆ ಬಲವಿದ್ದಷ್ಟು ಬೇಗದಿಂದ ಓಡಿ ಹೋಗತೊಡಗಿದರು. ಭಲ್ಲೂಕಕೇತು ಮುಗುಳು ನಗುತ್ತ ಅವರು ಓಡುವುದನ್ನು ನೋಡಿ "ಹೂಂ" ಎಂದು ತಲೆ ಕುಣಿಸಿದನು.

ಓಡಿಹೋದ ಭಟರು ಹಾಹಾಕಾರ ಮಾಡುತ್ತ, ರಾಜನ ಹತ್ತಿರ ಹೋಗಿ ಮೇಲುಸಿರು ಕೀಳುಸಿರು ಬಿಟ್ಟುಕೊಂಡು, ತಮಗಾದ ಅನುಭವವನ್ನು ಮೊರೆಯಿಟ್ಟರು. ಅದನ್ನು ಕೇಳಿ ರಾಜನಿಗೆ ಕೋಪವು ಉರಿದುರಿದು ಬರತೊಡಗಿತು, "ಎಲೋ ಕೈಲಾಗದ ರಣಹೇಡಿಗಳೇ! ಒಬ್ಬ ಕಾಡಿನ ಮೊರಟನನ್ನು ಹಿಡಿದು ತರಲಾಗದ ನೀವೆಲ್ಲ ಏಕೆ ಬದುಕಿರಬೇಕು? ಛೀ!" ಎಂದನು.

ಆಗ ಮಂತ್ರಿ ಮುಂದೆ ಬಂದು, "ಮಹಾರಾಜಾ, ಅವಸರಪಡಬಾರದು. ಅವನು ಕಾಡುಜಾತಿ ಮನುಷ್ಯನೋ ಅಲ್ಲ ರಾಕ್ಷಸನೋ ನಮಗೆ ಗೊತ್ತಾಗಲಿಲ್ಲವಷ್ಟೆ? ಆ ಜಾಲರಿ ಪಿಂಗಳನು ಮಂತ್ರಗಾರನೆಂದು ನಮಗೆ ಗೊತ್ತಿದೆ. ಅವನು ಸಹೋದರರ ಮೋಸಕ್ಕೆ ಒಳಗಾಗಿದ್ದಾನೆ. ಅವನ ಸಂಗತಿ ಸ್ವಲ್ಪ ಯೋಚಿಸಿ ನಾವು ಮುಂದಿನ ಕೆಲಸ ಮಾಡಬೇಕು. ಹೇಗಾದರೂ ನಾವು ಆ ಪಿಂಗಳನನ್ನು ಸಂಧಿಸಿ ಮಾತಾಡುವುದು ಒಳ್ಳೆಯದು" ಎಂದು ಹೇಳಿದನು ವಿನಯದಿಂದ.

"ಅವನು ಎಂಥವನಾದರೂ ನಮ್ಮಂಥ ಮನುಷ್ಯನೆಂಬುದು ನಿಜ. ಅಂಥವನು ಅವಂತಿ ನಗರದ ರಾಜನನ್ನೇ ಧಿಕ್ಕರಿಸುವುದೆಂದರೇನು? ಅವನ ತಲೆ ಕಡಿದು ಕೋಟೆಯ ಬಾಗಿಲಿಗೆ ಕಟ್ಟಿಸಬೇಡವೆ?" ಎಂದು "ಎಲೋ ಸೇನಾನೀ! ಎಲ್ಲಿ ಸೇನಾನಿ?" ಎಂದು ರಾಜನು ಚಪ್ಪಾಳೆ ತಟ್ಟಿದನು.

"ಮಹಾರಾಜಾ!" ಎಂದು ಓಡಿಬಂದನು ಸೇನಾನಾಯಕ.

ಪಿಂಗಳನು ಕಟ್ಟಿದ ಭವನವನ್ನು ನೆಲಸಮ ಮಾಡಿ, ಅಲ್ಲಿರುವವರೆಲ್ಲರನ್ನೂ ಬಂಧಿಸಿ ತರಬೇಕೆಂದು ರಾಜನು ಅವನಿಗೆ ಕಟ್ಟಾಣತಿ ಕೊಟ್ಟನು.

ಸೇನಾನಾಯಕನಿಗೆ ಉಕ್ಕಿದ ಉತ್ಸಾಹಕ್ಕೆ ಹದ್ದಿಲ್ಲ. ಈ ನಡುವೆ ಕೆಲವು ವರ್ಷಗಳಿಂದ ಯುದ್ಧಗಳಿಲ್ಲದೆ ಹೋದುದರಿಂದ ಅವನ ತೋಳುಗಳಿಗೆ ಜಡ ಹಿಡಿದಿತ್ತು. ಈ ಆಜ್ಞೆಯಿಂದ ನದೀ ತೀರದಲ್ಲಿರುವ




ಸೊಕ್ಕಿನವರನ್ನೆಲ್ಲ ಹಿಡಿದು ಕಟ್ಟಿ ಹೊರಳಾಡಿಸಿ, ಅವರು ಕಟ್ಟಿದ ಅರಮನೆಯನ್ನು ಧ್ವಂಸ ಮಾಡು ವಂತಹ ಭಲೇ ಕೆಲಸವಿದೆಂದು ಅವನೂ ಅವನ ಸೈನಿಕರೂ ಕುಣಿದಾಡಿದರು. "ಈ ಪಿಂಗಳನಿಗೊಂದು ಚಿಕ್ಕ ಸೈನ್ಯವಿರುತ್ತಿದ್ದರೆ ಇನ್ನೂ ಒಳ್ಳೆಯದಿತ್ತು, ಬಾ ಹಾ ಬಾ ಹೀ, ಮು ಷ್ಟಾ ಮು ಷ್ಟೀ ಭಯಂಕರ ಯುದ್ಧ ಮಾಡಬಹುದಿತ್ತು!" ಎಂದುಕೊಂಡರು ಸೈನಿಕರು ಆತುರದಿಂದ.

ಇನ್ನೂರು ಮಂದಿ ಅಶ್ವಿಕರೂ, ಮುನ್ನೂರು ಮಂದಿ ಪದಾತಿಗಳೂ ಆ ಸೇನಾ ನಾಯಕನೊಂದಿಗೆ ಪಿಂಗಳನ ಭವನದ ಕಡೆಗೆ ಹೊರಟರು. ಅವರ ಗರ್ಜನೆಗಳು ಸುತ್ತು ಮುತ್ತೂ ಪ್ರತಿಧ್ವನಿಸಿದುವು.

ದ್ವಾರ ಪ್ರದೇಶದಲ್ಲಿ ಭಲ್ಲೂಕಕೇತು ನಿದ್ದೆಯಲ್ಲಿರು ವವನಂತೆ ನಟಿಸುತ್ತ, ಅರೆಗಣ್ಣಿನಿಂದ ಸೇನೆಗಳ ಬರುವಿಕೆಯನ್ನು ಗಮನಿಸಿಕೊಂಡಿದ್ದನು. ಸೇನಾ ನಾಯಕನು ಅಲ್ಲಿಗೆ ಬಂದು ಈಟಿಯನ್ನು ಅವನ ಕಡೆಗೆ ಗುರಿ ಹಿಡಿದು, "ಏಯ್ ಕಾಡು ಕೋತಿ ಮುಸುಡಾ! ಎಲ್ಲಿದ್ದಾನೆ ಪಿಂಗಳ? ಬೇಗನೇ ಕರೆ, ಏಳು!" ಎಂದನು.

ಭಲ್ಲೂಕಕೇತು ಆಗಲೇ ಎಚ್ಚರಕ್ಕೆ ಬಂದವನಂತೆ ಎದ್ದು ನಿಂತು ಮೈಮುರಿದು, ಸೇನಾ ನಾಯಕನನ್ನು ನೋಡಿ, "ಯಾರದು? ನನ್ನ ನಿದ್ದೆಯನ್ನು ಕೆಡಿಸಿದ ಮಾನವಾಧಮ ನೀನೇ ಏನು?" ಎಂದನು ಕೋಪ ದಿಂದ ಗುರುಗುಟ್ಟುವಂತೆ.

ಆ ಪ್ರಶ್ನೆಯಿಂದ ಸೇನಾ ನಾಯಕನು ಈಟಿಯ ನ್ನೆತ್ತಿ ಕುದುರೆಯ ಮೇಲಿದ್ದಂತೆಯೇ ಕುದುರೆಯನ್ನು ಅವನ ಮೇಲೆ ಹಾರಿಸಿದನು. ಭಲ್ಲೂಕಕೇತು ಸ್ವಲ್ಪ ಮೇಲೆ ಹಾರಿ, ಎರಡೂ ಕೈಗಳಿಂದಲೂ ಸೇನಾ ನಾಯಕನನ್ನು ಬಾಚಿ ಹಿಡಿದು ಒತ್ತಿ ಎತ್ತಿ ಅಮುಕಿ ಕೊಂಡೇ ತನ್ನ ಕಲ್ಲು ಕುರ್ಚಿಯಲ್ಲಿ ಕುಳಿತನು. ಕುದುರೆ ಪಕ್ಕಕ್ಕೆ ಹೊರಳಿ ಬಿದ್ದಿತು.

ಅಷ್ಟಾದ ಕೂಡಲೇ ಸೈನಿಕರೆಲ್ಲರೂ ಬಗೆಬಗೆಯ ಆಯುಧಗಳೊಂದಿಗೆ ಅಲ್ಲಿಗೆ ಓಡಿಬಂದರು. ಆಗಲೇ ಭಲ್ಲೂಕಕೇತು ಚಪ್ಪಾಳೆ ತಟ್ಟಿದನು. ಮರುಕ್ಷಣದಲ್ಲಿ ಭಲ್ಲೂಕಕೇತುವಿನ ಪಿಶಾಚಾನುಚರರು ಕಲ್ಲಿನ ಆಯುಧ ಗಳನ್ನು ಹಿಡಿದುಕೊಂಡು ಹೊರಗೆ ಬಂದರು. ಭಲ್ಲೂಕಕೇತು ಅವರಿಗೆ ರಾಜಭಟರನ್ನು ತೋರಿಸಿ, "ಅವರೆಲ್ಲರನ್ನೂ ಹಿಡಿದು ನಜ್ಜುಗುಜ್ಜು ಮಾಡಿ ಹಾಕಿರಿ!" ಎಂದನು.

ಭಲ್ಲೂಕಕೇತುವಿನ ಅನುಚರರು ಅಶ್ವಿಕರುಗಳ ಮೇಲೆಯೂ ಪದಾತಿಗಳ ಮೇಲೆಯೂ ಬಿದ್ದು ಹೊಡೆದು ಗುದ್ದಿ ಹಿಂಡಿ ಬಿಸುಡುತ್ತ ಬೀಭತ್ಸಗೊಳಿ ಸಿದರು. ಈ ದೃಶ್ಯವನ್ನು ಭವನದ ಮೂರನೇ ಅಂತಸ್ತಿನಲ್ಲಿ ನೋಡುತ್ತಿದ್ದ ಪಿಂಗಳನು ಕೆಳಗೆ ಬಂದು, ಭಲ್ಲೂಕಕೇತುವಿನ ಕೈಯಲ್ಲಿ ಸಿಕ್ಕಿಕೊಂಡಿದ್ದ ಸೇನಾ ನಾಯಕನಿಗೆ ಕೇಳಿಸುವಂತೆ ಹೀಗೆಂದನು: "ದುರಾಶೆ ಹಿಡಿದ ನಮ್ಮ ರಾಜನು ನನ್ನ ತಾಯಿಯನ್ನು

ರಕ್ಷಿಸದೆ ಕಷ್ಟಪಡಿಸಿದನು. ಆದಕ್ಕಾಗಿ ನಾನು ಈ ಬಗೆಯ ಅಮಾನುಷ ಶಕ್ತಿಗಳನ್ನು ಉಪಯೋಗಿಸ ಬೇಕಾಯಿತು. ಉಳಿದ ವಿಷಯಗಳಲ್ಲಿ ನಾನು ರಾಜನಿಗೆ ವಿಧೇಯನೇ."

ಆಮೇಲೆ ಪಿಂಗಳನ ಆಜ್ಞೆಯಂತೆ ಭಲ್ಲೂಕಕೇತು ಸೇನಾ ನಾಯಕನನ್ನು ಬಿಟ್ಟನು. ಅವನು ಕುಂಟುತ್ತಾ ಅಳಿದುಳಿದ ಸೈನಿಕರೊಂದಿಗೆ ರಾಜನ ಬಳಿಗೆ ಹಿಂದಿರು ಗಿದನು. ನಡೆದ ಸಂಗತಿ ಪೂರಾ ರಾಜನಿಗೆ ಗೊತ್ತಾ ಯಿತು. "ಮಂತ್ರೀ, ಇದು ಬಹಳ ಅವಮಾನಕರ ವಾದ ವಿಷಯ. ಸಾವೋ ಬದುಕೋ, ನಾನೇ ಸ್ವತಃ ಸೈನ್ಯವನ್ನು ನಡೆಸಿ ಆ ಪಿಂಗಳನನ್ನು ಇದಿರಿಸು ತ್ತೇನೆ. ನಾನು ಆ ಯುದ್ಧದಲ್ಲಿ ಸತ್ತರೆ, ನನ್ನ ಏಕಮಾತ್ರ ಕುಮಾರಿಯನ್ನು ನೀನೇ ಕಾಪಾಡಿ, ಯೋಗ್ಯ ವರನೊಂದಿಗೆ ಮದುವೆ ಮಾಡು" ಎಂದನು.

ಮಂತ್ರಿ ತಲೆದೂಗುತ್ತ, "ಪ್ರಭೂ! ಆ ಪಿಂಗಳನು ಸೇನಾನಿಯೊಂದಿಗೆ ಹೇಳಿದ ಮಾತುಗಳನ್ನು ಆಲೋ ಚಿಸಬೇಕು. ತಾವು ಕೋಪಿಸದಿದ್ದರೆ ನಾನೊಂದು ಮಾತು ಹೇಳುತ್ತೇನೆ" ಎಂದನು.

"ಹೇಳು" ಎಂದನು ರಾಜ.

"ಪಿಂಗಳನು ಒಳ್ಳೆಯ ಗುಣದವನೆಂದು ನಾನು ವಿಚಾರಿಸಿ ತಿಳಿದಿದ್ದೇನೆ. ಯುವಕನೂ ಹೌದು, ಯಾವ ರಾಜಕುಮಾರನಿಗೂ ಸರಿಹೊಂದುವ ಧೀರನೂ ನಿಜ. ಐಶ್ವರ್ಯದಲ್ಲಿ, ಶೌರ್ಯ ಸಾಹಸ ಗಳಲ್ಲಿ ಅವನಿಗೆ ಅವನೇ ಸಾಟಿ. ಆದುದರಿಂದ ರಾಜಕುಮಾರಿಯನ್ನು ಅವನಿಗೇ ಕೊಟ್ಟು ವಿವಾಹ ಮಾಡುವುದರ ಮೂಲಕ ನಿಮಗೂ, ರಾಜ್ಯಕ್ಕೂ ಕ್ಷೇಮವೆಂದು ನನ್ನ ಅಭಿಪ್ರಾಯ". ಎಂದನು.

ರಾಜನು ಸ್ವಲ್ಪ ಆಲೋಚಿಸಿ, "ನಿನ್ನ ಅಭಿಪ್ರಾಯ ನಿಜ, ಒಪ್ಪುತ್ತೇನೆ. ಮಂತ್ರೀ" ಎಂದನು ಸಂತೋಷದಿಂದ.

ಮಂತ್ರಿ ಸರ್ವ ಲಾಂಛನಗಳೊಂದಿಗೆ ಹೋಗಿ, ಪಿಂಗಳನನ್ನೂ, ಅವನ ತಾಯಿಯನ್ನೂ ನೋಡಿ ಮಾತಾಡಿ, ರಾಜನ ಕೋರಿಕೆಯನ್ನು ತಿಳಿಸಿದನು. ರಾಜಕುಮಾರಿಯನ್ನು ಕುರಿತು ಕೇಳಿ ತಿಳಿದಿದ್ದ ಪಿಂಗಳನು ಈ ವಿವಾಹಕ್ಕೆ ಸಂತೋಷದಿಂದ ತನ್ನ ಒಪ್ಪಿಗೆಯನ್ನು ಸೂಚಿಸಿದನು.

ಮುಂದೆ ಕೆಲವೇ ದಿನಗಳಲ್ಲಿ ಮಹಾ ವೈಭವ ದಿಂದ ರಾಜಕುಮಾರಿಯೊಂದಿಗೆ ಪಿಂಗಳನಿಗೆ ಮದುವೆ ಯಾಯಿತು. ಮಹಾ ಮಾಂತ್ರಿಕ ಪದ್ಮಪಾದನು ವಿವಾಹಕ್ಕೆ ಬಂದು ವಧೂವರರಿಗೆ ಆಶೀರ್ವಾದ ಮಾಡಿದನು. ರಾಜನು ಕಾಲಗತಿ ಹೊಂದಿದ ಮೇಲೆ ಪಿಂಗಳನೇ ಅವಂತಿಯ ರಾಜನಾಗಿ, ಪ್ರಜೆಗಳ ಪ್ರೀತಿಗೆ ಪಾತ್ರನಾಗುವಂತೆ ಬಹುಕಾಲ ರಾಜ್ಯವನ್ನು ಪಾಲಿಸಿದನು. (ಮುಗಿಯಿತು)

